# ನಾಗರಿಕ ನೀತಿ ಸಾರ.

ಲೇಖಕರು :

**ಶ್ರೀ ಎಸ್. ವ್ಹಿ. ಪಾಟೀಲ.** (ಲಕ್ಕೀಹಾಳ)

ಎಮ್. ಎ.; ಎಲ್‌ಎಲ್. ಬಿ.; ಬಿ. ಟಿ.

ಪ್ರಿನ್ಸಿಪಾಲ, ಶ್ರೀ ಸಿದ್ಧೇಶ್ವರ ಹಾಯಸ್ಕೂಲ, ವಿಜಾಪುರ.

**ಬೆಲೆ: ೨—೦—೦**

# ಬರಹಗಾರನ ಅರಿಕೆ.

ಈಗಲೆ ಕನ್ನಡದಲ್ಲಿ ನಾಗರಿಕ ನೀತಿಯ ಬಗ್ಗೆ ಕೆಲವು ಪುಸ್ತಕಗಳಿವೆ. ಆದರೆ ಆಂಗ್ಲ ಭಾಷೆಯಲ್ಲಿರುವಂತೆ ವಿವಿಧ ದೃಷ್ಟಿಕೋನಗಳಿಂದ ಬರೆಯಲ್ಪಟ್ಟ ವೈಜ್ಞಾನಿಕ ಗ್ರಂಥಗಳು ಕನ್ನಡದಲ್ಲಿಲ್ಲ. ನಾಗರಿಕ ನೀತಿಯ ಬಗ್ಗೆ ಕನ್ನಡದಲ್ಲಿರುವ ಪುಸ್ತಕಗಳೆಲ್ಲ ಪರೀಕ್ಷೆಯ ದೃಷ್ಟಿಯಿಂದ ಬರೆದವುಗಳು. ಹೀಗೆ ಬರೆದ ಪುಸ್ತಕಗಳು ಬಹುತರವಾಗಿ ವೈಜ್ಞಾನಿಕ ಮಟ್ಟಕ್ಕೆ ಬರಲಾರವು. ಇದು ಸಹ ಎಸ್. ಎಸ್. ಸಿ. ಪರೀಕ್ಷೆಯ ಅಭ್ಯಾಸ ಪತ್ರಿಕೆಯನ್ನು ಅನುಸರಿಸಿ ಬರೆದ ಒಂದು ಪುಸ್ತಕ. ಅಂದಮೇಲೆ ಇದಕ್ಕೂ ವೈಜ್ಞಾನಿಕ ಪರಿಪೂರ್ಣತೆಯಿಲ್ಲ. ಆದರೆ ಬರಹಗಾರನು ಇದರಲ್ಲಿ ಒಂದು ತಾತ್ವಿಕ ದೃಷ್ಟಿಕೋನವನ್ನು ಪ್ರತಿಪಾದಿಸಿದ್ದಾನೆ. ಆ ದೃಷ್ಟಿಕೋನವು ಇಂತಿದೆ:— "ಮಾನವನ ಜೀವನ ಹೋರಾಟದ ಪ್ರತಿಫಲವಾಗಿ ಎಲ್ಲ ಸಂಘ ಸಂಸ್ಥೆಗಳೂ ಜನ್ಮವೆತ್ತಿವೆ; ಅವನ ಸ್ವಾತಂತ್ರ್ಯಾಭಿಲಾಷೆಯನ್ನು ತೃಪ್ತಿಪಡಿಸಲು ಅವು ಅಸ್ತಿತ್ವದಲ್ಲಿವೆ." ಈ ಮಾತನ್ನು ಇಂದಿನ ಪ್ರಗತಿಪರ ರಾಜಕಾರಣ ತಜ್ಞರ ಸಿದ್ಧಾಂತಗಳ ಬಲದಿಂದ ಸಮರ್ಥಿಸಲಾಗಿದೆ.

ಆಂಗ್ಲ ಭಾಷೆಯಲ್ಲಿ ರಾಜನೀತಿ ಶಾಸ್ತ್ರವನ್ನು ಅಭ್ಯಸಿಸಿದ ಹಿಂದೀಯರು ಮಾತೃಭಾಷೆಯಲ್ಲಿ ಪುಸ್ತಕಗಳನ್ನು ಬರೆಯುವಾಗಲೂ ಪಾಶ್ಚಿಮಾತ್ಯ ವಾತಾವರಣವನ್ನೇ ನಿರ್ಮಿಸುವುದುಂಟು. ಹೀಗೆ ಮಾಡುವುದು ಸಹಜವೆನಿಸಿದರೂ ಅನಿವಾರ್ಯವಲ್ಲ. ಪಠ್ಯ ಪುಸ್ತಕಗಳ ಮುಖಾಂತರ ಬಾಲಕರಿಗೆ ನಮ್ಮ ನಾಡಿನ ಉತ್ತಮ ಸಾಂಪ್ರದಾಯಗಳ ಪರಿಚಯ ಮಾಡಿಕೊಡಲು ಅವಕಾಶವಿದೆ. ಈ ಮಾತನ್ನು ಅನುಲಕ್ಷಿಸಿ ಈ ಪುಸ್ತಕದಲ್ಲಿ ಬರುವ ವಿಷಯ ವಿವೇಚನೆಯಲ್ಲಿ ನಾಡಿನ ಐತಿಹಾಸಿಕ ಸಂಗತಿಗಳನ್ನು ಬಳಸಿಕೊಳ್ಳಲು ಪ್ರಯತ್ನಿಸಿದೆ.

ನಾಗರಿಕ ನೀತಿಯನ್ನು ಅಭ್ಯಸಿಸುವ ಕನ್ನಡ ಬಾಲಕರು ಈ ಪುಸ್ತಕದಲ್ಲಿ ಬರುವ ಹಲವು ಸಮಸ್ಯೆಗಳ ಬಗ್ಗೆ ವಿಮರ್ಶಾತ್ಮಕ ದೃಷ್ಟಿಯಿಂದ ಆಳವಾಗಿ ವಿಚಾರಿಸುವುದೊಳಿತು. ಹೀಗೆ ವಿಚಾರಿಸದೆ ಪರರ ಅಭಿಪ್ರಾಯಗಳನ್ನು ಸ್ವೀಕರಿಸುವುದು ಅಷ್ಟು ಜಾಣತನವಲ್ಲ. ಅಂಥವರಿಂದ ನಾಗರಿಕ ಸ್ವಾತಂತ್ರ್ಯಕ್ಕೆ ಗಂಡಾಂತರವಿದೆ. ಜನರು ನಾಗರಿಕ ನೀತಿಯ ಬಗ್ಗೆ ಪರಿಜ್ಞಾನವುಳ್ಳವರಾದರೆ ಮಾತ್ರ ನಾಡಿನ ಏಳ್ಗೆಯಾಗುವ ಭರವಸೆಯಿದೆ.

ವಿಜಯಪುರ.
೩೦—೫—೧೯೫೩.

S. V. Patil.

## ಪ್ರಕರಣಗಳು

## ಪ್ರಕರಣ ೧. ವಿಷಯ ಪ್ರವೇಶ.

೧. ನಾಗರಿಕನಾರು ?
೨. ಕಾಡು ಮನುಷ್ಯನು ನಾಗರಿಕನಾದ ಬಗೆ.
೩. ಇಂದಿನ ನಾಗರಿಕನ ಜೀವನ.
೪. ನಾಗರಿಕತ್ವದ ಗುರುತು.
೫. ನಾಗರಿಕತ್ವದ ವಿಜ್ಞಾನದ ಬಗೆ.
೬. ನಾಗರಿಕತ್ವದ ವಿಜ್ಞಾನದ ಮಹತ್ವ.

# ನಾಗರಿಕ ನೀತಿ ಸಾರ

## ಪ್ರಕರಣ ೧.

## ವಿಷಯ ಪ್ರವೇಶ

೧. ನಾಗರಿಕನಾರು?

'ನಾಗರಿಕ' ಎಂಬ ಶಬ್ದದ ಮೂಲ ಅರ್ಥ ನಗರದ ನಿವಾಸಿಯೆಂದಾಗುತ್ತದೆ. ಆದರೆ ಈ ಸಂಕುಚಿತ ಅರ್ಥವು ಇಂದು ಬಳಕೆಯಲ್ಲಿಲ್ಲ. ಒಂದು ರಾಜ್ಯದ ಹಕ್ಕು ಬಾಧ್ಯತೆಗಳಿಗೆ ಅರ್ಹತೆಯನ್ನು ಪಡೆದು ಅದಕ್ಕೆ ನಿಷ್ಠಾವಂತರಾಗಿ ಬಾಳುವವರೆಲ್ಲರೂ ಆ ರಾಜ್ಯದ ನಾಗರಿಕರೆಂದು ಗಣಿಸಲಾಗುತ್ತದೆ. ಅವರು ಹಳ್ಳಿಗರೇ ಇರಲಿ ಪಟ್ಟಣಿಗರೇ ಇರಲಿ, ಎಲ್ಲರೂ ನಾಗರಿಕರೆಂದೇ ಭಾವಿಸಲಾಗುತ್ತದೆ.

'ನಾಗರಿಕ' ನೆಂದರೆ ಸುಧಾರಿಸಿದ ವ್ಯಕ್ತಿಯೆಂದು ಇನ್ನೊಂದು ಅರ್ಥ. ಈ ಅರ್ಥವು ಕೆಲಮಟ್ಟಿಗೆ ಸಮಂಜಸವಿದೆ. ಏಕೆಂದರೆ, ರಾಜ್ಯಗಳನ್ನು ಕಟ್ಟಿಕೊಂಡು ಬಾಳುವ ಇಂದಿನ ನಾಗರಿಕನು ಹಿಂದಿನ ಕಾಲದಲ್ಲಿ ಅತ್ತಿಂದಿತ್ತ ಅಲೆಯುತ್ತ ಜೀವಿಸುತ್ತಿದ್ದ ಕಾಡು ಮನುಷ್ಯನಿಗಿಂತಲೂ ಹೆಚ್ಚು ಸುಧಾರಿಸಿದ್ದುದು ನಿಚ್ಚಳವಿದೆ. ಮನುಷ್ಯನು ಮುಖ್ಯವಾಗಿ ಮೂರು ರಂಗಗಳಲ್ಲಿ ಪ್ರಗತಿ ಸಾಧಿಸಿದ್ದಾನೆ:— (೧) ಮನುಷ್ಯನ ಜ್ಞಾನ ಮಟ್ಟವು ಹಿರಿದಾಗಿದೆ. (೨) ಅವನ ಸೌಂದರ್ಯಾಭಿರುಚಿಯು ಅನಂತ ರೂಪಗಳಲ್ಲಿ ಪ್ರಕಟವಾಗುತ್ತಿದೆ. (೩) ಅವನ ನೈತಿಕ ಜೀವನವೂ ಹೆಚ್ಚು ವಿವೇಕಯುಕ್ತವಾಗಿದೆ. ಆದರೆ ಈ ಪ್ರಗತಿಯು ಈ ಮೂರು ರಂಗಗಳಲ್ಲಿ ಎಲ್ಲೆಡೆಯಲ್ಲಿಯೂ ಎಲ್ಲ ಕಾಲದಲ್ಲೂ ಒಂದೇ ಗತಿಯಿಂದ ನಿರಾತಂಕವಾಗಿ ನಡೆದಿದೆಯೆಂದು ಇಲ್ಲಿ ಪ್ರತಿಪಾದಿಸುತ್ತಿಲ್ಲ. ಒಂದಾನೊಂದು ಕಾಲದ ಕಾಡು ಮನುಷ್ಯನು ಕ್ರಮೇಣ ಜ್ಞಾನ, ಕಲೆ ಮತ್ತು ನೀತಿಗಳನ್ನು ಹೆಚ್ಚಿಸಿಕೊಂಡು ಇಂದು ನಾಗರಿಕ ಅವಸ್ಥೆಗೆ ಮುಟ್ಟಿದ್ದಾನೆಂದು ಮಾತ್ರ ಇಲ್ಲಿ ಸೂಚಿಸಬಯಸುತ್ತದೆ.

## ೨. ಕಾಡು ಮನುಷ್ಯನು ನಾಗರಿಕನಾದ ಬಗೆ.

ಕಾಡು ಮನುಷ್ಯನು ನಾಗರಿಕನಾದುದು ಹೇಗೆ ಎಂಬುದೊಂದು ದೊಡ್ಡ ಇತಿಹಾಸ. ಇಲ್ಲಿ ಅದರ ಸ್ಥೂಲ ಕಾರಣಗಳನ್ನು ಮತ್ತು ಮೆಟ್ಟಲುಗಳನ್ನು ಮಾತ್ರ ಅವಗಾಹನೆಗೆ ತಂದುಕೊಳ್ಳಬಹುದು.

ಇಂದಿಗೆ ಸುಮಾರು ಎರಡೂವರೆ ಲಕ್ಷ ವರ್ಷಗಳ ಹಿಂದೆ ಮಾನವ ಕುಲವು ಉದಯಿಸಿರಬೇಕೆಂದು ಜೀವನ ಶಾಸ್ತ್ರಜ್ಞರು ತರ್ಕ ಮಾಡಿದ್ದಾರೆ. ಮಾನವನು ಮಂಗನ ಸಮೀಪದ ಬಂಧುವೆಂದು ಅವರು ಹೇಳಿದ್ದಾರೆ. ಮನುಷ್ಯನು ಪ್ರಾಣಿಜೀವನ ಪ್ರಗತಿಯ ಅಂತಿಮ ಮಟ್ಟವೆಂದು ಅವರು ತೋರಿಸಿದ್ದಾರೆ. ಮನುಷ್ಯನ ಮೂಲ ಗುಣಧರ್ಮಗಳು ಅಂದಿನ ಅಂಧಃಕಾರ ಯುಗದಲ್ಲಿ ರೂಪುಗೊಂಡಿವೆ. ಆ ಯುಗದಲ್ಲಿಯೂ ಸಹ ಮನುಷ್ಯನು ತನ್ನ ಮಾನವೀಯತೆಯ ವೈಶಿಷ್ಟ್ಯದಿಂದ ಉಳಿದ ಪ್ರಾಣಿಗಳಿಗಿಂತಲೂ ಉಚ್ಚತಮ ಶ್ರೇಣಿಯಲ್ಲಿದ್ದುದು ಕಂಡುಬಂದಿದೆ. ಅಂದಿನಿಂದ ಇಂದಿನ ವರೆಗೆ ಅವನ ಗುಣಧರ್ಮಗಳು ಕಾಲ ಪರಿಸ್ಥಿತಿಗಳಿಗೆ ಅನುಗುಣವಾಗಿ ಮಾರ್ಪಾಟು ಹೊಂದುತ್ತ ಬಂದಿವೆ, ಮತ್ತು ಮಾರ್ಪಾಟು ಹೊಂದುತ್ತ ನಡೆದಿವೆ. ಎಷ್ಟೋ ಸಲ ಅವನ ಜೀವನದಲ್ಲಿ ಮತ್ತು ಅವನು ಕಟ್ಟಿದ ಸಂಸ್ಥೆಗಳ ಹಿನ್ನೆಲೆಯಲ್ಲಿ ಅವನ ಅಂಧಃಪ್ರವೃತ್ತಿಗಳು ಕಾರ್ಯ ಮಾಡುತ್ತಿರುವಂತೆ ಭಾಸವಾದರೂ ಅವನ ಜಾಗ್ರತ ವಿವೇಕವೇ ಅವನ ಪ್ರಗತಿಗೆ ಕಾರಣವಾಗಿದೆಯೆಂದು ಹೇಳಬಹುದು. ಇತರ ಪ್ರಾಣಿಗಳಿಗಿಂತಲೂ ಮನುಷ್ಯನ ದೇಹರಚನೆಯು ಹೆಚ್ಚು ಅನುಕೂಲವಾಗಿರುವುದರಿಂದ ಅದು ಅವನ ಪ್ರಗತಿಗೆ ಸಾಧಕವಾಗಿದೆಯೆಂಬ ಮಾತನ್ನು ಒಪ್ಪಿದಾಗ್ಯೂ, ಅವನ ಪ್ರಗತಿಗೆ ಅವನ ತೀಕ್ಷ್ಣ ಮಾನಸಿಕ ಬಲವೇ ಬಲವತ್ತರವಾದ ಕಾರಣವೆಂಬುದನ್ನು ಮರೆಯಲಾಗದು.

ಒಂದಾನೊಂದು ಕಾಲದಲ್ಲಿ ಮನುಷ್ಯನು ಕೇವಲ ಕುಟುಂಬ ಜೀವಿಯಾಗಿರಬೇಕು. ಕುಟುಂಬದ ಹಿರಿಯನ ಇಲ್ಲವೆ ಹಿರಿಯಳ ಅಪ್ಪಣೆಗಿಂತಲೂ ಹೆಚ್ಚು ಪ್ರಭಾವಶಾಲಿಯಾದ ಬೇರೊಂದು ಸರಕಾರವಿರಲಿಕ್ಕಿಲ್ಲ. ಬರಬರುತ್ತ ಕುಟುಂಬಗಳು ಬೆರೆತು ಬಣಗಳಾಗಿರಬೇಕು. ಋಗ್ವೇದದಲ್ಲಿ ಉಲ್ಲಿಖಿತವಾಗಿರುವ ಯದು, ಪುರು, ತುರ್ವಾಸು ಮೊದಲಾದ ಆರ್ಯರ ಗುಂಪುಗಳು ಇಂತಹ ಬಣಗಳಾಗಿದ್ದವು. ಆಗ ಮನುಷ್ಯನು ಪರಂಪರಾಗತವಾಗಿ ರೂಢವಾಗಿರುವ ನೀತಿ ನಿಯಮಗಳಿಗೆ ಒಳಪಟ್ಟು ವ್ಯವಹರಿಸಬೇಕಾಗಿತ್ತು.

ರೂಢಿಗಳನ್ನು ಉಲ್ಲಂಘಿಸುವ ವ್ಯಕ್ತಿಯನ್ನು ಅವನ ನೆರೆಹೊರೆಯವರೇ ನಿಗ್ರಹಿಸುತ್ತಿದ್ದರು. ಆಗ ಇನ್ನೂ ಅವನನ್ನು ದಂಡಿಸಬಲ್ಲ ಕೇಂದ್ರ ಪ್ರಭುತ್ವವು ತಲೆದೋರಿದ್ದಿಲ್ಲ. ಬಣಗಳು ಒಂದೇ ಪ್ರದೇಶದಲ್ಲಿ ವಾಸವಾಗಿದ್ದಿಲ್ಲ. ಬೇಟೆಯಾಡುತ್ತ, ಗಡ್ಡೆಗೆಣಸುಗಳನ್ನು ಹುಡುಕುತ್ತ, ದನಕರುಗಳನ್ನು ಮೇಯಿಸುತ್ತ ಅವು ಅತ್ತಿಂದಿತ್ತ ಅಲೆದಾಡುತ್ತಿದ್ದವು. ಮನುಷ್ಯನು ಕೃಷಿಕಲೆಯನ್ನರಿತಮೇಲೆ ಜನರು ನದೀ ತೀರಗಳಲ್ಲಿ ಶಾಶ್ವತವಾಗಿ ನೆಲೆಸಹತ್ತಿದರು. ಬೇರೆ ಬೇರೆ ಜನರು ಬೇರೆ ಬೇರೆ ವ್ಯವಸಾಯಗಳಲ್ಲಿ ತೊಡಗಿದರು. ಅವರ ಜೀವನದಲ್ಲಿ ವೈವಿಧ್ಯತೆಯೂ ವೃದ್ಧಿ ಹೊಂದಿತು. ಇವುಗಳ ಜೊತೆಗೆ ಸಮಾಜಸ್ವಾಸ್ಥ್ಯದ ಸಮಸ್ಯೆಯೂ ಹಿರಿದಾಯಿತು. ಆಗ ಸಮಾಜ ಸ್ವಾಸ್ಥ್ಯಕ್ಕೆ ಅತ್ಯಂತ ಅವಶ್ಯವಾದ ಪರಂಪರಾಗತ ನೀತಿ ನಿಯಮಗಳನ್ನು ಉಲ್ಲಂಘಿಸುವ ವ್ಯಕ್ತಿಗಳನ್ನು ದಂಡಿಸಬಲ್ಲ ಒಂದು ಕೇಂದ್ರ ಪ್ರಭುತ್ವದ ಅವಶ್ಯಕತೆಯುಂಟಾಯಿತು. ಈ ಅವಶ್ಯಕತೆಯನ್ನು ಪೂರೈಸಲು ಪ್ರಭುತ್ವಗಳು ಏರ್ಪಟ್ಟವು. ಇವೇ ರಾಜ್ಯಗಳು. ಹೀಗೆ ಮನುಷ್ಯನು ತನ್ನಮಟ್ಟಿಗೆ ತಾನು ಜೀವಿಸುವುದನ್ನು ಬಿಟ್ಟು ರಾಜ್ಯದಲ್ಲಿ ಜೀವಿಸುವ ನಾಗರಿಕನಾದನು.

ಜನರು ಇಂದು ವಿವಿಧ ರಾಜ್ಯಗಳಲ್ಲಿ ಜೀವಿಸಿದ್ದಾರೆ. ಎಲ್ಲರೂ ಒಂದಿಲ್ಲೊಂದು ರಾಜ್ಯದ ನಾಗರಿಕರಾಗಿದ್ದಾರೆ. ನಾಗರಿಕರಾದವರು ತಮ್ಮ ರಾಜ್ಯದ ಹಕ್ಕುಗಳನ್ನು ಉಪಭೋಗಿಸುತ್ತಿರುವರಲ್ಲದೆ ಅದಕ್ಕೆ ತಮ್ಮ ನಿಷ್ಠೆಯನ್ನೂ ಸಲ್ಲಿಸುತ್ತಿದ್ದಾರೆ. ಹೀಗೆ ಜನರು ತಮ್ಮ ತಮ್ಮ ರಾಜ್ಯಗಳ ಸಂಗಡ ಗಾಢವಾದ ಸಂಬಂಧ ಬೆಳೆಸಿಕೊಂಡಿದ್ದಾರೆ.

## ೩. ಇಂದಿನ ನಾಗರಿಕನ ಜೀವನ

ಇಂದಿನ ಸಮಾಜವು ಇಂದ್ರಜಾಲದಂತಿದೆ. ನಾಗರಿಕನ ಅನಂತ ಚಟುವಟಿಕೆಗಳು ಅದರ ಜೊತೆಗೆ ತಳಕು ಮಳಕು ಬಿದ್ದಿವೆ. ಒಬ್ಬನ ಜೀವನ ತೃಪ್ತಿಗಾಗಿ ಇಂದು ಅನೇಕರ ನೆರವು ಅವಶ್ಯವಿದೆ. ಒಂದು ಪಟ್ಟಣದಲ್ಲಿ ವಾಸಿಸುವ ಒಬ್ಬ ಕಾರ್ಮಿಕನ ಜೀವನದ ನಿದರ್ಶನವನ್ನು ಇಲ್ಲಿ ತೆಗೆದುಕೊಳ್ಳಬಹುದು. ಅವನು ನಸುಕಿನಲ್ಲಿ ಎದ್ದಾಗ ದೀಪಹಚ್ಚಲು ನಿಯಮಿತವಾಗಿ ಕಾರ್ಯ ಮಾಡುವ ವಿದ್ಯುತ್ ಕಂಪನಿಯ ಕೆಲಸಗಾರರ ನೆರವು ಬೇಕು. ಮುಖಮಾರ್ಜನದ ಸಲುವಾಗಿ ನೀರು ಒದಗಿಸಲು ನಗರಸಭೆಯ ನೀರಿನ

ವ್ಯವಸ್ಥೆಯ ಕೆಲಸಗಾರರ ನೆರವು ಬೇಕು. ಅನ್ನ ಅರಿವೆಗಳನ್ನು ಪೂರೈಸಲು ವ್ಯವಹಾರಸ್ಥರ ನೆರವು ಬೇಕು. ಮನೆಯಿಂದ ಗಿರಣಿಗೆ ಹೋಗಲು ವಾಹನ ಸೌಕರ್ಯ ಒದಗಿಸುವಷ್ಟು ಕೆಲಸಗಾರರ ನೆರವು ಬೇಕು. ಈ ವಾಹನಗಳು ದುರ್ಘಟನೆಗೆ ಒಳಗಾಗದಂತೆ ನಿಯಂತ್ರಿಸಲು ಪೋಲೀಸರು ಬೇಕು. ಗಿರಣಿಯಲ್ಲಿ ತನ್ನ ಕೆಲಸ ಮಾಡುವಾಗ ಇತರ ಕಾರ್ಮಿಕ ಬಂಧುಗಳ ನೆರವು ಬೇಕು. ಸಾಯಂಕಾಲ ಅವನಿಗೆ ವಿಶ್ರಾಂತಿಯೊದಗಿಸಲು ಅನೇಕ ಕಲಾವಂತರ ನೆರವು ಬೇಕು. ವೈಜ್ಞಾನಿಕ ಪ್ರಗತಿಯ ಫಲವಾಗಿ ಜಗತ್ತಿನಲ್ಲಿ ಇಂದು ಶ್ರಮ ವಿಭಜನೆಯು ಅತಿ ತೀಕ್ಷ್ಣವಾಗಿದೆ. ನಾಗರಿಕನ ಇಂದಿನ ಜೀವನವು ಪರಸ್ಪರ ಅವಲಂಬಿತವಾಗಿದೆ. ಆದುದರಿಂದ ಜೀವನದ ಒಂದು ರಂಗದಲ್ಲಿ ಅವ್ಯವಸ್ಥೆಯುಂಟಾದರೆ ಅದು ಇಡೀ ಸಮಾಜದಲ್ಲಿ ಕ್ಷೋಭೆಯನ್ನುಂಟುಮಾಡುತ್ತದೆ. ಇಂತಹ ಕ್ಷೋಭೆಯುಂಟಾಗದಂತೆ ನಾಗರಿಕರು ವಿವೇಕಯುಕ್ತರಾಗಿ ವರ್ತಿಸುವ ಕಾಲ ಬಂದಿದೆ. ಈ ದಿಸೆಯಲ್ಲಿ ನಾಗರಿಕತ್ವದ ವಿಜ್ಞಾನವು ಮಾರ್ಗದರ್ಶನ ಮಾಡಬಲ್ಲುದು.

## ೪. ನಾಗರಿಕತ್ವದ ಗುರುತು.

ನಾಗರಿಕನು ತನ್ನ ರಾಜ್ಯದ ಎಲ್ಲ ಸಾರ್ವಜನಿಕ ಹಿತದ ಚಟುವಟಿಕೆಗಳಲ್ಲಿ ವಿವೇಕಯುಕ್ತ ರೀತಿಯಿಂದ ಭಾಗವಹಿಸುವ ಅರ್ಹತೆಯೇ ನಾಗರಿಕತ್ವ. ನಾಗರಿಕನು ತನ್ನ ಕೃತಿಯಿಂದ ಜನಜೀವನದ ಮೇಲೆ ಉಂಟಾಗುವ ಒಳಿತು ಕೆಡಕುಗಳ ಬಗ್ಗೆ ನ್ಯಾಯಾನ್ಯಾಯದ ವಿಚಾರಮಾಡಿ ನಡೆಯಬೇಕಾಗುತ್ತದೆ. ಸಮಾಜಕ್ಕೆ ತಾನು ಸಲ್ಲಿಸುವ ಉಪಯುಕ್ತ ದೇಣಿಗೆಯ ಮೂಲಕ ಅವನು ತನ್ನ ವೈಯಕ್ತಿಕ ಮೇಲ್ಮೆಯನ್ನು ಸಾಧಿಸಬೇಕಾಗುತ್ತದೆ. ತನ್ನ ರಾಜ್ಯದ ಆಗುಹೋಗುಗಳಲ್ಲಿ ಸಂಪೂರ್ಣ ಆಸ್ಥೆ ವಹಿಸುವಿಕೆಯಿಂದ ಆವನು ತನ್ನ ರಾಜಕೀಯ ಸ್ಥಾನಮಾನ ಮತ್ತು ಹಕ್ಕು ಬಾಧ್ಯತೆಗಳನ್ನು ಪಡೆಯಬೇಕಾಗುತ್ತದೆ.

ನಾಗರಿಕತ್ವವೆಂದರೆ ಬಲಿಷ್ಠ ಸರಕಾರದ ಪೂಜೆಯಲ್ಲ; ಉಗ್ರ ದೇಶನಿಷ್ಠೆಯಲ್ಲ; ಪ್ರಾದೇಶಿಕ ದುರಭಿಮಾನವಲ್ಲ; ಇಲ್ಲವೆ ಯುದ್ಧಾಸಕ್ತಪ್ರವೃತ್ತಿಯೂ ಅಲ್ಲ. ಅದು ಪರರ ಸುಲಿಗೆಗೆ ಆಸ್ಪದ ಕೊಡುವುದಿಲ್ಲ. ಪ್ರತಿಯೊಬ್ಬನೂ ಗೌರವ ಉತ್ತೇಜನಗಳಿಗೆ ಅರ್ಹನೆಂದು ಅದು ಬಗೆಯುತ್ತದೆ.

ನಾಗರಿಕತ್ವವು ಕೇವಲ ಸರಕಾರದ ಚಟುವಟಿಕೆಗಳಿಂದ ತೃಪ್ತಿಹೊಂದತಕ್ಕು ದಲ್ಲ. ಅದು ಮನುಷ್ಯ ಜೀವನದ ಎಲ್ಲ ರಂಗಗಳಿಂದಲೂ ಪೋಷಣೆ ಪಡೆಯು ತ್ತದೆ. ಇಂತಹ ನಾಗರಿಕತ್ವದ ರೂಪರೇಷೆಗಳನ್ನು ಚಿತ್ರಿಸುವುದೇ ನಾಗರಿಕ ತ್ವದ ವಿಜ್ಞಾನದ ಗುರಿ.

೫. ನಾಗರಿಕತ್ವದ ವಿಜ್ಞಾನದ ಬಗೆ

ವಿಜ್ಞಾನವೆಂದರೆ ವ್ಯವಸ್ಥಿತ:ಜ್ಞಾನ. ವಿಜ್ಞಾನವು ಒಂದು ವಸ್ತುವಿನ ಹುಟ್ಟು, ಬೆಳವಣಿಗೆ, ಈಗಿರುವ ಸ್ಥಿತಿ, ಇನ್ನುಮುಂದೆ ಇರಬೇಕಾದ ರೀತಿ ಮೊದಲಾದವುಗಳನ್ನು ತಿಳಿಸಿಕೊಡುತ್ತದೆ. ಹೀಗೆ ಮಾಡುವಾಗ ಅದು ಅನು ಭವಸಿದ್ಧ ಆಧಾರಗಳ ಮೇಲೆಯೇ ತನ್ನ ಸಿದ್ಧಾಂತಗಳನ್ನು ಕಟ್ಟುತ್ತದೆ. ನಾಗ ರಿಕತ್ವದ ವಿಜ್ಞಾನವು ಸಹ ನಾಗರಿಕತ್ವದ ಉಗಮ, ಇತಿಹಾಸ, ಇಂದಿನ ಸ್ಥಿತಿ ಮತ್ತು ಇನ್ನುಮುಂದೆ ಇರಬೇಕಾದ ರೀತಿಗಳನ್ನು ವಿವೇಚಿಸುವಾಗ ಇದೇ ರೀತಿಯನ್ನು ಅನುಸರಿಸುತ್ತದೆ. ಆದರೆ ಅದು ವಿವೇಚಿಸುವ ವಸ್ತುಗಳು ನೇರವಾದ ಪ್ರಯೋಗಕ್ಕೆ ಆಸ್ಪದ ಕೊಡುವುದಿಲ್ಲ.

ನಾಗರಿಕತ್ವದ ವಿಜ್ಞಾನಕ್ಕೆ ಸಂಬಂಧಪಟ್ಟ ಎಲ್ಲ ಸಂಗತಿಗಳ ಪರಿಜ್ಞಾನ ವಿರುವ ವ್ಯಕ್ತಿಯು ಅಪರೂಪ. ಇತಿಹಾಸ, ರಾಜಕಾರಣ, ಸಮಾಜಶಾಸ್ತ್ರ, ಮಾನಸ ಶಾಸ್ತ್ರ, ಜೀವನ ಶಾಸ್ತ್ರ, ಅರ್ಥಶಾಸ್ತ್ರ, ಕಲಾಶಾಸ್ತ್ರ, ನೀತಿಶಾಸ್ತ್ರ ಮೊದಲಾದ ಎಲ್ಲ ಮಾನವೀಯ ಶಾಸ್ತ್ರಗಳು ನಾಗರಿಕ ನೀತಿಯ ಮೇಲೆ ಬೆಳಕು ಕೆಡಹುತ್ತವೆ. ಆದುದರಿಂದ ನಾಗರಿಕತ್ವದ ವಿಜ್ಞಾನವು ಇವೆಲ್ಲವುಗ ಳಿಂದಲೂ ತನಗೆ ಬೇಕಾದ ಅಂಶಗಳನ್ನು ಎತ್ತಿಕೊಳ್ಳುತ್ತದೆ. ಆದರೆ ಈ ಎಲ್ಲ ಮಾನವೀಯ ಶಾಸ್ತ್ರಗಳು ಅಭ್ಯಸಿಸುವ ವಸ್ತು ಒಂದೇ— "ಮನುಷ್ಯ." ಮನುಷ್ಯ ಸ್ವಭಾವದ ಬಗ್ಗೆ ಇಂದು ನಮಗಿರುವ ಜ್ಞಾನವು ಅಪರಿಪೂರ್ಣವಾ ಗಿದೆ. ಆದರೂ ನಮಗೆ ಕಂಡುಬಂದಿರುವ ಸಂಗತಿಗಳ ನಿರೀಕ್ಷಣೆ ಮಾಡಿ, ಹೋಲಿಸಿ ನೋಡಿ ಮತ್ತು ಊಹೆ ಮಾಡಿ ಮನುಷ್ಯ ಸ್ವಭಾವದ ಬಗ್ಗೆ ಹಲವು ಸಿದ್ಧಾಂತಗಳನ್ನು ತೆಗೆಯಲಾಗಿದೆ. ಈ ಬಗೆಯ ಸಿದ್ಧಾಂತಗಳ ಆಧಾ ರದ ಮೇಲೆ ನಾಗರಿಕ ನೀತಿಯು ಬೆಳೆದು ಬಂದ ಬಗೆಯನ್ನೂ, ನಾಗರಿಕನು ಕಟ್ಟಿದ ಸಂಸ್ಥೆಗಳ ಇರವನ್ನೂ, ನಾಗರಿಕನ ಭವಿಷ್ಯವನ್ನೂ ನಾಗರಿಕತ್ವದ ವಿಜ್ಞಾನವು ಸ್ಥೂಲವಾಗಿ ವಿವೇಚಿಸುತ್ತದೆ; ನಾಗರಿಕ ಜೀವನದ ರಹಸ್ಯವನ್ನು

ಸಾಧ್ಯವಿದ್ದ ಮಟ್ಟಿಗೆ ಅರ್ಥ ಮಾಡಿಕೊಂಡು, ಮುಂದೆ ಅದು ಯಾವ ದಿಸೆ ಯಲ್ಲಿ ಸಾಗಬಹುದೆಂಬುದನ್ನು ತರ್ಕಿಸುತ್ತದೆ.

೬. ನಾಗರಿಕತ್ವದ ವಿಜ್ಞಾನದ ಮಹತ್ವ

ನಾಗರಿಕನಿಗೆ ತನ್ನ ಸ್ಥಾನಮಾನದ ಅರಿವುಂಟಾಗಬೇಕಾದರೆ ಅವನು ಸಮಾಜದ ಅನಂತ ಸಂಘ ಸಂಸ್ಥೆಗಳ ಬಗೆಯನ್ನು ಗೊತ್ತುಮಾಡಿಕೊಳ್ಳಬೇ ಕಾಗುತ್ತದೆ. ಕುಟುಂಬ, ವಿವಾಹ, ಆಸ್ತಿ, ಜಾತಿ, ಧರ್ಮ, ವರ್ಗ, ಬಣ, ಜನಾಂಗ, ರಾಷ್ಟ್ರ ಮೊದಲಾದ ಪ್ರಾಚೀನ ಸಂಸ್ಥೆಗಳ ಹಿನ್ನೆಲೆಯನ್ನು ಅವನು ಅಭ್ಯಸಿಸಬೇಕಾಗುತ್ತದೆ. ಇದರ ಜೊತೆಗೆ ಶೈಕ್ಷಣಿಕ, ಸಾಂಸ್ಕೃತಿಕ, ತಾಂತ್ರಿಕ ಕಾರ್ಮಿಕ, ಆರ್ಥಿಕ, ರಾಜಕೀಯ ಮೊದಲಾದ ಆಧುನಿಕ ಯುಗದ ಗಣ್ಯ ಸಂಸ್ಥೆಗಳ ಇರವನ್ನೂ ಅವನು ಪರಿಶೀಲಿಸಬೇಕಾಗುತ್ತದೆ. ಇಷ್ಟರಿಂದಲೂ ಅವನ ಜ್ಞಾನ ಪರಿಪೂರ್ಣವೆನಿಸದು. ಅವನು ಈ ಎಲ್ಲ ಸಂಘಸಂಸ್ಥೆಗಳಲ್ಲಿ ತಾನು ವಹಿಸಬೇಕಾದ ಪಾತ್ರವನ್ನೂ ಅರಿತುಕೊಳ್ಳಬೇಕಾಗುತ್ತದೆ. ಶಾಸನ ನಿರ್ಮಾಣ ಕಾರ್ಯದಲ್ಲಿ ತನ್ನ ಅಂಗವೇನು, ಶಾಸನ ಪಾಲನೆಯ ಕಾರ್ಯ ದಲ್ಲಿ ತನ್ನ ಹೊಣೆಯೇನು ಎಂಬುದನ್ನು ಅವನು ತಿಳಿದಿರಬೇಕು. ಸಾರ್ವ ಜನಿಕರಿಗೆ ಹಿತಕಾರಿಯಾದ ಕಾರ್ಯಗಳನ್ನು ಸರಕಾರವು ಕೈಕೊಳ್ಳುವಂತೆ ಹೇಗೆ ಮಾಡಬೇಕು ಎಂಬ ಜಾಣ್ಮೆಯ ಜೊತೆಗೆ ಅಹಿತ ಕಾರ್ಯಗಳಲ್ಲಿ ತೊಡ ಗಿದ ಸರಕಾರವನ್ನು ಶಿಸ್ತು ಮತ್ತು ಶಾಂತಯುತವಾಗಿ ಎದುರಿಸುವ ಧೈರ್ಯವೂ ಅವನಲ್ಲಿರಬೇಕು. ಕುಟುಂಬ, ಸಮಾಜ ಮತ್ತು ರಾಷ್ಟ್ರಗಳ ಪ್ರಗತಿಗೆ ಸಾಧಕವಾಗುವಂತೆ ಮತ್ತು ತನ್ನ ಸ್ವಾಭಿಮಾನಪೂರ್ಣ ಸ್ವತಂತ್ರ ವ್ಯಕ್ತಿತ್ವಕ್ಕೆ ಬಾಧೆ ಬರದಂತೆ ವರ್ತಿಸುವ ಗುಟ್ಟನ್ನು ನಾಗರಿಕನು ಕಲಿತಿರ ಬೇಕು.

ಅರಸರು, ಸರದಾರರು, ಸರ್ವಾಧಿಕಾರಿಗಳು ಮತ್ತು ವಿಶಿಷ್ಟ ವರ್ಗದ ವರು ಪ್ರಭುತ್ವ ನಡೆಯಿಸುತ್ತಿದ್ದ ಹಿಂದಿನ ಕಾಲದಲ್ಲಿ ನಾಗರಿಕನಿಗೆ ಗೌರವ ಯುಕ್ತ ಸ್ಥಾನವಿರಲಿಲ್ಲ. ಆಳರಸರು ಹೇರಿದ ಕರಗಳನ್ನು ಕೊಟ್ಟು, ಅವರು ಮಾಡಿದ ಕಾಯ್ದೆಗಳಿಗೆ ಬಾಗಿ ನಡೆಯುವುದೇ ಅವನ ಕರ್ಮವಾಗಿತು. ಇಂದಿನ ಪ್ರಗತಿ ಪರ ರಾಜ್ಯಗಳು ಈ ಅನೈತಿಕ ತಳಹದಿಯ ಮೇಲೆ ಕಟ್ಟ ಲ್ಪಟ್ಟಿರದೆ, ನಾಗರಿಕನ ಒಪ್ಪಿಗೆಯ ಮೇಲೆ ಕಟ್ಟಲ್ಪಟ್ಟಿವೆ. ಸಮಾಜದ ಇತರ

ಸಂಘ ಸಂಸ್ಥೆಗಳೂ ಈ ಆಧಾರದ ಮೇಲೆಯೇ ಮಾರ್ಪಾಟು ಹೊಂದಿವೆ, ಮತ್ತು ಹೊಂದುತ್ತಲಿವೆ. ಆದುದರಿಂದ ಇಂದಿನ ನಾಗರಿಕನು ನಿತ್ಯ ವ್ಯವಹಾರದಲ್ಲಿ ಹೊಣೆಯರಿತ ಮತ್ತು ಗೌರವಯುಕ್ತ ಆಚರಣೆಯನ್ನಿಟ್ಟುಕೊಂಡಿರಬೇಕಾಗಿದೆ; ಈ ಯುಗದ ಸಮಸ್ಯೆಗಳನ್ನೆಲ್ಲ ವಿವೇಕಯುಕ್ತವಾಗಿ ಎದುರಿಸಬೇಕಾಗಿದೆ. ಹಾಗೆ ಮಾಡಲು ಅವನು ನಾಗರಿಕತ್ವದ ವಿಜ್ಞಾನವನ್ನು ಅಭ್ಯಸಿಸುವುದು ಒಳಿತು.


KARNATAK GRANTHALAYA
No ..................
DHARWAR

**ಸಹಾಯಕ ಗ್ರಂಥಗಳು:**

1. Primitive Culture By E. B. Tylor.
2. Morals in Evolution By L. T. Hobhouse.
3. A Short History of the World By H. G. Wells.
4. The Living Past. By F. S. Marvin.
5. Political Science. By Gettel.

## ಪ್ರಕರಣ ೨ ಸಾಮಾಜಿಕ ಸಂಸ್ಥೆಗಳು.

೧.
೨. ಕುಟುಂಬದ ಹುಟ್ಟು.
೩. ಕುಟುಂಬದಲ್ಲಿ ಹಿರಿಯನ ಸ್ಥಾನ.
೪. ಪ್ರಾಚೀನ ಕುಟುಂಬಗಳು.
೫. ಆಧುನಿಕ ಕುಟುಂಬಗಳು.
೬. ವಿವಾಹದ ಕಾರಣ.
೭. ವಿವಾಹದ ಪ್ರಕಾರಗಳು.
೮. ವಿವಾಹಕ್ಕೆ ಸಂಬಂಧಿಸಿದ ಸಮಸ್ಯೆಗಳು.
೯. ಆಸ್ತಿಯ ಸ್ವರೂಪ.
೧೦. ಆಸ್ತಿಯ ಪ್ರಕಾರಗಳು.
೧೧. ಆಸ್ತಿಯನ್ನು ವರ್ಗಾಯಿಸುವ ವಿಧಾನಗಳು.
೧೨. ಆಸ್ತಿ ರಕ್ಷಣೆಯ ಕಾಯ್ದೆಗಳು.
೧೩. ಆಸ್ತಿಯ ಪುನರ್ಘಟನೆ.
೧೪. ಬಣಗಳು.
೧೫. ಜನಾಂಗಗಳು.
೧೬. ರಾಷ್ಟ್ರಗಳು.
೧೭. ಜಾತಿ ಪದ್ಧತಿಯ ಇತಿಹಾಸ.
೧೮. ಜಾತಿ ಪದ್ಧತಿಯಿಂದ ಹಿಂದೆ ಒದಗಿದ ಲಾಭ
೧೯. ಜಾತಿ ಪದ್ಧತಿಯ ಪರಿವರ್ತನೆಯ ಕಾರಣಗಳು.
೨೦. ಜಾತಿ ಪದ್ಧತಿಯ ಅನೌಚಿತ್ಯ.
೨೧. ಜಾತಿ ಪದ್ಧತಿಯ ಹೊಸರೂಪ.
೨೨. ವರ್ಗದ ಸ್ವರೂಪ.
೨೩. ಉಚ್ಚ ವರ್ಗ.
೨೪. ಕನಿಷ್ಠ ವರ್ಗ.
೨೫. ಮಧ್ಯಮ ವರ್ಗ.

## ಪ್ರಕರಣ ೨.

## ಸಾಮಾಜಿಕ ಸಂಸ್ಥೆಗಳು

### ೧. ಹಿನ್ನೆಲೆ

ಸ್ವಾತಂತ್ರ್ಯಾಕಾಂಕ್ಷೆ ಮಾನವನ ಮೂಲ ಪ್ರೇರಣೆ. ಈ ಪ್ರೇರಣೆಯು ಅವನ ದೈಹಿಕ ಜೀವನ ಹೋರಾಟದ ಪ್ರತಿರೂಪ. ಪ್ರಕೃತಿಯು ಅವನಿಗೆ ಜನ್ಮವಿತ್ತಿದೆ; ಅವನಲ್ಲಿ ಮಾನಸಿಕ ಚೇತನವನ್ನೂ ತುಂಬಿದೆ. ಪ್ರಕೃತಿಯ ಅಂಗವಾಗಿ ಜನಿಸಿದ ಮಾನವನ ಈ ಮಾನಸಿಕ ಚೇತನವು ಪ್ರಕೃತಿಯ ನಿಯಮ ಬದ್ಧತೆಯನ್ನು ಕಂಡುಕೊಳ್ಳಲು ಸಮರ್ಥವಾಗಿದೆ. ಈ ಸಾಮರ್ಥ್ಯವನ್ನು ಮಾನವನು ತನ್ನ ಜೀವನ ಹೋರಾಟದಲ್ಲಿ ಸದಾ ಉಪಯೋಗಿಸುತ್ತ ಬಂದಿದ್ದಾನೆ. ಅವನು ಪ್ರಕೃತಿಗೆ ವಿರೋಧವಾಗಿ ಜೀವನ ಹೋರಾಟವನ್ನು ಎಂದೂ ಎಲ್ಲಿಯೂ ಸಾಗಿಸಿಲ್ಲ. ಅದು ಸಾಧ್ಯವೂ ಇಲ್ಲ. ಸ್ವಾನುಭವದಿಂದ ಪಡೆದ ಪ್ರಕೃತಿಯ ಜ್ಞಾನಬಲದಿಂದ ಅವನು ತನ್ನ ಜೀವನವನ್ನು ಪ್ರಕೃತಿಗೆ ಹೆಚ್ಚು ಸಮರ್ಪಕವಾಗಿ ಹೊಂದಿಸಲು ಪ್ರಯತ್ನಿಸಿದ್ದಾನೆ. ಈ ಬಗೆಯ ಜ್ಞಾನಪೂರಿತ ಹೊಂದಿಕೆಯೇ ಮನುಷ್ಯನ ಮಾನಸಿಕ ಮತ್ತು ದೈಹಿಕ ವಿಕಾಸಕ್ಕೆ ಅವಕಾಶವನ್ನು ಹೆಚ್ಚಿಸುತ್ತ ಬಂದಿದೆ. ಹೀಗೆ ತನ್ನ ಮಾನಸಿಕ ಮತ್ತು ದೈಹಿಕ ವಿಕಾಸಕ್ಕೆ ಪೋಷಕವಾಗಲು ಕಲ್ಪಿಸಿಕೊಂಡ ಅವಕಾಶದಲ್ಲಿಯೇ ಮಾನವನ ಸ್ವಾತಂತ್ರ್ಯವು ಅಡಗಿದೆ. ಇಂತಹ ಅವಕಾಶವನ್ನು ಕಲ್ಪಿಸಿಕೊಳ್ಳುವುದರಲ್ಲಿ ಅವನು ನಿರಂತರವೂ ತೊಡಗಿದ್ದಾನೆ. ಜೀವನ ಹೋರಾಟದಷ್ಟೇ ಮಾನವನ ಸ್ವಾತಂತ್ರ್ಯಾಕಾಂಕ್ಷೆಯೂ ನಿರಂತರವಾದುದು.

ಕುಟುಂಬ, ಬಣ, ಜನಾಂಗ, ಸಮಾಜ, ರಾಷ್ಟ್ರ ಮೊದಲಾದ ಮಾನವ ಸಂಸ್ಥೆಗಳೆಲ್ಲ ಮನುಷ್ಯನ ಮೂಲ ಸ್ವಾತಂತ್ರ್ಯ ಪ್ರೇರಣೆಯಿಂದ ಉದ್ಭವಿಸಿವೆಯೆಂದು ಹೇಳಬಹುದು. ಮನುಷ್ಯನ ದೈಹಿಕ ಮತ್ತು ಮಾನಸಿಕ ವಿಕಾಸಕ್ಕೆ ಸದವಕಾಶವನ್ನು ಒದಗಿಸಬಲ್ಲವೆಂಬ ಆಕಾಂಕ್ಷೆಯ ಮೇಲೆ ಈ ಎಲ್ಲ ಸಂಸ್ಥೆಗಳೂ ಕಟ್ಟಲ್ಪಟ್ಟಿವೆ.

ವಿವೇಕವು ಮನುಷ್ಯನ ಮಾನಸಿಕ ಜೀವನದ ಹೆಗ್ಗುರುತು. ಇದರ ಜೊತೆಗೆ ಸ್ವಸಂರಕ್ಷಣೆಯ ಮತ್ತು ಸ್ವಸಂತಾನ ಮುಂದುವರಿಸುವ ಪ್ರವೃತ್ತಿಗಳೆರಡು ಮನುಷ್ಯನ ಜೀವನ ಪ್ರಗತಿಯ ಇತಿಹಾಸದಲ್ಲಿ ಕಾರ್ಯ ಮಾಡುತ ಬಂದಿವೆ. ಅವನು ರಚಿಸಿದ ಎಲ್ಲ ಸಂಸ್ಥೆಗಳೂ ಒಂದಿಲ್ಲೊಂದು ಬಗೆಯಿಂದ ಈ ಮೂಲ ಮಾನವೀಯತೆಯ ಅಂಶಗಳನ್ನು ಪ್ರಕಟಪಡಿಸುತ್ತವೆ.

ಮನುಷ್ಯನು ಸ್ವಯಂಪ್ರೀತನೂ ಅಹದು, ಸಮಾಜ ಜೀವಿಯೂ ಅಹುದು. ಅವನು ಸ್ವಸಂರಕ್ಷಣೆಗಾಗಿ ನಿಸರ್ಗದ ಸಂಗಡ ಆಜನ್ಮವೂ ಹೋರಾಡಬೇಕಾಗಿದೆ. ಸ್ವಸಂತಾನ ಮುಂದುವರಿಸುವ ಪ್ರವೃತ್ತಿಯು ಸಹ ಈ ಹೋರಾಟದ ಒಂದು ಅಂಗವಾಗಿದೆಯೆನ್ನಬಹುದು. ಈ ಹೋರಾಟದಲ್ಲಿ ವಿಜಯಿಯಾಗಲು ಸಮಾಜವನ್ನು ರಚಿಸಿಕೊಂಡಿದ್ದರೂ ಅವನು ತನ್ನತನವನ್ನು ಕಳೆದುಕೊಂಡಿಲ್ಲವೆನ್ನಬಹುದು. ಮಾನವೀಯ ಸಂಸ್ಥೆಗಳೆಲ್ಲ ಈ ದ್ವಿಮುಖ ಮನುಷ್ಯ ಸ್ವಭಾವದ ಪ್ರತೀಕಗಳಾಗಿವೆ.

ಮನುಷ್ಯನು ಪ್ರಗತಿಶೀಲನೂ ಅಹುದು, ಪರಂಪರಾಗತಶೀಲನೂ ಅಹುದು. ಒಂದು ಕಾಲದಲ್ಲಿ ಹೊಸದೆಂದು ತೋರುವ ಆಚರಣೆಯನ್ನು ರೂಢಿಮಾಡಿಕೊಂಡನೆಂದರೆ ಮುಂದೆ ಅವನು ಆ ರೂಢಿಯನ್ನು ಬದಲಿಸಲು ಇಚ್ಛಿಸುವುದಿಲ್ಲ. ಒಂದು ವಿಚಾರ ಇಲ್ಲವೆ ಒಂದು ಭಾವನೆ ಬಹುದಿನಗಳಿಂದ ಮನಸ್ಸಿನಲ್ಲಿ ಬಿಂಬಿಸಲ್ಪಟ್ಟಿದ್ದರೆ, ಅದನ್ನವನು ಬಿಟ್ಟುಕೊಡಬಯಸುವುದಿಲ್ಲ. ಅದರಂತೆ ಬಹುದಿನಗಳಿಂದ ಅಸ್ತಿತ್ವದಲ್ಲಿದ್ದ ಸಂಸ್ಥೆಯನ್ನು ಬದಲಿಸಲು ಅವನು ಸುಲಭವಾಗಿ ಒಪ್ಪುವುದಿಲ್ಲ. ಇದರಿಂದ ಒಂದುಕಾಲಕ್ಕೆ ಯಾವುದೋ ಒಂದು ಸದುದ್ದೇಶದಿಂದ ನಿರ್ಮಿತವಾದ ಸಂಸ್ಥೆಯು ಕಾಲಾಂತರದಲ್ಲಿ ವಿಕೃತರೂಪ ತಾಳಬಹುದು; ಮನುಷ್ಯನ ನೆಮ್ಮದಿಗಾಗಿ ವಿರಚಿತವಾದ ಸಂಸ್ಥೆಯು ಜೀವನದಲ್ಲಿ ದಾರುಣ ದುಃಖವನ್ನು ತಂದೊಡ್ಡಿರಬಹುದು; ಮನುಷ್ಯನ ಸ್ವಾಭಿಮಾನಪೂರ್ಣ ಸ್ವತಂತ್ರಜೀವನಕ್ಕೆ ಪೋಷಕವಾಗಲೆಂಬ ಉದ್ದೇಶದಿಂದ ನಿರ್ಮಿತವಾದ ಸಂಸ್ಥೆಗಳೇ ಅವನನ್ನು ಪಾರತಂತ್ರ್ಯದ ಶೃಂಖಲೆಗಳಲ್ಲಿ ಬಂಧಿಸಿಡಬಹುದು. ಹೀಗೆ ಪರಂಪರಾಗತಶೀಲ ಮಾನವನು ಗೊಡ್ಡು ಸಂಸ್ಥೆಗಳಿಗೆ ಕಟ್ಟುಬಿದ್ದು ಜೀವಿಸುವಂತೆ ತೋರಿದರೂ ಅವನಲ್ಲಿ ಹುದಗಿದ ನಿರ್ಮಾಪಕ ಚೇತನವು ಸದಾ ಪರಿವರ್ತನೆಯನ್ನು ಬಯಸುತ್ತಿರುತ್ತದೆ. ಮೊದಮೊದಲು ಸಂಸ್ಥೆಗಳ ಪರಂಪರೆಗಳ ಬಗ್ಗೆ

ಅವ್ಯಕ್ತ ಅಸಮಾಧಾನಗಳಿಗೆ ಕಾರಣವಾಗಬಹುದು. ಬರಬರುತ್ತ ಅದು ಸಂಸ್ಥೆಗಳ ಲೋಪದೋಷಗಳನ್ನು ಬಹಿರಂಗವಾಗಿ ವಿರೋಧಿಸುವ ನೀತಿ ನಡಾವಳಿಗಳಿಗೆ ಕಾರಣವಾಗಬಹುದು. ಈ ಬಗೆಯ ಹೊಸ ಆಚಾರ ವಿಚಾರಗಳು ಸಾರ್ವತ್ರಿಕವಾದಾಗ ಹೊಸ ಪರಿಸ್ಥಿತಿಗನುಸಾರವಾಗಿ ಸಂಸ್ಥೆಗಳು ಬದಲಾವಣೆ ಹೊಂದಬೇಕಾಗುವುದು. ಹೀಗೆ ಮನುಷ್ಯನ ಪರಂಪರಾಗತ ಶೀಲತನವು ಸಂಸ್ಥೆಗಳ ಸ್ಥಿರತೆಗೆ ಕಾರಣವಾಗಿರುವಂತೆ ಅವನ ನಿರ್ಮಾಪಕ ಚೇತನವು ಅವುಗಳ ಬದಲಾವಣೆಗೆ ಕಾರಣವಾಗಿದೆ. ಎಲ್ಲ ಸಂಸ್ಥೆಗಳೂ ಮನುಷ್ಯನ ಈ ಗುಣಧರ್ಮಗಳ ಸಜೀವ ಮೂರ್ತಿಗಳಾಗಿವೆ.

ಸಾಮಾಜಿಕ ಸಂಸ್ಥೆಗಳನ್ನು ಪರಿಶೀಲಿಸುವ ವಿಜ್ಞಾನಿಯು ಈ ಸಂಗತಿಗಳನ್ನು ಸದಾ ಗಮನಿಸಬೇಕು. ಒಂದು ವೇಳೆ ಮನುಷ್ಯನಿಗಿಂತಲೂ ಸಮಾಜ ಮೇಲು ಎಂಬ ಭಾವನೆಯಿಂದ ಅವನು ಪ್ರೇರಿತನಾದರೆ ಅವನ ವಿಚಾರಗಳೆಲ್ಲ ತಿರುವು ಮುರುವು ಆಗುವ ಸಂಭವವಿದೆ. ಆದುದರಿಂದ ಕುಟುಂಬ, ಬಣ, ಜಾತಿ, ವರ್ಗ, ರಾಷ್ಟ್ರ ಮೊದಲಾದ ಪ್ರಾಚೀನ ಸಂಸ್ಥೆಗಳ ನೆಲೆಬೆಲೆಗಳನ್ನು ಅಳೆಯುವಾಗ ಅವನು ಮಾನವನ ವ್ಯಕ್ತಿತ್ವದ ಪ್ರಾಧಾನ್ಯತೆಯನ್ನು ಅಲಕ್ಷಿಸಕೂಡದು. ಮನುಷ್ಯನೇ ಸಮಾಜದ ಮೂಲವೆಂಬ ಸತ್ಯದ ಮೇಲೆ ಎಲ್ಲ ಸಂಸ್ಥೆಗಳ ಬೆಲೆಯನ್ನು ನಿರ್ಧರಿಸಬೇಕು.

**೨. ಕುಟುಂಬದ ಹುಟ್ಟು**

ಕುಟುಂಬವು ಮಾನವನ ಅತ್ಯಂತ ಪ್ರಾಚೀನ ಸಂಸ್ಥೆ. ಸಮೀಪದ ರಕ್ತಸಂಬಂಧವುಳ್ಳ ಜನರು ಒಬ್ಬ ವ್ಯಕ್ತಿಯ ಹಿರಿತನದಲ್ಲಿ ಒಂದುಗೂಡಿ ಜೀವಿಸುವವರೆಲ್ಲರನ್ನೂ ಸೇರಿಸಿ ಕುಟುಂಬವೆಂದು ಹೇಳುತ್ತೇವೆ. ಕುಟುಂಬದಲ್ಲಿ ಹಿರಿತನ, ಒಂದುಗೂಡಿ ಜೀವಿಸುವಿಕೆ, ರಕ್ತಸಂಬಂಧ ಮೊದಲಾದ ಅಂಶಗಳು ಮಹತ್ವವಾದವುಗಳು.

ಕುಟುಂಬದ ಉಗಮವನ್ನು ಸ್ಥೂಲವಾಗಿ ಊಹಿಸಬಹುದು. ಸ್ತ್ರೀ-ಪುರುಷರ ಪರಸ್ಪರ ಸ್ನೇಹ ನಿಸರ್ಗದತ್ತವಾದುದು. ಪರಸ್ಪರ ಸ್ನೆಹವಂಕುರಿಸಿದ ಸ್ತ್ರಿ-ಪುರುಷರು ಒಂದುಗೂಡಿ ಜೀವಿಸಲಿಚ್ಛಿಸುವುದು ಸಹಜ. ಈ ಸಂಗತಿಯು ಹಲವು ಕಾಡುಪ್ರಾಣಿಗಳಲ್ಲಿಯೂ ಸಹ ಪ್ರಕಟವಾಗುತ್ತದೆ. ಆದರೆ ಮನುಷ್ಯನಲ್ಲಿ ಕಂಡುಬರುವ ಪರಸ್ಪರ ಮಮತೆಯು ಪ್ರಾಣಿಗಳ

ಮಮತೆಗಿಂತಲೂ ಹೆಚ್ಚು ಆಳವಾದುದೂ ಗಾಢವಾದುದೂ ವಿಸ್ತೃತವಾದುದೂ ಮತ್ತು ಶಾಶ್ವತವಾದುದೂ ಆಗಿದೆ. ಇದಕ್ಕೆ ಕಾರಣವೂ ಇದೆ. ಮನುಷ್ಯನು ಜನ್ಮವೆತ್ತಿದಾಗ ತೀರ ಅಸಹಾಯನಾಗಿರುತ್ತಾನೆ. ಈ ಅಸಹಾಯಕ ಸ್ಥಿತಿಯು ಬಹುದಿನಗಳ ವರೆಗೆ ಮುಂದುವರಿಯುತ್ತದೆ. ಅನೇಕ ವರ್ಷಗಳ ವರೆಗೆ ಅವನು ತಾಯಿ-ತಂದೆಯರ ಪೋಷಣೆಯಿಂದಲೇ ಜೀವಿಸಬೇಕಾಗುತ್ತದೆ. ಅಸಹಾಯಕ ಸ್ಥಿತಿಯಲ್ಲಿರುವ ಪ್ರಾಣಿಯ ಕಡೆಗೆ ಮಮತೆಯಿಂದ ನೋಡುವುದು ಸಹ ಮನುಷ್ಯನ ಗುಣಧರ್ಮ. ಆದುದರಿಂದ ಹೆತ್ತತಾಯಿಯು ತನ್ನ ಮಗುವನ್ನು ಮಮತೆಯಿಂದ ಕಾಣುತ್ತಾಳೆ. ಮಗುವನ್ನು ಪೋಷಿಸಬೇಕಾದ ದೀರ್ಘಕಾಲದಲ್ಲಿ ಈ ಮಮತೆಯು ಗಾಢ ಪ್ರೇಮವಾಗಿ ಪರಿಣಮಿಸುತ್ತದೆ. ಮಗುವನ್ನು ಪಡೆದ ಸ್ತ್ರೀಯು ಸಹ ಹಲವು ದಿನಗಳ ವರೆಗೆ ಅಸಹಾಯ ಸ್ಥಿತಿಯಲ್ಲಿರುತ್ತಾಳೆ. ಆ ಸಮಯದಲ್ಲಿ ಅವಳ ಪೋಷಣೆಯ ಭಾರ ಪುರುಷನೇ ಹೊರಬೇಕಾಗುತ್ತದೆ. ತನ್ನ ಸ್ತ್ರೀಯ ಮೇಲಿನ ಪುರುಷನ ಮಮತೆಯು ಆಕೆಯು ಹೆತ್ತ ಮಗುವಿನ ಕಡೆಗೂ ಒಲಿಯುತ್ತದೆ. ಅತ್ತ ಬಹುಕಾಲ ಪೋಷಣೆ ಹೊಂದುತ್ತಿರುವ ಮಗುವಿನಲ್ಲಿಯೂ ಸಹ ತನ್ನ ತಾಯಿ-ತಂದೆಯರ ಬಗ್ಗೆ ಮಮತೆಯು ವೃದ್ಧಿ ಹೊಂದುತ್ತದೆ. ಮುಂದೆ ಅವನ ಈ ಮಮತೆಯು ಅಣ್ಣ, ಅಕ್ಕ, ತಮ್ಮ, ತಂಗಿ ಮೊದಲಾದವರ ಕಡೆಗೂ ಒಲಿಯುತ್ತದೆ. ಹೀಗೆ ಸಮೀಪದ ರಕ್ತ ಸಂಬಂಧಿಗಳಲ್ಲಿ ಉಂಟಾಗುವ ಪ್ರೇಮಾದರ ಭಾವನೆಗಳೇ ಕುಟುಂಬ ನಿರ್ಮಾಣಕ್ಕೆ ಕಾರಣವಾಗಿರಬೇಕು.

ಮನುಷ್ಯನ ಬಾಲ್ಯಾವಸ್ಥೆಯ ಅಸಹಾಯಕತೆಯು ನಿಸರ್ಗದತ್ತವಾಗಿದೆ. ಈ ಸ್ಥಿತಿಯಿಂದ ಪಾರಾಗಲು ಅವನು ತಕ್ಕ ಮಾರ್ಗವನ್ನು ಅನುಸರಿಸಿರಲೇಬೇಕು. ಅಂದಿನ ಅಂಧಃಕಾರ ಯುಗದಲ್ಲಿ ಸ್ವಸಂರಕ್ಷಣೆಯ ವಿಧಾನ ಹುಡುಕುವ ಕಾರ್ಯದಲ್ಲಿ ಅವನು ಅನೇಕ ತಪ್ಪು ತಡೆಗಳನ್ನು ಮಾಡಿರಬೇಕು. ಕೊನೆಗೆ ಪ್ರೇಮಾದರ ಭಾವನೆಗಳೇ ತಕ್ಕವೆಂದು ಅನಿಸಿರಬೇಕು. ಈ ಭಾವನೆಗಳು ಮನುಷ್ಯ ಸ್ವಭಾವದಲ್ಲಿ ಬೇರೂರಲು ಎಷ್ಟು ಕಾಲ ಹಿಡಿದಿರಬೇಕು ಎಂಬುದನ್ನು ಊಹಿಸುವುದು ಕಠಿಣ. ಒಂದಾನೊಂದು ಕಾಲಕ್ಕೆ ಮಾನವೀಯತೆಯ ಗುಣಧರ್ಮಗಳು ಜೀವನ ಹೋರಾಟದ ಫಲವಾಗಿ ರೂಪುಗೊಂಡಿರಬೇಕು. ಇಂತಹ ಗುಣಧರ್ಮಗಳ ಆಧಾರದ ಮೇಲೆ ನಿಂತ

ಕುಟುಂಬವು ಮನುಷ್ಯನಿಗೆ ಅತ್ಯಂತ ಅವಶ್ಯವಾದ ಸಂಸ್ಥೆಯೆಂದು ಹೇಳ ಬಹುದು.

ಇತರ ಪ್ರಾಣಿಗಳು ಜನ್ಮವೆತ್ತಿದ ಕೆಲದಿನಗಳಲ್ಲಿಯೇ ಪರಪೋಷಣೆ ಯಿಂದ ಮುಕ್ತವಾಗುತ್ತವೆ. ಆದುದರಿಂದ ಅವುಗಳಲ್ಲಿ ಪ್ರೇಮ ಭಾವನೆಯು ಬಲವತ್ತರವಾಗಲು ಆಸ್ಪದ ಸಿಗುತ್ತಿರಲಿಕ್ಕಿಲ್ಲ. ಅವುಗಳ ಕೌಟುಂಬಿಕ ಜೀವ ನವು ಕ್ಷಣಿಕವಾಗಿರಲು ಇದೇ ಕಾರಣವಿರಬಹುದು. ಆದರೆ ಮನುಷ್ಯನ ದೀರ್ಘ ಕಾಲದ ಅಸಹಾಯಕತೆ ಅವನು ಕುಟುಂಬ ಜೀವಿಯಾಗಲು ಒಂದು ರೀತಿಯಿಂದ ಒತ್ತಾಯಪಡಿಸುತ್ತದೆ. ಅಲ್ಲದೆ ಅವನ ಕುಟುಂಬಕ್ಕೆ ಒಂದು ಬಗೆಯ ಸ್ಥಿರತೆಯನ್ನೂ ದಯಪಾಲಿಸುತ್ತದೆ. ಆದರೆ ಕುಟುಂಬದ ಸದಸ್ಯರು ಕಾಲಕಾಲಕ್ಕೆ ಬದಲಾಗುತ್ತಾರೆಂಬುದನ್ನು ಮಾತ್ರ ಮರೆಯಕೂಡದು. ಕಿರಿಯರು ಹಿರಿಯರಾದಂತೆ ಕುಟುಂಬದ ಆವಶ್ಯಕತೆ ಕಡಮೆಯಾಗುತ್ತದೆ. ಆಗ ಅವರು ಒಡೆದು ಹೋಗಿ ತಮ್ಮದೇ ಆದ ಹೊಸದೊಂದು ಕುಟುಂಬ ಕಟ್ಟಿಕೊಳ್ಳಲು ಇಚ್ಛಿಸುತ್ತಾರೆ. ಜನನ, ಮರಣ, ವಿವಾಹ ಸಂಬಂಧ, ಅಗ ಲುವಿಕೆ ಮೊದಲಾದವುಗಳು ಕುಟುಂಬದ ಸದಸ್ಯರ ಬದಲಾವಣೆಗೆ ಕಾರಣ ವಾಗುತ್ತವೆ. ಈ ಬಗೆಯ ಬದಲಾವಣೆಗಳು ಆಗುತ್ತಿದ್ದರೂ ಇತರ ಪ್ರಾಣಿ ಗಳಿಗಿಂತಲೂ ಮನುಷ್ಯನ ಕೌಟುಂಬಿಕ ಜೀವನವು ಹೆಚ್ಚು ಸ್ಥಿರವಾದುದೆಂದು ಹೇಳಿದರೆ ತಪ್ಪಾಗದು.

ಒಂದಾನೊಂದು ಕಾಲದಲ್ಲಿ ಆಹಾರ ದೊರಕಿಸುವ ಕಾರ್ಯ ಅಷ್ಟೇನೂ ಸುಲಭವಾಗಿರಲಿಲ್ಲ. ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳುವುದೂ ಕಡಮೆ ಪ್ರಯಾಸದ ಕಾರ್ಯವಾಗಿದ್ದಿಲ್ಲ. ಬೇಟೆಯಾಡಿ ಬದುಕುವಾಗ ಒಬ್ಬರಿ ಗಿಂತಲೂ ಇಬ್ಬರು ಲೇಸು ಎಂಬ ಮಾತು ಮನುಷ್ಯನ ಅನುಭವಕ್ಕೆ ಬಂದಿರ ಬೇಕು. ವಾಸಸ್ಥಳ ರಚಿಸಿಕೊಳ್ಳುವಾಗ ಪರಸ್ಪರ ಸಹಕಾರದ ಅವಶ್ಯಕತೆ ಯುಂಟಾಗಿರಬೇಕು. ಜೀವನಾವಶ್ಯಕ ವಸ್ತುಗಳನ್ನು ಕಾಪಾಡಿಕೊಳ್ಳುವಾ ಗಲೂ, ಸಾಕು ಪ್ರಾಣಿಗಳನ್ನು ಜೋಪಾನ ಮಾಡುವಾಗಲೂ ಸಹಕಾರದ ಅನುಕೂಲತೆ ಹೊಳೆದಿರಬೇಕು. ಪ್ರೇಮಾದರಗಳಿಂದ ಪೂರಿತವಾದ ಕೌಟುಂಬಿಕ ಜೀವನದಲ್ಲಿಯೇ ಜನರು ಸಹಕಾರದ ಮೊದಲ ಪಾಠಗಳನ್ನು ಕಲಿತಿರಬೇಕು. ಮನುಷ್ಯನು ದ್ವೇಷಭರಿತನೂ, ಸ್ವಾರ್ಥಿಯೂ, ಪರರ ಸಂಗಡ ಕಾದಾಡುವವನೂ, ಮೇಲಾಟದಲ್ಲಿ ತೊಡಗಿದವನೂ, ಅಂಧಃಶ್ರದ್ಧೆ

ದಲ್ಲಿ ಒಂದಾನೊಂದು ಕಾಲಕ್ಕೆ ಮಾತೃಪ್ರಾಧಾನ್ಯ ಕುಟುಂಬಗಳು ಇದ್ದಿರ ಬೇಕೆಂದು ಅನಿಸುತ್ತದೆ. ಅಲ್ಲಿ ಇಂದಿಗೂ ರೂಢಿಯಲ್ಲಿರುವ ಅಳಿಯ ಸಂತಾನ ಪದ್ಧತಿಯು ಈ ಮಾತನ್ನು ಸೂಚಿಸುತ್ತದೆ.

ಪಿತೃಪ್ರಾಧಾನ್ಯ ಕುಟುಂಬಕ್ಕೆ ಒಬ್ಬ ಪಿತಾಮಹನಿರುತ್ತಾನೆ. ಧೃತ ರಾಷ್ಟ್ರನು ಕೌರವ ಕುಲದ ಪಿತಾಮಹನಾಗಿದ್ದ. ಇಂತಹ ಪಿತಾಮಹರ ಉದಾಹರಣೆಗಳು ಋಷಿಕುಲಗಳ ಚರಿತ್ರೆಯಲ್ಲಿಯೂ ಇವೆ. ಪಿತೃಪ್ರಾಧಾನ್ಯ ಕುಟುಂಬದ ಜನರು ಸಂಪಾದಿಸಿದುದು ಇಡೀ ಕುಟುಂಬದ ಸಂಪತ್ತು ಎನಿಸುತ್ತಿತ್ತು. ಆ ಸಂಪತ್ತನ್ನು ಉಪಭೋಗಿಸುವದು ಎಲ್ಲರ ಜನ್ಮಸಿದ್ಧ ಹಕ್ಕು. ಆದರೆ ಅದರ ಉಪಭೋಗವನ್ನು ಪಿತಾಮಹನ ಅನುಮತಿಯಿಲ್ಲದೆ ಯಾರೂ ಮಾಡಲಾರರು. ಅವನು ಕುಟುಂಬದ ಬೇರೆ ಬೇರೆ ಜನರಿಗೆ ಕಾರ್ಯಗಳನ್ನು ಹಂಚಿಕೊಡುತ್ತಿದ್ದನು. ಅವರ ಮೇಲೆ ಅವನ ಸಂಪೂರ್ಣ ಅಧಿಕಾರವಿತ್ತು. ಕುಟುಂಬದ ಸಾಮೂಹಿಕ ಜೀವನದ ನಿಯಮಗಳನ್ನು ಉಲ್ಲಂಘಿಸಿದವರನ್ನು ದಂಡಿಸುವವನೂ ಅವನೇ. ಇಂತಹ ಸಂದರ್ಭಗಳಲ್ಲಿ ಅವನು ಕುಟುಂಬದ ಸಾಮೂಹಿಕ ಅಭಿಪ್ರಾಯದ ಮೇರೆಗೆ ತೀರ್ಮಾನ ಕೊಡುತ್ತಿರಬಹುದು. ಯಜ್ಞಯಾಗಾದಿಗಳೂ, ಪೂಜೆಪುನಸ್ಕಾರಗಳೂ ಮಂತ್ರತಂತ್ರಗಳೂ, ವಿವಾಹ ಉಪನಯನಗಳೂ, ಶ್ರಾದ್ಧಕರ್ಮಗಳೂ ಪಿತಾಮಹನ ಹಿರಿತನದಲ್ಲಿಯೇ ಸಾಂಗವಾಗುತ್ತಿದ್ದವು. ಎಷ್ಟೋ ಸಲ ಕುಟುಂಬದ ಮೂಲ ಪುರುಷನ ಮೇಲಿಂದ ಕುಟುಂಬಗಳಿಗೆ ಹೆಸರು ಬಂದಿರುತ್ತವೆ. ಹಲವೆಡೆ ಮೂಲ ಪುರುಷನ ಪೂಜೆಯೂ ನಡೆಯುತ್ತದೆ ಇಂದಿಗೂ ಕೊಡಗು ನಾಡಿನ ಜನಾಂಗದಲ್ಲಿ ಮನೆತನದ ಮೂಲ ಪುರುಷನ ಪೂಜೆ ನಡೆಯುತ್ತದೆ. ಒಟ್ಟಿನ ಮೇಲೆ ಪಿತೃಪ್ರಾಧಾನ್ಯ ಕುಟುಂಬಗಳು ಅಂದಿನ ಜೀವನದ ಸ್ವಯಂಪೂರ್ಣ ಕೇಂದ್ರಗಳಾಗಿದ್ದವು. ಈ ಮಾತು ಸ್ವಲ್ಪ ಹೆಚ್ಚು ಕಡಮೆ ಮಾತೃಪ್ರಾಧಾನ್ಯ ಕುಟುಂಬಗಳಿಗೂ ಅನ್ವಯಿಸುತ್ತದೆ.

ಇದು ಪಿತೃಪ್ರಾಧಾನ್ಯ ಕುಟುಂಬದ ಆಂತರಿಕ ಸ್ಥಿತಿಗತಿಯ ವರ್ಣನೆ. ಇನ್ನು ಅವುಗಳ ಬಾಹ್ಯಸಂಬಂಧದ ವಿಚಾರ. ಈ ಕುಟುಂಬಗಳು ತಮ್ಮ ಜನಾಂಗದ ಇತರ ಕುಟುಂಬಗಳೊಡನೆ ಸಂಬಂಧ ಬೆಳೆಸಿಕೊಂಡಿರಲೇ ಬೇಕು. ಒಂದು ಕುಟುಂಬದ ಸ್ತ್ರೀ-ಪುರುಷರು ಬೇರೆ ಕುಟುಂಬದವರನ್ನೇ ಸಾಮಾನ್ಯವಾಗಿ ವಿವಾಹವಾಗಬೇಕಿತ್ತು. ಈ ವಿವಾಹಗಳು ಆಯಾ

ಕುಟುಂಬದ ಹಿರಿಯರ ಅನುಮತಿಯ ಮೇರೆಗೆ ನಡೆಯುತ್ತಿದ್ದವು. ವೇದ ಕಾಲದಲ್ಲಿ ಕುಟುಂಬದ ಮುಖ್ಯಸ್ಥನಿಗೆ ಕುಲಪತಿಯೆಂದು ಕರೆಯುವ ರೂಢಿಯೂ ಇತ್ತು. ಇಂತಹ ಹಲವಾರು ಕುಲಪತಿಗಳು ಕೂಡಿ ವಿಶ್ಪತಿಯನ್ನು ಮಾಡುತ್ತಿದ್ದರು. ಇಂತಹ ಹಲವಾರು ವಿಶ್ಪತಿಗಳು ಕೂಡಿ ಜನಪತಿಯನ್ನು ಪಟ್ಟಗಟ್ಟುತ್ತಿದ್ದರು. ಇಂತಹ ಜನಪತಿಯೇ ಜನಾಂಗದ ಮುಖ್ಯಸ್ಥನೆಂದು ಭಾವಿಸಲಾಗುತ್ತಿತ್ತು. ಆ ಕಾಲದ ಜನಪತಿಗೆ ರಾಜ್ಯಭಾರದಲ್ಲಿ ಸಹಾಯನೀಡಲು ಸಮಿತಿಯೆಂದು ಇರುತ್ತಿತ್ತು. ಈ ಸಮಿತಿಯಲ್ಲಿ ಜನಾಂಗದ ಕುಲಪತಿಗಳಿಗೆಲ್ಲ ಸ್ಥಾನವಿತ್ತು. ಯೋಧೇಯ ಮತ್ತು ಸಾಕ್ಯ ಗಣರಾಜ್ಯಗಳ ಸಮಿತಿಗಳಲ್ಲಿ ಸಾವಿರಾರು ಕುಲಪತಿಗಳಿದ್ದರೆಂದು ತಿಳಿದುಬಂದಿದೆ. ಇದರಿಂದ ಒಂದು ಕಾಲಕ್ಕೆ ಪಿತೃಪ್ರಾಧಾನ್ಯ ಕುಟುಂಬಗಳೇ ರಾಜ್ಯದ ಮತ್ತು ಸಮಾಜದ ಆಧಾರಸ್ತಂಭಗಳಾಗಿದ್ದವೆಂದು ಅನಿಸುತ್ತದೆ.

## ೫. ಆಧುನಿಕ ಕುಟುಂಬಗಳು.

ಇಂದು ಈ ಬಗೆಯ ಕುಟುಂಬಗಳನ್ನು ಹೋಲುವ ಸಂಯುಕ್ತ ಕುಟುಂಬಗಳು ಹಿಂದುಸ್ತಾನದಲ್ಲಿ ಉಂಟು. ಅನ್ಯ ದೇಶಗಳಲ್ಲಿ ಸಂಯುಕ್ತ ಕುಟುಂಬಗಳು ವಿರಳ. ಪಾಶ್ಚಿಮಾತ್ಯರಲ್ಲಿ ಒಂಟಿ ಕುಟುಂಬಗಳೇ ಸಾರ್ವತ್ರಿಕವಾಗಿವೆ. ಒಂಟಿ ಕುಟುಂಬದಲ್ಲಿ ಪತಿ ಪತ್ನಿ ಮತ್ತು ಅವರ ಅವಿವಾಹಿತ ಮಕ್ಕಳು ಮಾತ್ರ ಇರುತ್ತಾರೆ. ಸಂಯುಕ್ತ ಕುಟುಂಬದಲ್ಲಿ ಅಜ್ಜ ಮುತ್ತಜ್ಜನಿಂದ ಮಕ್ಕಳು ಮರಿಮಕ್ಕಳ ವರೆಗೆ ಎಲ್ಲರೂ ಒಬ್ಬ ಹಿರಿಯನ ಹಿರಿತನದ ಕೆಳಗೆ ಜೀವಿಸುತ್ತಾರೆ.

ಸಂಯುಕ್ತ ಕುಟುಂಬವು ಹಿಂದೂ ಸಮಾಜದ ಒಂದು ಗಣ್ಯ ಸಂಸ್ಥೆ. ಇದು ಪರಂಪರಾಗತವಾಗಿ ಬಂದಿದೆ. ಸಗೋತ್ರ ಸಪಿಂಡರಾದ ಎಲ್ಲ ಸಮೀಪದ ರಕ್ತ ಸಂಬಂಧಿಕರೂ ಈ ಕುಟುಂಬದ ಕಕ್ಷದಲ್ಲಿ ಬರುತ್ತಾರೆ. ಕೆಲವು ಭಿನ್ನ ಗೋತ್ರದ ಸಮೀಪದ ರಕ್ತಸಂಬಂಧಿಕರೂ ಸಹ ಈ ಕುಟುಂಬದ ಕಕ್ಷದಲ್ಲಿ ಬರುತ್ತಾರೆ.ಎಲ್ಲರಿಗಿಂತಲೂ ವಯಸ್ಸಿನಿಂದ ಹಿರಿನಾದವನು ಕುಟುಂಬದ ಯಜಮಾನನೆಂದೆನಿಸಿಕೊಳ್ಳುತ್ತಾನೆ. ಕುಟುಂಬದ ಪರಂಪರಾಗತ ಆಸ್ತಿಗೆ ಪಿತ್ರಾರ್ಜಿತ ಆಸ್ತಿಯೆನ್ನುತ್ತಾರೆ. ಈ ಆಸ್ತಿಯ ಸಹಾಯದಿಂದ ಕುಟುಂಬದ ಜನರು ಗಳಿಸಿದ ಇತರ ಆಸ್ತಿಯೂ ಸಹ ಇದರಲ್ಲಿಯೇ ಸಮಾವೇಶವಾಗು

ತ್ತದೆ. ಈ ಆಸ್ತಿಗೆ ಕುಟುಂಬದೊಳಗಿನ ಎಲ್ಲ ಸಣ್ಣ ದೊಡ್ಡ ಗಂಡುಮಕ್ಕಳು ಒಡೆಯರು. ಸ್ತ್ರೀಯರಿಗೆ ಒಡೆತನವಿಲ್ಲ. ಕುಟುಂಬದಲ್ಲಿ ಜನ್ಮವೆತ್ತ ಹೆಣ್ಣು ಮಕ್ಕಳ ವಿವಾಹದ ಮತ್ತು ಉಪಜೀವನದ ಭಾರ ಮಾತ್ರ ಈ ಆಸ್ತಿಯ ಮೇಲಿರುತ್ತದೆ. ಇತರ ಸ್ತ್ರೀಯರು ಕೇವಲ ಉಪಜೀವನಕ್ಕಾಗಿ ಅರ್ಹರು. ಮನೆಯ ಯಜಮಾನನು ಪಿತ್ರಾರ್ಜಿತ ಆಸ್ತಿಯ ವ್ಯವಸ್ಥಾಪಕನು. ಅವನ ಇಚ್ಛೆಯ ಮೇರೆಗೆ ಅದರ ಉಪಯೋಗವಾಗುವುದು. ಅವನು ಅದನ್ನು ಕುಟುಂಬದ ಹಿತದ ಸಲುವಾಗಿ ವಿನಿಯೋಗಿಸಬಹುದು, ವಿಕ್ರಯ ಮಾಡಬ ಹುದು, ಮನೆಯ ದೇವರ ಆರಾಧನೆಗಾಗಿ ಕೆಲಮಟ್ಟಿಗೆ ದಾನಮಾಡಬಹುದು. ಆದರೆ ಅದನ್ನು ಮೃತ್ಯುಪತ್ರದಿಂದಾಗಲಿ ಬಕ್ಷೀಸಿನಿಂದಾಗಲಿ ಕೊಡಲು ಬರುವುದಿಲ್ಲ. ಹಾಗೆ ಮಾಡಲು ಇತರ ವಯಸ್ಕ ಪುರುಷರ ಸಮ್ಮತಿಯೂ ಬೇಕಾಗುತ್ತದೆ. ಯಜಮಾನನ ವ್ಯವಸ್ಥಾಪನೆಯು ಸರಿಬಾರದೇ ಇದ್ದ ವಯಸ್ಕನು ತನ್ನ ಪಾಲು ತೆಗೆದುಕೊಂಡು ಕುಟುಂಬದಿಂದ ಬೇರೆಯಾಗ ಬಹುದು. ಯಜಮಾನನ ಸ್ಥಾನವು ಭದ್ರವಾಗಿರುವ ವರೆಗೆ ಸಂಯುಕ್ತ ಕುಟುಂಬವು ಅಸ್ತಿತ್ವದಲ್ಲಿರುತ್ತದೆ.

ಸಂಯುಕ್ತ ಕುಟುಂಬದಲ್ಲಿರುವವರಿಗೆ ಬಹುತರವಾಗಿ ನಿರುದ್ಯೋಗ ತನ, ಬೇನೆ ಬೇಸರಿಕೆ ಮತ್ತು ಮಡದಿ ಮಕ್ಕಳ ಉಪಜೀವನದ ಸಮಸ್ಯೆ ಗಳು ಅಷ್ಟೇನೂ ಹಿರಿದಾಗಿರುವದಿಲ್ಲ. ಒಬ್ಬನು ನಿರುದ್ಯೋಗಿಯಾಗಿದ್ದರೂ ಉಳಿದವರು ದುಡಿದು ಹಾಕುತ್ತಿರುತ್ತಾರೆ. ಒಬ್ಬನು ಬೇನೆ ಬೇಸರಿಕೆಯಿಂದ ಮಲಗಿದರೆ ಇತರರು ಅವನ ಉಪಚಾರವನ್ನು ಮಾಡಬಲ್ಲರು. ಮರಣ ಹೊಂದಿದವನ ಮಡದಿ ಮಕ್ಕಳಿಗೆ ಕುಟುಂಬದ ಪೋಷಣೆಯು ನಿರಾತಂಕ ವಾಗಿ ದೊರೆಯುತ್ತಿರುತ್ತದೆ. ಎಲ್ಲರ ಪ್ರಯತ್ನದಿಂದ ನಡೆಯುತ್ತಿರುವ ಮನೆ ತನದ ಉದ್ಯೋಗವು ಉತ್ತರೋತ್ತರ ಅಭಿವೃದ್ಧಿ ಹೊಂದಬಹುದು. ಆ ಉದ್ಯೋಗವು ದೊಡ್ಡ ಪ್ರಮಾಣದಲ್ಲಿ ನಡೆಯಬಹುದು. ಕುಟುಂಬದೊಳ ಗಿನ ಜನರೆಲ್ಲರೂ ಉದ್ಯೋಗ ತತ್ಪರರಾಗಿದ್ದರೆ ಇದರಿಂದಾಗುವ ಆರ್ಥಿಕ ಲಾಭಕ್ಕೆ ಮಿತಿಯಿಲ್ಲ.

ಆದರ್ಶ ಸಂಯುಕ್ತ ಕುಟುಂಬಕ್ಕೆ ಸೇರಿದ ಜನರಲ್ಲಿ ವಿಶಾಲ ದೃಷ್ಟಿಯೂ ಮನೆತನದ ಅಭಿಮಾನವೂ ಪರಸ್ಪರ ಪ್ರೇಮಾದರಗಳಿಂದ ಉದ್ಭವಿಸಿದ

ನೀತಿಯೂ ಬೆಳೆಯುತ್ತವೆ. ಅವರು ತಮ್ಮಷ್ಟಕ್ಕೆ ತಾವು ಜೀವಿಸದೆ ಹಲವು ಬಂಧುಗಳ ಹಿತಕ್ಕಾಗಿ ದುಡಿಯುತ್ತಿರುವುದರಿಂದ ಅವರ ದೃಷ್ಟಿಕೋನವು ಸಂಕುಚಿತವಾಗಲಿಕ್ಕಿಲ್ಲ. ಸಂಯುಕ್ತ ಕುಟುಂಬಕ್ಕೆ ಒಂದು ಪರಂಪರೆಯಿರು ವುದರಿಂದ ಅದರೊಳಗಿನ ಜನರು ಮನೆತನದ ಅಭಿಮಾನಿಗಳಾಗಬಹುದು. ಇದೇ ಅಭಿಮಾನ ಮುಂದೆ ದೇಶಾಭಿಮಾನವಾಗಿ ಪರಿಣಮಿಸಬಹುದು. ಈ ಬಗೆಯ ಗುಣಗಳನ್ನು ಕಲಿಸಬಲ್ಲ ಸಂಯುಕ್ತ ಕುಟುಂಬವು ನಾಗರಿ ಕತ್ವಕ್ಕೆ ಪೋಷಕವಾದ ಸಂಸ್ಥೆಯೆಂದು ಹೇಳಲಡ್ಡಿಯಿಲ್ಲ.

ಆದರೆ ಇಂದು ಆದರ್ಶ ಸಂಯುಕ್ತ ಕುಟುಂಬಗಳು ದೊರೆಯುವುದು ತೀರ ಅಪರೂಪ. ಘನೋದ್ದೇಶದಿಂದ ಜನ್ಮವೆತ್ತ ಎಲ್ಲ ಸಂಸ್ಥೆಗಳಂತೆ ಕಾಲಾಂತರದಲ್ಲಿ ಈ ಸಂಸ್ಥೆಯು ವಿಕೃತರೂಪ ತಾಳಿದೆ. ಅದು ಇಂದು ಜನರ ಸರ್ವಾಂಗೀಣ ಉನ್ನತಿಗೆ ಪೋಷಕವಾಗದೆ ಅವರ ಅವನತಿಗೆ ಕಾರ ಣವಾಗಿದೆ. ಸಂಕುಚಿತ ಬುದ್ಧಿಯ ಅವಿವೇಕ ಯಜಮಾನರು ಸಂಯುಕ್ತ ಕುಟುಂಬಗಳನ್ನು ದುಃಸ್ಥಿತಿಗೆ ತಂದಿದ್ದಾರೆ. ಒಬ್ಬಿಬ್ಬರು ದುಡಿಯುವವರು ಉಳಿದವರೆಲ್ಲರು ಉಂಡುಟ್ಟು ನಲಿಯುವವರು ಆಗಿದ್ದಾರೆ. ಸಮತೆಯ ಭಾವನೆ ಅಳಿದು ಅಸೂಯೆಯ ಛಾಯೆಯು ಸಂಯುಕ್ತ ಕುಟುಂಬಗಳನ್ನು ಆವರಿಸಿದೆ. ಬಹುಜನ ತಿಳಿಗೇಡಿಗಳ ಗೊಡ್ಡುಸಾಂಪ್ರದಾಯದ ಅಂಧಃ ಪ್ರವಾಹದಲ್ಲಿ ಬುದ್ಧಿವಂತನ ಸತ್ಯಾಚರಣೆಯು ತೇಲಿಹೋಗುತ್ತಲಿದೆ. ಜನರು ಸ್ವಾವಲಂಬಿಗಳೂ, ಸಾಹಸಿಗರೂ, ಆಗಪೆ ಪರಾವಲಂಬಿಗಳೂ ಆಲಸಿಗಳೂ ಆಗಹತ್ತಿದ್ದಾರೆ. ಸಂಯುಕ್ತ ಕುಟುಂಬದಲ್ಲಿ ಜನರು ಸ್ವತಂತ್ರ ವೈಯಕ್ತಿಕ ಜೀವನದ ಮಾಧುರ್ಯವನ್ನು ಕಳೆದುಕೊಂಡಿದ್ದರೂ ಸಾಮೂಹಿಕ ಜೀವ ನದ ಸ್ವಾಸ್ಥ್ಯ ಪಡೆಯುದವರಾಗಿದ್ದಾರೆ. ಒಬ್ಬ ದುಷ್ಟನ ತಪ್ಪಿಗಾಗಿ ಕುಟುಂಬ ದೊಳಗಿನ ಎಲ್ಲ ಜನರೂ ಅನಾಥರಾಗಬೇಕಾದ ನಿದರ್ಶನಗಳೂ ಇವೆ. ಹೀಗಿದ್ದರೂ ಬಹುದಿನದ ಸಾಂಪ್ರದಾಯದ ಬಲದಿಂದ ಹಿಂದೂ ಸಮಾಜ ದಲ್ಲಿ ಇನ್ನೂ ಸಂಯುಕ್ತ ಕುಟುಂಬಗಳೇ ಹೆಚ್ಚಾಗಿವೆ.

ಈಚೆಗೆ ಪಾಶ್ಚಿಮಾತ್ಯ ಸಂಸ್ಕೃತಿ ಮತ್ತು ದೇಶದ ಆರ್ಥಿಕ ಸ್ಥಿತಿಯ ಬದಲಾವಣೆಯ ಫಲವಾಗಿ ಸಂಯುಕ್ತ ಕುಟುಂಬಗಳು ಒಡೆದು ಹೋಗಿ ಒಂಟಿ ಕುಟುಂಬಗಳು ಆಗಹತ್ತಿವೆ. ಸಾಕಷ್ಟು ಆದಾಯವಿದ್ದು ಒಂಟಿ

ಕುಟುಂಬದ ಜನರು ಪ್ರೇಮಪೂರಿತ ಸುಮಧುರ ಜೀವನವನ್ನು ಸಾಗಿಸಬಹುದು. ಪತಿಪತ್ನಿಯರು ಮಕ್ಕಳ ಪಾಲನೆ ಪೋಷಣೆಯಲ್ಲಿ ಹೆಚ್ಚು ಆಸ್ಥೆ ವಹಿಸಬಹುದು. ಅವರು ಸ್ವಾವಲಂಬಿಗಳಾಗಿ ಬಾಳಬೇಕಾದುದರಿಂದ ಉದ್ಯೋಗತತ್ಪರರೂ ಸಾಹಸಿಗರೂ ಆಗಬಹುದು. ಆದರೆ ಅವರಿಗೆ ನಿರುದ್ಯೋಗತನ, ಬೇನೆಬೇಸರಿಕೆ ಇಳಿವಯಸ್ಸಿನ ಉಪಜೀವನದ ಚಿಂತೆ ಮೊದಲಾದವುಗಳು ಸದಾ ಪೀಡಿಸುತ್ತಿರುತ್ತವೆ. ಸಣ್ಣ ಪುಟ್ಟ ಉದ್ಯೋಗವನ್ನು ಹೆಚ್ಚು ದಕ್ಷತೆಯಿಂದ ಅವರು ಸಾಗಿಸಿಕೊಂಡು ಹೋಗಬಹುದಾದರೂ ದೊಡ್ಡ ಪ್ರಮಾಣದ ಉದ್ಯೋಗವನ್ನು ಸಾಗಿಸುವುದು ಕಠಿಣ. ಆದರೆ ಇಂದಿನ ಆರ್ಥಿಕ ರಚನೆ ಒಂಟಿ ಕುಟುಂಬದ ಈ ಅನಾನುಕೂಲತೆಗಳನ್ನು ಬಹುಮಟ್ಟಿಗೆ ಹೋಗಲಾಡಿಸಿದೆ. ಒಂಟಿ ಕುಟುಂಬವು ಸ್ವತಂತ್ರ ವೈಯಕ್ತಿಕ ಜೀವನಕ್ಕೆ ಅನುಕೂಲವಾಗಿದ್ದರೂ ಸಾಮೂಹಿಕ ಜೀವನದ ಸಾಂಪ್ರದಾಯಗಳಿಗೆ ಹೊರತಾಗಿದೆಯೆಂದು ಹೇಳಬಹುದು. ಹೀಗೆ ಒಂದು ಬಗೆಯ ಕುಟುಂಬದ ಗುಣಗಳು ಇನ್ನೊಂದು ಬಗೆಯ ಕುಟುಂಬದ ದೋಷಗಳಾಗಿ ತೋರುತ್ತವೆ. ಈ ಸಮಸ್ಯೆಯನ್ನು ಬಿಡಿಸುವುದು ಕಠಿಣ. ಒಂಟಿ ಕುಟುಂಬಗಳು ಸಂಯುಕ್ತ ಕುಟುಂಬಗಳ ಸ್ಥೈರ್ಯ ಮತ್ತು ಪರಂಪರೆಗಳನ್ನು ಅಳವಡಿಸಿಕೊಳ್ಳಬೇಕು; ಸಂಯುಕ್ತ ಕುಟುಂಬಗಳು ಒಂಟಿ ಕುಟುಂಬಗಳ ಸುಮಧುರ ಜೀವನಕ್ಕೆ ಆಸ್ಪದ ಕೊಡಬೇಕು.

ಈಚೆಗೆ ಕೆಲವರು ಸಮಾಜದಿಂದ ಕುಟುಂಬದ ಉಚ್ಚಾಟನೆಯಾಗಬೇಕೆಂದು ವಾದಿಸುತ್ತಾರೆ. ಹೀಗೆ ವಾದಿಸುವವರು ಕುಟುಂಬದ ವಿಶ್ವವ್ಯಾಪ್ತಿಯನ್ನು ಗಮನಿಸಬೇಕು. ಅದು ಯಾವಾಗಲೂ ಎಲ್ಲೆಡೆಯಲ್ಲಿಯೂ ಎಲ್ಲ ಪ್ರಾಣಿಜೀವಿಗಳಲ್ಲಿಯೂ ಇದ್ದಂತೆ ಕಾಣುತ್ತದೆ; ಮನುಷ್ಯ ಸ್ವಭಾವದ ಮೂಲ ಗುಣ ಧರ್ಮಗಳಿಂದ ರೂಪುಗೊಂಡು ಮುಂದೆ ಅದು ಇತರ ಸಾಮಾಜಿಕ ಆಚಾರ ವಿಚಾರಗಳಿಗೆ ಕಾರಣವಾಗಿದೆ; ಅದು ಮನುಷ್ಯನಿಗೆ ಮೊಟ್ಟಮೊದಲಿನ ಸಾಮಾಜಿಕ ಶಿಕ್ಷಣ ಒದಗಿಸುವ ಕೇಂದ್ರವಾಗಿದೆ; ಮನುಷ್ಯನ ಅನೇಕ ಸಾಮಾಜಿಕ ಸಂಸ್ಥೆಗಳ ಮೂಲ ಘಟಕವಾಗಿದೆ; ಜನರಲ್ಲಿ ಅದು ಅನ್ಯೋನ್ಯ ನಿಷ್ಠೆ ಮತ್ತು ಹೊಣೆಗಾರಿಕೆಯ ಭಾವನೆಗಳನ್ನುಂಟು ಮಾಡುತ್ತ ಬಂದಿದೆ. ಕುಟುಂಬದ ಮಹತ್ವವನ್ನರಿತು ಅದರ ರಕ್ಷಣೆಗಾಗಿ ಅನೇಕ ಸಾಮಾಜಿಕ ಮತ್ತು ರಾಜಕೀಯ ಕಟ್ಟಳೆಗಳನ್ನು ಮಾಡಲಾಗಿದೆ. ಪ್ರತಿ

ಯೊಬ್ಬ ನಾಗರಿಕನೂ ಕೌಟುಂಬಿಕ ಜೀವನದ ಕಟ್ಟಳೆಗಳನ್ನರಿತು ಜಾಣ ತನದಿಂದಲೂ ತಾಳ್ಮೆಯಿಂದಲೂ ನೆಮ್ಮದಿಯಿಂದಲೂ ಬಾಳಬೇಕಾಗಿದೆ.

**೬. ವಿವಾಹಗಳ ಕಾರಣ**

ನಿಯಮಬದ್ಧವಾದ ಸ್ತ್ರೀ-ಪುರುಷ ಸಂಬಂಧವೇ ವಿವಾಹ. ಸ್ತ್ರೀ-ಪುರುಷರ ಪರಸ್ಪರ ಆಕರ್ಷಣೆ ಮಾನವ ಕುಲವನ್ನು ಚಿರಕಾಲ ಬಾಳುವಂತೆ ಮಾಡಬಲ್ಲ ಪ್ರವೃತ್ತಿ. ಈ ಪ್ರವೃತ್ತಿ ಕೇವಲ ಮಾನವ ಕುಲಕ್ಕೆ ವಿಶಿಷ್ಟವಾದುದಲ್ಲ. ನಿಜವಾಗಿ ನೋಡಿದರೆ ಇದು ಎಲ್ಲ ಪಶು-ಪಕ್ಷಿಗಳಲ್ಲಿಯೂ ಕಂಡು ಬರುತ್ತದೆ. ಆದರೆ ಮನುಷ್ಯನ ವೈಶಿಷ್ಟ್ಯವಿಷ್ಟೇ ಅವನು ತನ್ನ ಅನುಭವಸಿದ್ಧ ಜ್ಞಾನಬಲದಿಂದ ಈ ಪ್ರವೃತ್ತಿಯು ಪವಿತ್ರ ನಿಯಮಗಳಿಗೆ ಅನುಗುಣವಾಗಿ ಪ್ರವಹಿಸುವಂತೆ ಮಾಡಿದ್ದಾನೆ; ಸ್ತ್ರೀ-ಪುರುಷ ಸಂಬಂಧಕ್ಕೆ ಸಾಮಾಜಿಕ ಧಾರ್ಮಿಕ ಮತ್ತು ಆರ್ಥಿಕ ವಿಚಾರಗಳನ್ನು ಜೋಡಿಸಿದ್ದಾನೆ. ಆದುದರಿಂದ ಬೇರೆ ಬೇರೆ ಜನಾಂಗಗಳ ವೈವಾಹಿಕ ನಿಯಮಗಳಲ್ಲಿ ಬಹಳ ವ್ಯತ್ಯಾಸವಿದ್ದುದು ಕಂಡುಬರುತ್ತದೆ.

ವಿವಾಹದ ನಿಯಮಗಳು ನಾಗರಿಕ ಜನಾಂಗಗಳಲ್ಲಿ ನಿಷ್ಠುರವಾಗಿವೆಯೆಂದೂ ಅನಾಗರಿಕ ಜನಾಂಗಗಳಲ್ಲಿ ಸಿಥಿಲವಾಗಿವೆಯೆಂದೂ ಬಹುಜನರ ತಿಳುವಳಿಕೆ. ಆದರೆ ವಸ್ತುಸ್ಥಿತಿ ಈ ತಿಳುವಳಿಕೆಗೆ ವಿರೋಧವಾಗಿದೆ. ಕಾಡು ಜನಾಂಗಗಳ ಇರುವಿಕೆಯನ್ನು ಅಭ್ಯಸಿಸಿದ ಎಲ್ಲ ಶಾಸ್ತ್ರಜ್ಞರೂ ಅಪವಿತ್ರ ಸ್ತ್ರೀ ಪುರುಷ ಸಂಬಂಧದ ಬಗ್ಗೆ ಅವರಲ್ಲಿರುವ ತೀಕ್ಷ್ಣ ಭಯವನ್ನು ಎತ್ತಿ ತೋರಿಸಿದ್ದಾರೆ. ಫಿಜೀ ನಡುಗಡ್ಡೆಯ ಒಂದು ಕಾಡು ಜನಾಂಗದಲ್ಲಿ ಅತ್ತೆಯು ಅಳಿಯನ ಮುಖವನ್ನಾಗಲಿ ಇಲ್ಲವೆ ಅಳಿಯನು ಅತ್ತೆಯ ಮುಖವನ್ನಾಗಲಿ ಆಜನ್ಮ ನೋಡಕೂಡದಂತೆ. ಈ ನಿಯಮ ಮುರಿದವರಿಗೆ ಮರಣದಂಡನೆಯೊಂದೇ ತಕ್ಕ ಶಿಕ್ಷೆಯಂತೆ. ಇಂತಹ ನಿಷ್ಠುರ ನಿಯಮಗಳಿಗೆ ಕಾರಣವಿಷ್ಟೇ ಇರಬಹುದು; ಅಪವಿತ್ರ ಸ್ತ್ರೀಪುರುಷ ಸಂಬಂಧದಿಂದ ಒದಗಬಹುದಾದ ಶಾರೀರಕ ದುಃಸ್ಥಿತಿಗೆ ಕಾಡು ಜನಾಂಗಗಳಲ್ಲಿ ಪರಿಹಾರೋಪಾಯವಿರಲಿಕ್ಕಿಲ್ಲ. ಇದರಿಂದ ಜನಾಂಗವನ್ನು ರಕ್ಷಿಸಲು ಅವರು ನಿಷ್ಠುರ ನಿಯಮಗಳನ್ನು ಮಾಡಿರಬೇಕು. ನಾಗರಿಕ ಜನಾಂಗಗಳಲ್ಲಿ ಪ್ರಚಲಿತವಿರುವ ವೈವಾಹಿಕ ನಿಯಮಗಳ ಹಿನ್ನೆಲೆಯಲ್ಲಿಯೂ ಈ ಕಾರಣವು ಅಡಗಿದೆಯೆಂದು ಊಹಿಸಬಹುದು.

## ೩. ವಿವಾಹದ ಪ್ರಕಾರಗಳು.

ಇಲ್ಲಿ ಆಯಾ ಜನಾಂಗಗಳಲ್ಲಿ ಪ್ರಚಲಿತವಿರುವ ವೈವಾಹಿಕ ಸಾಂಪ್ರದಾಯಗಳನ್ನೆಲ್ಲ ವಿವರಿಸುವದು ಅಪ್ರಸ್ತುತ. ಅವುಗಳಿಗೆ ಸಂಬಂಧಿಸಿದ ಕೆಲವು ಸಾಮಾನ್ಯ ವಿಷಯಗಳನ್ನು ತಿಳಿದುಕೊಂಡರೆ ಸಾಕು.

ಹಿಂದೂ ಸಮಾಜದಲ್ಲಿ ಬಹುತರವಾಗಿ ವಿವಾಹಗಳು ಹಿರಿಯರ ಸಮ್ಮತಿಯ ಮೇರೆಗೆ ಜರಗುತ್ತವೆ. ಈ ನಿಯಮಕ್ಕೆ ಅಪವಾದಗಳು ಹೆಚ್ಚಾಗ ಹತ್ತಿವೆ; ಮಹಮ್ಮದೀಯರಲ್ಲಿ ಹಿರಿಯರ ಸಮ್ಮತಿಗೆ ಪ್ರಾಶಸ್ತ್ಯವಿದೆ. ಕ್ರೈಸ್ತರಲ್ಲಿ ವಿವಾಹವಾಗುವವರ ಪರಸ್ಪರ ಒಪ್ಪಿಗೆ ಪ್ರಕಟವಾದ ಮೇಲೆ ಹಿರಿಯರ ಸಮ್ಮತಿಯನ್ನು ಕೇಳುವ ರೂಢಿಯಿದೆ. ಹಿರಿಯರು ಕುಟುಂಬದ ಗೌರವ, ಮಕ್ಕಳ ಮುಂದಿನ ಆರ್ಥಿಕ ಸ್ಥಿತಿಗತಿಗಳ ದೃಷ್ಟಿಯಿಂದ ವಿವಾಹಗಳಿಗೆ ಸಮ್ಮತಿಸುತ್ತಾರೆ. ಕೆಲವು ಸಲ ಅವರು ಕನ್ಯಾಶುಲ್ಕ ಇಲ್ಲವೆ ವರದಕ್ಷಿಣೆಗಳನ್ನು ಅಪೇಕ್ಷಿಸುವದೂ ಉಂಟು. ಕುಟುಂಬದ ಸ್ಥಿತಿ ಸುಧಾರಿಸಿಕೊಳ್ಳಲು ತಮ್ಮ ಮಕ್ಕಳನ್ನು ಅನುಚಿತ ವಿವಾಹ ಸಂಬಂಧದಲ್ಲಿ ತಳ್ಳುವಂತಹ ನಿರ್ದಯ ಹಿರಿಯರೂ ಉಂಟು. ಆದರೂ ವಿವಾಹದ ವಿಷಯದಲ್ಲಿ ಅಂತಃಕರಣದಿಂದ ಸಾಕಿ ಸಲುಹಿದ ತಂದೆತಾಯಿಗಳ ಮಾತಿಗೆ ಬೆಲೆಯಿರಲೇಬೇಕು. ಹಿರಿಯರು ತಮ್ಮ ಮಕ್ಕಳ ಬೇಕು ಬೇಡಗಳನ್ನರಿತು ವಿವಾಹ ನಿಶ್ಚಯಿಸುವದು ಒಳಿತು.

ಒಂದಾನೊಂದು ಕಾಲಕ್ಕೆ ಬಹುಪತೀತ್ವ ವಿವಾಹಗಳು ಜರಗುತ್ತಿದ್ದವು. ದ್ರೌಪದಿಯು ಪಂಚ ಪಾಂಡವರನ್ನು ವಿವಾಹವಾದ ಸಂಗತಿಯು ಪುರಾಣ ಪ್ರಸಿದ್ಧವಿದೆ. ಆದರೆ ಆ ಕಾಲದ ಪುರುಷ ಪ್ರಾಬಲ್ಯ ಸಮಾಜದಲ್ಲಿ ಈ ಬಗೆಯ ವಿವಾಹಗಳು ಸಾರ್ವತ್ರಿಕವಾಗಲಿಲ್ಲ. ಅವು ನೀತಿಗೆ ವಿರೋಧವಾದವುಗಳೆಂದು ತೀರ್ಮಾನಿಸಲ್ಪಟ್ಟಿರಬೇಕು. ಇದಕ್ಕೆ ವಿರೋಧವಾದ ಬಹುಪತ್ನೀತ್ವ ವಿವಾಹಗಳು ಮಾತ್ರ ಇಂದಿಗೂ ನಡೆಯುತ್ತವೆ. ಉದರ ಪೋಷಣೆ ಭಾರ ಹೊರಬಲ್ಲ ಹಿಂದೂ ಪುರುಷನು ಬೇಕಾದಷ್ಟು ಸ್ತ್ರೀಯರನ್ನು ಮದುವೆಯಾಗಬಲ್ಲನು. ಈ ಮಾತಿಗೆ ಶಾಸ್ತ್ರದ ವಿರೋಧವಿಲ್ಲ. ಮಹಮ್ಮದೀಯನು ನಾಲ್ಕು ಸ್ತ್ರೀಯರನ್ನು ವಿವಾಹವಾಗಲು ಅಡ್ಡಿಯಿಲ್ಲವೆಂದು ಶರಿಯತ್ ಹೇಳುತ್ತದೆ. ಕ್ರೈಸ್ತರು ಮಾತ್ರ ಏಕ ಪತ್ನೀತ್ವಕ್ಕೆ ಅಂಟಿಕೊಂಡಿದ್ದಾರೆ. ಅದೇ

ವಿಹಿತವೆಂದು ಬಹುಜನರ ತಿಳುವಳಿಕೆ. ಶಾಸ್ತ್ರ ಶರಿಯತ್ತುಗಳು ಏನೇ ಹೇಳಲಿ, ಜನರು ಏಕಪತ್ನೀತ್ವಕ್ಕೆ ಮಾರುಹೋಗಿದ್ದಾರೆ. ಬಹು ಪತ್ನೀತ್ವ ವಿವಾಹಗಳು ಈ ಸಾಮಾನ್ಯ ನಿಯಮಕ್ಕೆ ಅಪವಾದಗಳಿದ್ದಂತಿವೆ.

ಹಿಂದೂ ಸಮಾಜವೂ ಕ್ಯಾಥೋಲಿಕ್ ಪಂಥವೂ ವಿವಾಹವನ್ನು ಧರ್ಮಬಂಧನವೆಂದು ಗಣಿಸುತ್ತವೆ. ಕೇವಲ ಲೈಂಗಿಕ ಇಲ್ಲವೆ ಸಂತಾನ ಪ್ರಾಪ್ತಿಯ ಇಚ್ಛೆಗಳೇ ವಿವಾಹಕ್ಕೆ ಕಾರಣವಾಗಿರದೆ ದೇವ ಸಂಕಲ್ಪವು ಸ್ತ್ರೀ-ಪುರುಷರನ್ನು ಒಂದು ಗೂಡಿಸುತ್ತದೆಯೆಂದು ಭಾವಿಸಲಾಗುತ್ತದೆ. ಈ ಭಾವನೆಗೆ ಪ್ರತ್ಯಕ್ಷ ಅನುಭವದ ಬೆಂಬಲವಿಲ್ಲದಿದ್ದರೂ ಧಾರ್ಮಿಕ ಶ್ರದ್ಧೆಯ ಬೆಂಬಲವಿದೆ. ಈ ಭಾವನೆಯಿಂದ ಪ್ರೇರಿತವಾದ ವಿವಾಹವನ್ನು ಧಾರ್ಮಿಕ ವಿವಾಹವೆಂದು ಕರೆಯಬಹುದು. ಈ ವಿವಾಹದಲ್ಲಿ ವಿಚ್ಛೇದನೆಗೆ ಆಸ್ಪದವಿಲ್ಲ. ಷಂಢತ್ವ, ಕ್ರೌರ್ಯ ಮತ್ತು ರೋಗ ರುಜಿನಗಳು ಸಹ ವಿವಾಹ ವಿಚ್ಛೇದನೆಗೆ ಸಕಾರಣಗಳಲ್ಲವಂತೆ, ಯಾಕೆಂದರೆ ದೇವ ಸಂಕಲ್ಪದಲ್ಲಿ ಈ ದೈಹಿಕ ಕಾರಣಗಳಿಗೆ ಸ್ಥಾನವೇ ಇಲ್ಲ. ಹಿಂದೂ ಕಾಯ್ದೆಯ ತಿದ್ದುಪಡೆಯ ಸೂಚನೆಗಳಲ್ಲಿ ಈ ದೇವಸಂಕಲ್ಪದ ನಿಷ್ಠುರತೆಯನ್ನು ತಗ್ಗಿಸುವ ಪ್ರಯತ್ನವಿದೆ.

ಮಹಮ್ಮದೀಯರೂ ಪ್ರೊಟೆಸ್ಟಂಟ ಪಂಥದವರೂ ವಿವಾಹವನ್ನು ಮೂಲತಃ ಒಂದು ಒಡಂಬಡಿಕೆಯೆಂದು ಭಾವಿಸುತ್ತಾರೆ. ಆದರೂ ಅವರು ವಿವಾಹಗಳನ್ನು ಧಾರ್ಮಿಕ ಆಚರಣೆಗಳಿಗೆ ಅನುಗುಣವಾಗಿ ನೆರವೇರಿಸುತ್ತಾರೆ. ಅವರು ಸಕಾರಣಗಳಿಗಾಗಿ ವಿವಾಹ ವಿಚ್ಛೇದನೆಯನ್ನು ಒಪ್ಪುತ್ತಾರೆ. ಮಹಮ್ಮದೀಯರಲ್ಲಿ ಪತಿಯು ಮನಸ್ಸು ಮಾಡಿದರೆ ವಿಚ್ಛೇದನೆಯು ಬಹು ಸುಲಭ. ವಿವಾಹದ ಸಮಯಕ್ಕೆ ತಾನು ಒಪ್ಪಿಕೊಂಡ ಕನ್ಯಾಶುಲ್ಕವನ್ನು ಕೊಟ್ಟು ಬೇಕಾದಾಗ ಪತ್ನಿಯನ್ನು ದೂರೀಕರಿಸಬಹುದು. ಆದರೆ ಪತ್ನಿಯು ಬಿಡುಗಡೆ ಹೊಂದಬೇಕಾದರೆ ಪತಿಯ ಕ್ರೂರತನವನ್ನು ಸಿದ್ಧಮಾಡಿಕೊಡಬೇಕಾಗುತ್ತದೆ. ಹೀಗೆ ಮಹಮ್ಮದೀಯ ಶಾಸನವು ಸ್ತ್ರೀ-ಪುರುಷರನ್ನು ಈ ವಿಷಯದಲ್ಲಿ ಸಮದೃಷ್ಟಿಯಿಂದ ನೋಡಿಲ್ಲ. ಪ್ರೊಟೆಸ್ಟಂಟರು ಮಾತ್ರ ಕ್ರೂರತನ, ಬಹುದಿನ ಅಗಲಿರುವಿಕೆ, ಅನ್ಯರ ಸಂಗಡ ಗೌಪ್ಯ ಸಂಬಂಧ, ರೋಗ ರುಜಿನಗಳು ಮೊದಲಾದ ಕಾರಣಗಳಿಗಾಗಿ ವಿವಾಹ ವಿಚ್ಛೇದನೆಯನ್ನು ಪಡೆಯಲು ಸ್ತ್ರೀ-ಪುರುಷರಿಬ್ಬರಿಗೂ ಅವಕಾಶವನ್ನಿತ್ತಿದ್ದಾರೆ. ನಿಷ್ಕಾರಣವಾದ ವಿಚ್ಛೇದನೆಯನ್ನು ಮಾತ್ರ ಈ ಪಂಥದವರೂ ಒಪ್ಪುವದಿಲ್ಲ.

ಈಚೆಗೆ ಪ್ರೇಮ ವಿವಾಹಗಳು ನಡೆಯುತ್ತಿವೆ. ದುಷ್ಯಂತನು ಶಕುಂತಲೆಯನ್ನು ವರಿಸಿದ ಗಾಂಧರ್ವ ವಿವಾಹ ಪದ್ಧತಿಯೇ ಇದು. ಇಂದಿನ ಯುಗದಲ್ಲಿ ಸ್ವಯಂವರಗಳು ಅಪರೂಪವಾಗಿದ್ದರೂ ಗಾಂಧರ್ವ ವಿವಾಹಗಳೇನೂ ಅಪರೂಪವಾಗಿಲ್ಲ. ಅಂದಿನ ಕಣ್ವಮಹಾಮುನಿಗಳ ಸ್ಥಾನವನ್ನು ಇಂದು ಸರಕಾರೀ ನೋಂದಣಿ ಕಚೇರಿಗಳು ಪಡೆದಿವೆ. ಬೇರೆ ಬೇರೆ ಪಂಥಗಳಿಗೆ ಸೇರಿದ ವಯಸ್ಕ ಸ್ತ್ರೀ-ಪುರುಷರು ಗೆಳೆಯರ ಸಮ್ಮುಖದಲ್ಲಿ ತಮ್ಮ ವಿವಾಹ ಸಂಬಂಧವನ್ನು ನೋಂದಣಿ ಕಚೇರಿಯಲ್ಲಿ ನೋಂದಾಯಿಸಬಹುದು. ಸೋವ್ಹಿಯೆಟ ರಶಿಯಾದಲ್ಲಿ ಈ ಪದ್ಧತಿಯು ಸಾರ್ವತ್ರಿಕವಾಗಿದೆ. ನೋಂದಾಯಿಸುವ ಪೂರ್ವದಲ್ಲಿಯೇ ಸಂಬಂಧ ಬೆಳೆಸಿ ಮಗುವನ್ನು ಹೆತ್ತ ಸ್ತ್ರೀ-ಪುರುಷರು ಸಹ ಅಲ್ಲಿ ತಮ್ಮ ವಿವಾಹವನ್ನು ನೋಂದಾಯಿಸಬಹುದು. ಉಳಿದ ದೇಶಗಳಲ್ಲಿ ನಿಯಮಗಳು ಇಷ್ಟು ಶಿಥಿಲವಾಗಿಲ್ಲ. ಈ ವಿವಾಹಗಳಿಗೆ ಸ್ತ್ರೀ-ಪುರುಷರ ಪರಸ್ಪರ ಪ್ರೇಮವೇ ಮೂಲ ಕಾರಣ. ಅಂದಮೇಲೆ ಪ್ರೇಮವಿರುವ ವರೆಗೆ ಮಾತ್ರ ಇವು ಬಾಳಬಲ್ಲವು. ಪ್ರೇಮದ ಅಭಾವದ ಕಾರಣಕ್ಕಾಗಿಯೇ ವಿವಾಹ ವಿಚ್ಛೇದನೆಯನ್ನು ಬೇಡಬಹುದು. ಪ್ರಿನ್ಸ ಆಲೀಖಾನ ಮತ್ತು ನಟಿ ರೀಟಾ ಹೇವರ್ಥ ಇವರ ವಿವಾಹದ ನಿದರ್ಶನವು ಈ ಮಾತನ್ನು ಸ್ಪಷ್ಟಪಡಿಸುತ್ತದೆ.

**ಆ. ವಿವಾಹಕ್ಕೆ ಸಂಬಂಧಿಸಿದ ಸಮಸ್ಯೆಗಳು**

ಧಾರ್ಮಿಕ ವಿವಾಹಗಳು ಪ್ರಚಲಿತವಿರುವ ಸಮಾಜಗಳಲ್ಲಿ ಗೌಪ್ಯ ಪ್ರೇಮಿಗಳು ವೇಶ್ಯೆಯರು, ಶಾಸನ ಬಾಹಿರ ಮಕ್ಕಳು ಇರುವುದು ಸ್ವಾಭಾವಿಕ. ಮನುಷ್ಯನ ವ್ಯಕ್ತಿತ್ವವನ್ನು ಗೌರವಿಸುವ ಯಾವ ಸಮಾಜವೂ ಈ ದೋಷಗಳನ್ನು ಕಡೆಗಣಿಸಕೂಡದು. ಇತರ ವಿವಾಹ ಪದ್ಧತಿಗಳು ಪ್ರಚಲಿತವಿರುವ ಸಮಾಜಗಳಲ್ಲಿ ಈ ದೋಷಗಳು ಇರುವುದಿಲ್ಲೆಂದು ಇಲ್ಲಿ ಪ್ರತಿವಾದಿಸುತ್ತಿಲ್ಲ. ಕೇವಲ ದೈಹಿಕ ಸುಖೋಪಾಸಕ ಜನತೆಯಲ್ಲಿ ವೇಶ್ಯಾವೃತ್ತಿಯು ಪರಮಾವಧಿಗೆ ಮುಟ್ಟಿದ ನಿದರ್ಶನಗಳೂ ಜಗತ್ತಿನಲ್ಲಿವೆ. ಆದರೆ ಸ್ತ್ರೀ-ಪುರುಷರ ಸಮತೆಯ ಭಾವನೆಯ ಮೇಲೆ ಕಟ್ಟಲ್ಪಟ್ಟ ವಿವಾಹ ಪದ್ಧತಿಯು ಬಳಕೆಯಲ್ಲಿರುವ ಜನಾಂಗಗಳಲ್ಲಿ ಈ ದೋಷಗಳು ಕಡಿಮೆಯಾಗಬಹುದೆಂದು ಮಾತ್ರ ಹೇಳಬಹುದು.

ಅನಿರ್ಬಂಧಿತ ವಿವಾಹ ವಿಚ್ಛೇದನೆಯು ಹೇಯವಾದುದೆಂದೂ ಸಮಾಜ ಸ್ವಾಸ್ಥ್ಯೆಗೆ ಘಾತಕವಾದುದೆಂದೂ ಕ್ರಾಂತಿಯ ನಂತರದ ರಶಿಯದ ಅನುಭವದಿಂದ ಕಂಡುಬಂದಿದೆ. ಆದರಿಂದ ಜನತೆಯ ದೇಹ ಸ್ಥಿತಿಯು ಕುಗ್ಗುವದಲ್ಲದೆ ಅವರ ನೀತಿ ಮಟ್ಟವೂ ಇಳಿಯುವುದು. ಮಕ್ಕಳ ಪೋಷಣೆಯ ವಿಷಯದಲ್ಲಿ ಉಂಟಾಗುವ ಹೊಣೆಯ ಅಭಾವವು ಅವುಗಳಿಗಿಂತಲೂ ಹೆಚ್ಚಿನ ದುಷ್ಪರಿಣಾಮ. ಹೆತ್ತ ಮಕ್ಕಳ ಪೋಷಣೆಯನ್ನು ದಕ್ಷತೆಯಿಂದ ನಿರ್ವಹಿಸದ ಯಾವ ವಿವಾಹ ಪದ್ಧತಿಯೂ ನಾಗರಿಕ ಪದ್ಧತಿಯೆನಿಸಲಾರದು. ಈ ಮಾತನ್ನು ಅನುಲಕ್ಷಿಸಿ ಇಂದಿನ ರಶಿಯಾ ಸರಕಾರವು ವಿಚ್ಛೇದನೆ ಬೇಡುವವರಿಂದ ಮಕ್ಕಳ ಪೋಷಣೆಯ ಬಗ್ಗೆ ನಿಶ್ಚಿತ ಆಶ್ವಾಸನವನ್ನು ಕೇಳುತ್ತದೆ. ಇತರ ದೇಶಗಳಲ್ಲಿಯೂ ವಿವಾಹ ವಿಚ್ಛೇದನೆಯ ನಿಯಮಗಳು ಬಿಗುವಾಗಿವೆಯೆಂದು ಹೇಳಬಹುದು. ಇದು ಒಳ್ಳೆಯದೇ ಸರಿ.

ಹಿಂದೂ ಸಮಾಜದಲ್ಲಿ ಸಗೋತ್ರ ಸಪಿಂಡ ಬಂಧುಗಳಲ್ಲಿ ವಿವಾಹ ಸಂಬಂಧವು ನಿಷಿದ್ಧವಿದೆ. ಅಂದರೆ ತಾಯಿ ಅಕ್ಕತಂಗಿ, ಮಗಳು, ಮೊಮ್ಮಗಳು ಮೊದಲಾದವರನ್ನು ವಿವಾಹವಾಗಲು ಬರುವುದಿಲ್ಲ. ಉಳಿದ ಸಮಾಜಗಳಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆ ಇದೇ ಬಗೆಯ ಸಮೀಪದ ರಕ್ತ ಸಂಬಂಧಿಕರ ನಡುವೆ ವಿವಾಹಗಳು ನಡೆಯುವುದಿಲ್ಲ. ಈ ನಿಷೇಧಕ್ಕೆ ಕೆಲವರು ದೈಹಿಕ ಕಾರಣವನ್ನು ಕೊಡುತ್ತಾರೆ. ಸಮೀಪದ ರಕ್ತಸಂಬಂಧಿಕರಲ್ಲಿ ವಿವಾಹವಾದರೆ ಅವರ ಪೀಳಿಗೆಗಳ ದೇಹದಾರ್ಢ್ಯವು ಕುಗ್ಗುವುದೆಂದು ಹೇಳುತ್ತಾರೆ. ಆದರೆ ಇಲ್ಲಿ ನೈತಿಕ ಕಾರಣವೇ ಹೆಚ್ಚು ಮಹತ್ವದ್ದಾಗಿದೆ. ಈ ಬಗೆಯ ನೀತಿಯಿಂದಲೇ ಮನುಷ್ಯನು ತಾನು ಇತರ ಪ್ರಾಣಿಗಳಿಗಿಂತಲೂ ಶ್ರೇಷ್ಠನೆಂಬ ಮಾತನ್ನು ತೋರಿಸಿ ಕೊಡುತ್ತಾನೆ.

ವಿವಾಹ ಪದ್ಧತಿಯ ಜೊತೆಗೆ ಆರ್ಥಿಕ ವಿಚಾರಗಳು ಹೇಗೆ ತಳಕು ಬಿದ್ದಿವೆಯೆಂಬುದನ್ನು ಪರಿಶೀಲಿಸುವದು ಬಹಳ ತೊಡಕಾದ ವಿಷಯ. ಹಿಂದೂ ಸಮಾಜದಲ್ಲಿ ಸ್ತ್ರೀಯು ವಿವಾಹಿತಳಾದಕೂಡಲೇ ತನ್ನ ಪಿತನ ಗೋತ್ರವನ್ನು ಕಳೆದುಕೊಂಡು ಪತಿಯ ಗೋತ್ರವನ್ನು ಪಡೆಯುತ್ತಾಳೆ. ಅಣ್ಣ ತಮ್ಮಂದಿರಿರುವ ವರೆಗೆ ಆಕೆಗೆ ತನ್ನ ತವರುಮನೆಯ ಆಸ್ತಿಯ ಮೇಲೆ ಯಾವ ಅಧಿಕಾರವೂ ಉಳಿಯುವದಿಲ್ಲ. ವಿವಾಹದ ಸಮಯಕ್ಕೆ ಆಕೆಗೆ ತವ

ರವರು ಕೊಟ್ಟ ಕಾಣಿಕೆ ಮಾತ್ರ ಆಕೆಯ ಸ್ತ್ರೀಧನವಾಗುತ್ತದೆ. ಪತಿ, ಪತಿಯ ಬಂಧುಗಳು, ಗಂಡುಮಕ್ಕಳು ಇರುವವರೆಗೂ ಆಕೆಗೆ ಪತಿಯ ಮನೆಯ ಆಸ್ತಿಯನ್ನು ಸ್ವತಂತ್ರವಾಗಿ ಉಪಭೋಗಿಸಲು ಬರುವುದಿಲ್ಲ. ಇವರಿಲ್ಲದಿರುವಾಗಲೂ ಆಕೆಯು ತನ್ನ ಪತಿಯ ಆಸ್ತಿಯನ್ನು ಕೇವಲ ಉಪಭೋಗಿಸಲು ಅರ್ಹಳು. ಆಕೆಗೆ ಅವನ್ನು ಮಾರುವ ಹಕ್ಕು ಇರುವದಿಲ್ಲ. ಹೀಗೆ ಹಿಂದೂ ಸಮಾಜದಲ್ಲಿ ಸ್ತ್ರೀಯರಿಗೆ ಪರಿಮಿತ ಆಸ್ತಿಯ ಒಡೆತನದ ಹಕ್ಕು ಇದೆ. ಮಹಮ್ಮದೀಯರಲ್ಲಿ ಸ್ತ್ರೀಯರಿಗೆ ಇದಕ್ಕಿಂತಲೂ ಹೆಚ್ಚಿನ ಆಸ್ತಿಯ ಹಕ್ಕುಗಳಿವೆ. ಅವರಲ್ಲಿ ವಿವಾಹಿತ ಸ್ತ್ರೀಯು ತಂದೆಯ ಮನೆಯ ಆಸ್ತಿಯಲ್ಲಿ ತನ್ನ ಹಕ್ಕನ್ನು ಕಳೆದುಕೊಳ್ಳುವದಿಲ್ಲ. ಪತಿಯ ಆಸ್ತಿಯಲ್ಲಿಯೂ ಅವನ ಮರಣ ನಂತರ ಆಕೆಗೆ ಒಂದು ನಿರ್ದಿಷ್ಟ ಪಾಲು ದೊರೆಯುತ್ತದೆ. ಇದಲ್ಲದೆ ವಿವಾಹದ ಸಮಯಕ್ಕೆ ನಿಶ್ಚಿತ ಪಡಿಸಿದ "ನಿಕಾಹ್" ಹಣವನ್ನು ಆಕೆಯು ವಿಚ್ಛೇದನೆಯ ಕಾಲಕ್ಕೆ ಪತಿಯಿಂದ ಪಡೆಯಬಲ್ಲಳು. ಇನ್ನು ಕ್ರೈಸ್ತರಲ್ಲಿ ವಿವಾಹದ ಸಮಯಕ್ಕೆ ತಂದೆಯು ತನ್ನ ಮಗಳಿಗೆ ಕೆಲವೊಂದು ಆಸ್ತಿಯನ್ನು ಕೊಡುವ ಪರಿಪಾಠವಿದೆ. ಇಂತಹ ಆಸ್ತಿಯನ್ನು ಉಪಭೋಗ ಮಾಡುವ ಪೂರ್ವದಲ್ಲಿ ಪತ್ನಿಯು ಪತಿಯ ಅನುಮತಿಯನ್ನು ಪಡೆಯಬೇಕೆಂಬ ರೂಢಿಯಿತ್ತು. ಆದರೆ ಆ ರೂಢಿಯು ಈಗ ತಳ್ಳಿ ಹಾಕಲ್ಪಟ್ಟಿದೆ. ಪತಿಯು ಮೃತ್ಯು ಪತ್ರದಿಂದ ಕೊಡ– ಮಾಡಿದ ಇಲ್ಲವೆ ಹಾಗೇ ಬಿಟ್ಟು ಹೋದ ಆಸ್ತಿಗೆ ಪತ್ನಿಯು ಬಾಧ್ಯಸ್ಥಳಾಗುತ್ತಾಳೆ. ಹೀಗೆ: ಕ್ರೈಸ್ತರಲ್ಲಿ ಸ್ತ್ರೀಯರಿಗೆ ಆಸ್ತಿಯ ವಿಷಯದಲ್ಲಿ ಹೆಚ್ಚು ಹಕ್ಕುಗಳಿವೆ. ವಿವಾಹಿತ ಸ್ತ್ರೀಯರ ಆಸ್ತಿಯ ಹಕ್ಕುಗಳು ಆಯಾ ಸಮಾಜದಲ್ಲಿ ಅವರಿಗೆ ಇರುವಸ್ಥಾನ ಮಾನಗಳನ್ನು ಸೂಚಿಸುತ್ತವೆ.

ವಿವಾಹದ ವಿಷಯದಲ್ಲಿ ಹಿಂದೂ ಸಮಾಜಕ್ಕೆ ವಿಶಿಷ್ಟವಾದ ಕೆಲವು ಸಮಸ್ಯೆಗಳಿವೆ. ಸತಿಹೋಗುವ ಪದ್ಧತಿಯು ಅಮಾನುಷವಾದುದೆಂದು ಬಹು ದಿನಗಳ ಹಿಂದೆಯೇ ನಿರ್ಬಂಧಿಸಲಾಗಿದೆ. ಶಾರದಾ ಕಾಯ್ದೆಯು ಬಾಲ ವಿವಾಹವನ್ನು ಪ್ರತಿಬಂಧಿಸಿದೆ. ವಿವಾಹವಾಗುವಾಗ ಬಾಲಕನು ೧೮ ವಯಸ್ಸಿಗೆ ಮೇಲ್ಪಟ್ಟಿರಬೇಕು, ಬಾಲಕಿಯು ೧೪ ವಯಸ್ಸಿಗೆ ಮೇಲ್ಪಟ್ಟಿರಬೇಕು ಎಂದು ನಿರ್ದೇಶಿಸಲಾಗಿದೆ. ಆದರೆ ಈ ನಿರ್ಬಂಧವನ್ನು ಮುರಿದವರ ಮೇಲೆ ಸರಕಾರದವರು ತಾವಾಗಿಯೇ ಕಾರ್ಯಾಚರಣೆಯನ್ನು ಕೈಕೊಳ್ಳುವು

ದಿಲ್ಲವಾದುದರಿಂದ ಈ ಕಾಯ್ದೆಯ ಪರಿಮಾಣವು ಅಪೇಕ್ಷಿಸಿದಷ್ಟು ಆಗಿಲ್ಲ. ಸ್ವಜಾತಿಯ ವಿಧವೆಯನ್ನು ವಿವಾಹವಾಗಲು ಇದ್ದ ನಿರ್ಬಂಧವನ್ನು ಈಗ ಕಾಯ್ದೆಯಿಂದ ತೆಗೆದು ಹಾಕಲಾಗಿದೆ. ಹಿಂದೂ ಧರ್ಮಶಾಸ್ತ್ರವು ವಿಜಾತಿಯ ವಿವಾಹವನ್ನು ಮನ್ನಿಸುವದಿಲ್ಲ. ಆದರೆ ಇಂತಹ ವಿವಾಹಗಳನ್ನು ನೋಂದಾಯಿಸಲು ಸರಕಾರವು ಅಡ್ಡಿಮಾಡುವುದಿಲ್ಲ. ಮುಂಬರುವ ಹಿಂದೂ ಕಾಯ್ದೆಯ ತಿದ್ದುಪಡಿಯ ಮಸೂದೆಯಲ್ಲಿ ಹಿಂದೂ ಧರ್ಮದ ಭಿನ್ನ ಜಾತಿಗಳ ಸ್ತ್ರೀ–ಪುರುಷರು ವಿವಾಹವಾಗಬಹುದೆಂಬ ಸೂಚನೆ ಇದೆ. ಮುಂದೆ ಆಗಬೇಕಾದುದು ಹೇಗೆ ಇರಲಿ; ಇಂದು ಕಾಣಬರುವ ಸ್ಥಿತಿಯು ಅಷ್ಟೇನೂ ಪವಿತ್ರವಾಗಿಲ್ಲ. ಇನ್ನೂ ವೃದ್ಧರು ಎಳೆಯ ವಯಸ್ಸಿನ ಬಾಲೆಯರನ್ನು ವಿವಾಹವಾಗುತ್ತಲೇ ಇದ್ದಾರೆ. ಇಂತಹ ವಿಷಮ ವಿವಾಹಗಳು ಮಹಮ್ಮದೀಯರಲ್ಲಿಯೂ ಜರಗುತ್ತವೆ. ಇವುಗಳಿಂದ ಬಾಲವಿಧವೆಯರ ಸಮಸ್ಯೆ ಹಿರಿದಾಗಿದೆ. ಶಾಸ್ತ್ರವು ಏನೇ ಹೇಳಿದರೂ ಬಾಲೆಯರನ್ನು ವಿಷಮ ವಿವಾಹದಲ್ಲಿ ನೂಕುವ ಈ ರೂಢಿಯು ನಾಗರಿಕ ಜನಾಂಗಕ್ಕೆ ಒಪ್ಪದು.

ಹಿಂದೂ ಸಮಾಜದ ವಿವಾಹ ಪದ್ಧತಿಯಲ್ಲಿರುವ ಲೋಪದೋಷಗಳನ್ನು ಆಧುನಿಕ ಸ್ಥಿತ್ಯಂತರಗಳಿಗೆ ಹೊಂದಿಕೆಯಾಗುವಂತೆ ಶಾಸನಗಳಿಂದ ತಿದ್ದಿಕೊಳ್ಳಬಹುದು. ಹೀಗೆ ಮಾಡುವಾಗ ಹಿಂದೂ ಸಮಾಜವು ಇಂತಹ ಬದಲಾವಣೆಗೆ ಸಿದ್ಧವಿದೆಯೋ ಹೇಗೆ ಎಂಬುದನ್ನು ನೋಡಬೇಕು. ಏಕೆಂದರೆ ಕೆಲವು ಸಲ ಶಾಸನದಿಂದ ಮಾಡಿದ ಅವಸರದ ಬದಲಾವಣೆಗೆ ಜನತೆಯ ಪ್ರತೀಕಾರವು ಪ್ರಾಪ್ತವಾದರೆ ಅದರಿಂದ ಸಮಾಜಕ್ಕೆ ಹಿತವಾಗದು. ಈ ಮಾತು ಎಲ್ಲ ಜನಾಂಗಗಳಿಗೂ ಅನ್ವಯಿಸುತ್ತದೆ.

ವಿವಾಹವು ಮನುಷ್ಯನ ಮಾನವೀಯತೆಯನ್ನು ವ್ಯಕ್ತಪಡಿಸುವ ಸಂಸ್ಥೆ. ಹಿಂದಿನ ಕಾಲದ ವೈವಾಹಿಕ ನಿಯಮಗಳು ಇಂದು ಮನುಷ್ಯನಿಗೆ ನಿರ್ಬಂಧಕಾರಿಯಾಗಿರಬಹುದು. ಸ್ತ್ರೀ-ಪುರುಷರ ಸಮತೆ, ಸ್ವಾತಂತ್ರ್ಯ ಮತ್ತು ಸೌಖ್ಯತೆಯ ದೃಷ್ಟಿಯಿಂದ ಅವುಗಳನ್ನು ಪರಿವರ್ತಿಸಿಕೊಳ್ಳಬೇಕು. ಹೀಗೆ ಮಾಡದೆ ನಾಗರಿಕನು ವೈವಾಹಿಕ ನಿಯಮಗಳನ್ನು ತ್ಯಜಿಸಿ ಸ್ವಚ್ಛಂದ ವೃತ್ತಿಯಿಂದ ಜೀವಿಸ ಹತ್ತಿದರೆ ಸ್ವಲ್ಪ ಕಾಲದಲ್ಲಿಯೇ ಸಮಾಜದಲ್ಲಿ ಅರಾಜಕತೆಯುಂಟಾಗಬಹುದು. ಆದರೆ ಮನುಷ್ಯನು ವಿವೇಕಿಯಾಗಿರುವ ವರೆಗೆ ಹೀಗಾಗುವ ಸಂಭವವೇ ಇಲ್ಲ.

## ೯. ಆಸ್ತಿಯ ಸ್ವರೂಪ.

ಒಬ್ಬರ ಒಡೆತನಕ್ಕೆ ಒಳಪಟ್ಟ ವಸ್ತು ಆಸ್ತಿಯೆನಿಸುತ್ತದೆ. ಒಡೆತನದ ಹಕ್ಕುಗಳು ಸಾಮಾಜಿಕ ರೂಢಿ ಮತ್ತು ನಾಡಿನ ಕಾಯ್ದೆಗಳಿಂದ ಉದ್ಭವಿಸುತ್ತವೆ. ಮನುಷ್ಯನು ಕೊಡತಗೊಳ್ಳುವ ವ್ಯವಹಾರದಲ್ಲಿ ಬೆಲೆ ಕಟ್ಟುವ ವಸ್ತುಗಳೆಲ್ಲ ಕೂಡಿ ಸಂಪತ್ತಾಗಿದೆ. ಹವೆಯು ಮನುಷ್ಯನಿಗೆ ಅತ್ಯಂತ ಅವಶ್ಯಕ ವಸ್ತುವಾಗಿದ್ದರೂ ಅದು ವಿಪುಲವಾಗಿ ದೊರೆಯುವದರಿಂದ ಜನರು ಸಾಮಾನ್ಯವಾಗಿ ಅದರ ವ್ಯವಹಾರಿಕ ಬೆಲೆ ಕಟ್ಟುವದಿಲ್ಲ. ಆದ್ದರಿಂದ ಅದು ಸಂಪತ್ತೆನಿಸುವದಿಲ್ಲ. ಆದರೆ ಪರಿಶುದ್ಧ ಹವೆಯ ಕೊರತೆಯಿರುವ ಪಟ್ಟಣಿಗರಿಗೆ ಉತ್ತಮ ಹವೆಯುಳ್ಳ ಮನೆಗಳು ಹೆಚ್ಚು ಬೆಲೆಯುಳ್ಳವೆನಿಸಬಹುದು. ಅಲ್ಲಿ ಉತ್ತಮ ಹವೆಯೂ ಸಹ ಸಂಪತ್ತೆನಿಸವದು. ಇನ್ನು ಸಂಪತ್ತು ಆಸ್ತಿಯೆನಿಸಬೇಕಾದರೆ ಅದು ಒಬ್ಬನ ಒಡೆತನಕ್ಕೊಳಪಟ್ಟಿರಬೇಕು. ಬಯಲಿನಲ್ಲಿ ಬಿದ್ದ ನಾಣ್ಯವು ಸಂಪತ್ತು ಅಹುದು; ಏಕೆಂದರೆ ಅವಕ್ಕೆ ವ್ಯವಹಾರದಲ್ಲಿ ಬೆಲೆಯಿದೆ. ಆದರೆ ಅವನ್ನು ಯಾವನಾದರೊಬ್ಬನು ಎತ್ತಿಕೊಂಡು ತನ್ನದೆಂದು ಹೇಳಿದಾಗ ಅದು ಆಸ್ತಿಯೆನಿಸುತ್ತದೆ.

ಚಂದಕಾಣಿಸುವ ಇಲ್ಲವೆ ಉಪಯುಕ್ತವೆನಿಸುವ ವಸ್ತುಗಳನ್ನು ತೆಗೆದುಕೊಂಡು ತನ್ನವೆಂದು ಹತ್ತರ ಇಟ್ಟುಕೊಳ್ಳುವ ಪ್ರವೃತ್ತಿ ಮನುಷ್ಯನಿಗುಂಟು. ಈ ಪ್ರವೃತ್ತಿಯೇ ಆಸ್ತಿಯ ಮೂಲ–ತಾನು ಪಡೆದ ವಸ್ತುಗಳನ್ನು ತಾನೇ ಉಪಯೋಗಿಸಬೇಕೆಂಬ ಇಚ್ಛೆ, ತಾನು ಕೂಡಹಾಕಿದುದು ತನ್ನ ಮಕ್ಕಳು ಮರಿಗಳಿಗೆ ಇರಲಿ ಎಂಬ ಉದ್ದೇಶ ಇಂದು ದೊರಕಿಸಿದ ವಸ್ತುಗಳು ನಾಳಿನ ಕಠಿಣ ದಿನಗಳಿಗಾಗಿ ಇರಲಿ ಎಂಬ ವಿಚಾರ, ಕೂಡಿಟ್ಟ ಆಸ್ತಿಯ ಸಹಾಯದಿಂದ ಹೆಚ್ಚಿನ ಸಂಪತ್ತನ್ನು ಗಳಿಸಲು ಅನುಕೂಲವೆಂಬ ಜ್ಞಾನ, ಆಸ್ತಿಯ ಬಲದಿಂದ ಇತರರ ಮೇಲೆ ದರ್ಪಮಾಡಲು ಸಹ ಬರುವುದೆಂಬ ಅನುಭವ ಮೊದಲಾದ ಕಾರಣಗಳಿಗಾಗಿ ಮನುಷ್ಯನು ಆಸ್ತಿಯನ್ನು ಗಳಿಸುತ್ತ ಬಂದಿದ್ದಾನೆ.

ಒಂದಾನೊಂದು ಕಾಲಕ್ಕೆ ತಾನು ನಿರ್ಮಿಸಿಕೊಂಡ ಶಿಲಾಯುಧಗಳು ಮಾತ್ರ ಮನುಷ್ಯನ ಆಸ್ತಿಯಾಗಿದ್ದವು. ಬರಬರುತ್ತ ಕೋಲು, ಕೊಡಲಿ, ಬರ್ಚಿ, ಬಿಲ್ಲು, ಬಾಣ, ಬೆಂಕಿ, ಆಹಾರ, ಅಡಿಗೆಯ ಪಾತ್ರೆ ಸಾಕು

ಪ್ರಾಣಿ, ಇರುವ ಮನೆ ಮೊದಲಾದವುಗಳು ಆಸ್ತಿಯಾಗಿ ಪರಿಣಮಿಸಿದವು. ಕೃಷಿಕಲೆಯನ್ನರಿತ ಮೇಲೆ ಭೂಮಿಯು ಸಹ ಆಸ್ತಿಯಾಯಿತು. ಕಷ್ಟ ಪಟ್ಟು ಹದಮಾಡಿ ಬಿತ್ತಿ ಬೆಳೆದ ಭೂಮಿಯನ್ನು ಮನುಷ್ಯನು ತನ್ನದೆಂದು ಭಾವಿಸಿದ್ದು ಸಹಜ. ಅವನು ಅದರಲ್ಲಿ ಇತರರು ಕೈಹಾಕುವುದನ್ನು ಸಹಿ ಸನು. ಮೊದಮೊದಲು ಕೃಷಿ ಕರ್ಮವನ್ನು ಹಲವು ಜನರು ಕೂಡಿ ಮಾಡು ತ್ತಿದ್ದಂತೆ ತೋರುತ್ತದೆ. ಪಿತೃ ಪ್ರಾಧಾನ್ಯ ಕುಟುಂಬಗಳಿದ್ದ ಕಾಲದಲ್ಲಿ ಭೂಮಿಯು ಒಬ್ಬನ ಸೊತ್ತಾಗಿರದೆ ಇಡೀ ಕುಟುಂಬದ ಸೊತ್ತಾಗಿದ್ದಿತೆಂದು ಕಂಡು ಬಂದಿದೆ. ಇಂದು ಭೂಮಿಯೆಲ್ಲ ಇಡೀ ಸಮಾಜದ ಸೊತ್ತೆಂದು ಗಣಿಸಲಾಗುತ್ತಿದ್ದರೂ ಭೂಮಿಯ ಒಡೆತನದ ರೂಪಗಳು ಅನಂತವಾಗಿವೆ. ಆದರೆ ಭೂಗರ್ಭದೊಳಗಿನ ಖನಿಜಗಳಿಗೂ ಆಕಾಶದೊಳಗಿನ ಹವೆಗೂ, ಒಡೆಯರಿಲ್ಲದ ಇತರ ಸಂಪತ್ತಿಗೂ ಸಮಾಜದ ವತಿಯಿಂದ ರಾಜ್ಯವು ಅಧಿಕಾರಿಯಾಗಿದೆ. ಒಂದು ಕಾಲಕ್ಕೆ ಗುಲಾಮರೂ ಆಸ್ತಿಯಾಗಿದ್ದರು. ಅದು ಅಮಾನುಷವಾದುದೆಂದು ನಾಗರಿಕ ಜನಾಂಗಗಳು ಬಿಟ್ಟುಕೊಟ್ಟಿವೆ.

ಆಸ್ತಿಯು ಮೂಲತಃ ಮನುಷ್ಯನ ಪ್ರಗತಿಗೆ ಸಾಧಕವಾಗಿದೆ. ಶಿಲಾ ಯುಧಗಳು ಪ್ರಾಚೀನ ಯುಗದ ಕಾಡು ಮನುಷ್ಯನ ಸ್ವಸಂರಕ್ಷಣೆಯ ಮತ್ತು ಆಹಾರ ದೊರಕಿಸುವ ಕಾರ್ಯಗಳನ್ನು ಸುಲಭ ಗೊಳಿಸಿದವು. ನದೀ ತೀರದ ಫಲವತ್ತಾದ ಭೂಮಿ, ಸಾಕು ಪ್ರಾಣಿಗಳು, ನೌಕೆಗಳು, ವಾಹನಗಳು ಮೊದಲಾದವು ಮನುಷ್ಯನನ್ನು ನಾಗರಿಕ ಸ್ಥಿತಿಗೆ ತರಲು ಸಹಾಯಕವಾದವು. ಸಂಗ್ರಹಿಸಿದ ಆಸ್ತಿಯ ಸಹಾಯದಿಂದ ಒಂದೆರಡು ಶತಮಾನಗಳಲ್ಲಿಯೇ ಅನಂತ ಹೊಸ ಹೊಸ ಕಾರ್ಖಾನೆಗಳನ್ನೂ ಉದ್ದಿ ಮೆಗಳನ್ನೂ ಸ್ಥಾಪಿಸಿ ಮನುಷ್ಯನು ಯುರೋಪ, ಅಮೇರಿಕೆಗಳ ಜೀವನ ಸ್ವರೂಪವನ್ನೇ ಪಲ್ಲಟಗೊಳಿಸಿದ್ದಾನೆ. ಇಂದಿನ ಯುಗದಲ್ಲಿ ಭೂಮಿ, ಖನಿ ಜಗಳು ಮತ್ತು ಯಂತ್ರೋಪಕರಣಗಳು ಅಮೌಲ್ಯವೆಂದು ಗಣಿಸಲ್ಪಡುತ್ತವೆ. ಮಾಣಿಕ ಆಭರಣ ನಾಣ್ಯ ಮೊದಲಾದವುಗಳು ಆ ಅಮೌಲ್ಯ ಆಸ್ತಿಯ ಛಾಯೆಯಂತಿವೆ.

ಮನುಷ್ಯನ ಸಾಹಸ, ಯೋಜನಾಚಾತುರ್ಯ ಮತ್ತು ಸಾಮೂ ಹಿಕ ಪ್ರಯತ್ನಗಳು ಯಂತ್ರೋಪಕರಣಗಳ ಸಹಾಯದಿಂದ ಇಂದು ವಿಪುಲ

ಸಂಪತ್ತನ್ನು ಉತ್ಪಾದನೆ ಮಾಡುವ ಸ್ಥಿತಿಯಲ್ಲಿವೆ. ಈಗಾಗಲೆ ವಿಪುಲ ಯಂತ್ರೋಪಕರಣಗಳನ್ನು ಕೂಡಿಹಾಕಿದ ಮುಂದುವರಿದ ರಾಷ್ಟ್ರಗಳ ಸಹಾಯದಿಂದ ಹಿಂದುಳಿದ ರಾಷ್ಟ್ರಗಳೂ ಮುಂದುವರಿಯಬಲ್ಲವು ಆರ್ಥಿಕ ಸಮೃದ್ಧಿಯಿಂದ ನಾಗರಿಕರಲ್ಲಿ ಸ್ಥೈರ್ಯವು ಉಂಟಾಗಬಲ್ಲದು; ವಿರೋಧಾಭಿಪ್ರಾಯ ಸಹಿಷ್ಣುತೆಯೂ ತಲೆದೋರಬಲ್ಲದು; ಆದರಿಂದ ನಾಗರಿಕ ಸ್ವಾತಂತ್ರ್ಯದ ತಳಹದಿಯೂ ಭದ್ರವಾಗಬಲ್ಲದು.

ಆಸ್ತಿಯು ಮನುಷ್ಯನ ಪ್ರಗತಿಗೆ ಸಾಧಕವಾಗಿದೆಂದು ಒಪ್ಪಿಕೊಳ್ಳಬಹುದಾದರೂ, ಆಸ್ತಿಗಳಿಸುವ ಮೇಲಾಟವ ನಿಮಿತ್ಯ ಅನೇಕ ಯುದ್ಧಗಳು ಜರಗಿವೆಯೆಂಬುದನ್ನು ಮರೆಯಲಾಗದು. ೧೯ ನೆಯ ಶತಮಾನದ ಕೊನೆಯ ಯುರೋಪದ ಜನಾಂಗಗಳು ಆಫ್ರಿಕೆಯನ್ನು ಹಂಚಿಕೊಂಡ ರೀತಿ, ಚೀನ, ಹಿಂದುಸ್ತಾನಗಳನ್ನು ಶೋಷಿಸಿದ ರೀತಿಗಳನ್ನು ನೆನಸಿಕೊಂಡಾಗ ಆಸ್ತಿಗಾಗಿ ಮನುಷ್ಯನು ಏನು ಮಾಡಬಲ್ಲನೆಂಬುದರ ಅರಿವಾಗುತ್ತದೆ. ಚೆಂಗೀಸಖಾನ ಮತ್ತು ಗಝ್ನಿ ಮಹಮ್ಮದನ ದಾಳಿಗಳಿಗೂ ಆಸ್ತಿಯ ದುರಾಸೆಯೇ ಮೂಲ ಕಾರಣ ಆಸ್ತಿಯು ಮನುಷ್ಯನ ಉಪಯೋಗಕ್ಕಾಗಿರುವ ಒಂದು ಸಾಧನ. ಆದನ್ನು ಮರೆತು ದುರಾಸೆಯಿಂದ ಆಸ್ತಿಗಳಿಸಲು ಮೇಲಾಟ ನಡೆಸಿದರೆ ಇಲ್ಲವೆ ಮನುಷ್ಯನಿಗಿಂತಲೂ ಹೆಚ್ಚು ಪ್ರಶಸ್ತಿಯನ್ನು ಕೊಟ್ಟದಾದರೆ ಮನುಷ್ಯನ ಸ್ವಾತಂತ್ರಕ್ಕೆ ಧಕ್ಕೆ ಬರುತ್ತದೆ.

ಆಸ್ತಿಯು ಸಮಾಜದಲ್ಲಿ ಮೇಲು ಕೀಳು ಭಾವನೆಗಳಿಗೂ ಕಾರಣವಾಗಿದೆ. ಸಿರಿವಂತರು ಬಡವರು ಮೊದಲಾದ ವರ್ಗಗಳಿಗೆ ಕಾರಣವಾಗಿದೆ.

### ೧೦. ಆಸ್ತಿಯ ಪ್ರಕಾರಗಳು

ಆಸ್ತಿಯನ್ನು ಸ್ಥಾವರ ಆಸ್ತಿಯೆಂದೂ ಜಂಗಮ ಆಸ್ತಿಯೆಂದೂ ವಿಂಗಡಿಸುತ್ತಾರೆ; ಭೂಮಿ ಮತ್ತು ಭೂಮಿಗೆ ಭದ್ರವಾಗಿ ಹೊಂದಿಕೊಂಡ ಎಲ್ಲ ವಸ್ತುಗಳೂ ಸ್ಥಾವರ ಆಸ್ತಿಯೆನಿಸುತ್ತವೆ; ಭೂಮಿಯಿಂದ ಸುಲಭವಾಗಿ ವಿಂಗಡಿಸಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯಬಹುದಾದ ಎಲ್ಲ ವಸ್ತುಗಳೂ ಜಂಗಮ ಆಸ್ತಿಯೆನಿಸುತ್ತವೆ. ನಾಣ್ಯ, ಆಭರಣ, ವಸ್ತ್ರ, ಆಹಾರಧಾನ್ಯ; ಸಣ್ಣ ಪುಟ್ಟ ಯಂತ್ರ ವಾಹನ ಮೊದಲಾದವು ಜಂಗಮ ಆಸ್ತಿಯೆಂದು ಗಣಿಸಲ್ಪಡುತ್ತವೆ. ಭೂಮಿ, ನದಿ, ಕಾಲುವೆ, ಮನೆ, ಕಾರ

ಖಾನೆ ಮೊದಲಾದವು ಸ್ಥಾವರ ಆಸ್ತಿಯೆಂದು ಗಣಿಸಲ್ಪಡುತ್ತವೆ. ಆದರೆ ಬ್ಯಾಂಕುಗಳಲ್ಲಿ ಇಟ್ಟ ಇಡಗಂಟು ಮತ್ತು ಉದ್ಯೋಗದಲ್ಲಿ ತೊಡಗಿಸಿದ ಪಾಲಿನ ಹಣ ಗ್ರಂಥಕಾರರ ಮತ್ತು ಸಂಶೋಧಕರ ಕಾಯ್ದಿಟ್ಟ ಹಕ್ಕು ಮೊದಲಾದವು ಸ್ಥಾವರವೋ ಜಂಗಮವೋ ಎಂಬ ಪೂರ್ಣ ನಿಷ್ಕರ್ಷೆ ಯಾಗಿಲ್ಲ ಜಂಗಮ ಆಸ್ತಿಯ ಕೊಡತಗೊಳ್ಳುವ ವ್ಯವಹಾರಕ್ಕೂ ಮತ್ತು ಸ್ಥಾವರ ಆಸ್ತಿಯ ಕೊಡತಗೊಳ್ಳುವ ವ್ಯವಹಾರಕ್ಕೂ ಮಹತ್ವದ ವ್ಯತ್ಯಾಸವುಂಟು.

ಆಸ್ತಿಯನ್ನು ಸ್ವಂತ ಆಸ್ತಿಯೆಂದೂ ಸಾರ್ವಜನಿಕ ಆಸ್ತಿಯೆಂದೂ ವಿಂಗಡಿಸುತ್ತಾರೆ. ಒಂದು ವಸ್ತುವನ್ನು ಇತರರಿಗೆ ಅಪಾಯವಾಗದಂತೆ ಉಪಭೋಗಿಸಲು, ದಾನ ಮಾಡಲು ಇಲ್ಲವೆ ವಿಕ್ರಯಿಸಲು ಒಬ್ಬ ವ್ಯಕ್ತಿಗೆ, ಒಂದು ಕುಟುಂಬಕ್ಕೆ ಇಲ್ಲವೆ ಸಂಘಕ್ಕೆ ಸಂಪೂರ್ಣ ಅಧಿಕಾರವಿದ್ದರೆ ಅದು ಸ್ವಂತ ಆಸ್ತಿಯೆನಿಸುವದು. ಹಿಂದೂ ಕುಟುಂಬದ ಪಿತ್ರಾರ್ಜಿತ ಆಸ್ತಿಯು ಸ್ವಂತ ಆಸ್ತಿಯೆಂದೇ ಹೇಳಬೇಕು. ಅನೇಕ ಜನರು ಪಾಲು ಹಾಕಿ ನಡೆಸುವ ಸಾಂಘಿಕ ಉದ್ದಿಮೆ ವ್ಯವಹಾರಗಳು ಸಹ ಸ್ವಂತ ಆಸ್ತಿಯೆನಿಸುತ್ತವೆ. ಟಾಟಾನಗರದ ಕಬ್ಬಿಣ ಕಾರಖಾನೆ, ಮುಂಬಯಿ ಶಹರದ ಜಲ ವಿದ್ಯುತ್ಕೇಂದ್ರ ಮೊದಲಾದವು ಸ್ವಂತ ಆಸ್ತಿಯ ಉದ್ದಿಮೆಗಳು. ಇದಕ್ಕೆ ಪ್ರತಿಯಾಗಿ ಪುರಾತನ ದೇವಾಲಯಗಳು, ಸರಕಾರದವರು ಕಟ್ಟಿಸಿದ ಕೆರೆ, ಕಾಲುವೆ, ಭೂಮಿ, ಕಟ್ಟಡ, ರಸ್ತೆ, ರೇಲ್ವೆ ಮೊದಲಾದವು ಸಾರ್ವಜನಿಕ ಆಸ್ತಿಯೆನಿಸುತ್ತವೆ. ನಗರ ಸಭೆ, ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಆಸ್ತಿಗಳೆಲ್ಲವೂ ಸಾರ್ವಜನಿಕ ಆಸ್ತಿಯಲ್ಲಿ ಸೇರ್ಪಡೆಯಾಗುತ್ತವೆ. ಈ ಬಗೆಯ ಸಾರ್ವಜನಿಕ ಆಸ್ತಿಯನ್ನು ಉಪಭೋಗಿಸುವ ವೆಚ್ಚಮಾಡುವ ಮತ್ತು ವಿಕ್ರಯಿಸುವ ಹಕ್ಕು ಒಂದು ವಿಶಿಷ್ಟವರ್ಗ, ಜಾತಿ, ಪಂಥ ಸಮಾಜ ಇಲ್ಲವೆ ಸರಕಾರಕ್ಕಿರುತ್ತದೆ.

ಪ್ರತಿಯೊಂದು ರಾಜ್ಯದಲ್ಲಿ ಸ್ವಂತ ಆಸ್ತಿ ಮತ್ತು ಸಾರ್ವಜನಿಕ ಆಸ್ತಿಗಳೆರಡೂ ಇರಲೇಬೇಕು. ಆದರೆ ಕೆಲವು ರಾಜ್ಯಗಳಲ್ಲಿ ಸ್ವಂತ ಆಸ್ತಿಯು ಪವಿತ್ರವೆಂದು ಭಾವಿಸಲಾಗುತ್ತದೆ. ಆದರೆ ಅಲ್ಲಿಯೂ ಸಹ ಸ್ವಂತ ಆಸ್ತಿಯ ಉಪಭೋಗಕ್ಕೆ ಒಂದು ಪರಿಮಿತಿ ಇದ್ದೇಇರುತ್ತದೆ. ಸ್ವಂತ ಆಸ್ತಿಯ ಒಡೆ

ಯನು ಅದನ್ನು ಇತರರಿಗೆ ಅಪಾಯವಾಗುವಂತೆ ಉಪಭೋಗಿಸಲು ಸ್ವತಂತ್ರ ನಿರುವುದಿಲ್ಲ. ಒಬ್ಬನ ಮನೆಯ ಗೋಡೆಯು ಬೀಳುವ ಸ್ಥಿತಿಯಲ್ಲಿದ್ದರೆ ನಗರಸಭೆಯವರು ಅದನ್ನು ಸಾರ್ವಜನಿಕ ಹಿತದ ದೃಷ್ಟಿಯಿಂದ ಕೆಡಹಿಸ ಬಹುದು. ಪ್ರತಿಯೊಂದು ರಾಜ್ಯವೂ ಸ್ವಂತ ಆಸ್ತಿಯನ್ನು ಸಾರ್ವಜನಿಕ ಉಪಯೋಗಕ್ಕಾಗಿ ತೆಗೆದುಕೊಳ್ಳುವ ವಿಶೇಷ ಅಧಿಕಾರವನ್ನು ಕಾಯ್ದಿರಿಸಿ ಕೊಂಡಿದೆ. ಆದರೆ ಹೀಗೆ ಮಾಡುವಾಗ ಸರಕಾರವು ಸ್ವಂತ ಆಸ್ತಿಯ ಒಡೆಯನಿಗೆ ಯೋಗ್ಯ ಪರಿಹಾರ ಕೊಡಬೇಕೆನ್ನುವುದೇ ಸ್ವಂತ ಆಸ್ತಿಯ ಪಾವಿತ್ರ್ಯತೆಯ ಮರ್ಮ. ೧೯೧೭ ನೆಯ ರಸಿಯದ ಕ್ರಾಂತಿಯನಂತರ ಆ ದೇಶದಲ್ಲಿ ಸ್ವಂತ ಆಸ್ತಿಯನ್ನು ಪ್ರತಿಫಲವಿಲ್ಲದೆ ಸರಕಾರವು ಕೈವಶ ಪಡಿಸಿಕೊಂಡಿತು. ಅದರಿಂದ ರಶಿಯಾದ ಸಾಮಾನ್ಯ ಜನತೆಗೆ ಯಾವ ವಿಪತ್ತೂ ಸಂಭವಿಸಿದಂತೆ ತೋರುವುದಿಲ್ಲ. ಇಂಗ್ಲಂಡದಲ್ಲಿ ಇಂದು ಸ್ವಂತ ಆಸ್ತಿಯ ಒಡೆಯರಿಗೆ ಅಲ್ಪ ಪ್ರತಿಫಲವನ್ನು ಕೊಟ್ಟು ಖಣಿಗಳು, ವಿದ್ಯುತ್ಕೇಂದ್ರಗಳು, ವಾಹನ ಸೌಕರ್ಯಗಳು, ಬ್ಯಾಂಕುಗಳು ಮೊದಲಾದುವನ್ನು ಸರಕಾರವು ತೆಗೆದುಕೊಂಡಿದೆ. ಇದರಿಂದ ಇಂಗ್ಲಂಡದ ಜನತೆಗೆ ಬಹುಮಟ್ಟಿಗೆ ಹಿತವಾಗಿದೆಯೆಂದು ತೋರುತ್ತದೆ. ಈ ಬಗೆಯ ಅನುಭವಗಳು ೧೯ ನೆಯ ಶತಮಾನದ ಸ್ವಂತ ಆಸ್ತಿಯ ಪಾವಿತ್ರ್ಯತೆಯ ಭಾವನೆಯನ್ನು ತಗ್ಗಿಸಿವೆ. ಹೀಗೆ ಸ್ವಂತ ಆಸ್ತಿಯ ಪ್ರಭಾವವನ್ನು ಪರಿಮಿತಗೊಳಿಸಿ ಸಾರ್ವಜನಿಕ ಆಸ್ತಿಯ ಕ್ಷೇತ್ರವನ್ನು ವಿಶಾಲಗೊಳಿಸುವುದರಿಂದ ಲಾಭವಿದೆಯೋ ಹಾನಿಯಿದೆಯೋ ಎಂಬುದನ್ನು ಆಯಾ ಜನಾಂಗಗಳ ಪ್ರತ್ಯಕ್ಷ ಅನುಭವದಿಂದಲೇ ನಿರ್ಧರಿಸಬೇಕು.

ಉಪಭೋಗಿಸಬಲ್ಲ ವ್ಯಕ್ತಿಯ ದೃಷ್ಟಿಯಿಂದ ಆಸ್ತಿಯನ್ನು ವಿಶ್ವಸ್ಥ ಆಸ್ತಿ ಮತ್ತು ಪ್ರತ್ಯಕ್ಷ ಆಸ್ತಿಯೆಂದು ವಿಂಗಡಿಸಬಹುದು. ಪ್ರತ್ಯಕ್ಷ ಆಸ್ತಿಯನ್ನು ಒಡೆಯನು ಸ್ವತಃ ಉಪಭೋಗಿಸಬಲ್ಲನು. ಅದನ್ನು ವಿಕ್ರಯಿಸುವಾಗ ತನ್ನ ಹಿತವನ್ನಷ್ಟೇ ಅವನು ಗಮನಿಸುತ್ತಾನೆ. ಆದರೆ ವಿಶ್ವಸ್ಥ ಆಸ್ತಿಯ ಒಡೆಯನೊಬ್ಬನು, ಅದನ್ನು ಉಪಭೋಗಿಸಬಲ್ಲವನು ಇನ್ನೊಬ್ಬನು-ಬಹುತರವಾಗಿ ಸಾರ್ವಜನಿಕ ಸಂಸ್ಥೆಗಳ ಆಸ್ತಿಯ ವ್ಯವಸ್ಥೆಯ ಭಾರವು ಒಂದು ವಿಶ್ವಸ್ಥ ಮಂಡಳದ ಮೇಲಿರುತ್ತದೆ. ಅವರು ಆ ಆಸ್ತಿಯನ್ನು ನಿರ್ದಿಷ್ಟ ಸಾರ್ವಜನಿಕ ಉದ್ದೇಶವನ್ನು ಕಾರ್ಯಗತ ಮಾಡಲು ಉಪಯೋ

ಗಿಸಬಲ್ಲರಲ್ಲದೆ ತಮ್ಮ ಹಿತಕ್ಕಾಗಿಯಲ್ಲ. ಅವರು ಕೇವಲ ಹಿತೈಷಿಗಳು. ನಿಜವಾದ ಲಾಭವು ಸಮಾಜಕ್ಕೆ ದೊರೆಯಬೇಕು. ಈ ಬಗೆಯ ವಿಶ್ವಸ್ಥ ಆಸ್ತಿಗಳ ದುರುಪಯೋಗವಾಗಬಾರದೆಂದು ಸರಕಾರವು ಕಾಲಕಾಲಕ್ಕೆ ಕಾಯ್ದೆಗಳನ್ನು ಮಾಡುತ್ತದೆ. ಈಚೆಗೆ ಮುಂಬೈ ಮದ್ರಾಸ ರಾಜ್ಯಗಳು ವಿಶ್ವಸ್ಥ ಆಸ್ತಿಯನ್ನು ನೋಂದಾಯಿಸಬೇಕೆಂಬ ಕಾಯ್ದೆಯನ್ನು ಮಾಡಿವೆ.

೧೧. ಆಸ್ತಿಯನ್ನು ವರ್ಗಾಯಿಸುವ ವಿಧಾನಗಳು.

ಆಸ್ತಿಯ ಒಡೆತನವನ್ನು ವರ್ಗಾಯಿಸುವ ಅನೇಕ ವಿಧಾನಗಳಿವೆ. ಒಡೆತನವನ್ನು ಅಂಶತಃ ಇಲ್ಲವೆ ಸಂಪೂರ್ಣವಾಗಿ ವರ್ಗಾಯಿಸಬಹುದು. ಒತ್ತಿ ಹಾಕುವುದು, ಕೋರು ಕೊಡುವುದು ಕಾಯಂ ಬಾಡಿಗೆ ಕೊಡುವುದು ಮೊದಲಾದವು ಒಡೆತನವನ್ನು ಅಂಶತಃ ವರ್ಗಾಯಿಸುವ ವಿಧಾನಗಳು. ಮಾರಾಟ, ಅದಲಿ, ಬದಲಿ, ದಾನ, ವಿಶ್ವಸ್ಥ ನಿರ್ಮಾಣ ಮೊದಲಾದವು ಸಂಪೂರ್ಣ ಒಡೆತನ ವರ್ಗಾಯಿಸುವ ವಿಧಾನಗಳು. ಇದಲ್ಲದೆ ಮೃತ್ಯು ಪತ್ರದಿಂದಲೂ ಒಬ್ಬನು ತನ್ನ ಆಸ್ತಿಯ ಒಡೆತನವನ್ನು ವರ್ಗಾಯಿಸಬಹುದು. ಅವನು ತನ್ನ ಹೆಂಡತಿ, ಮಕ್ಕಳು, ಆಪ್ತೇಷ್ಟರು ಸ್ನೇಹಿತರು ಸೇವಕರು ಇಲ್ಲವೆ ಸಂಘ ಸಂಸ್ಥೆಗಳಿಗೆ ತನ್ನ ಆಸ್ತಿಯನ್ನು ಮೃತ್ಯುಪತ್ರದಿಂದ ಕೊಡಬಹುದು. ಮನುಷ್ಯನ ಮರಣಪೂರ್ವದ ಇಚ್ಛೆಯನ್ನು ಗೌರವಿಸುವುದು ಮಾನವೀಯ ತೆಯ ಲಕ್ಷಣ. ಆದುದರಿಂದ ಈ ಹಕ್ಕು ಮಾನ್ಯವಾಗಿದೆ.

ಮೃತ್ಯು ಪತ್ರ ಮಾಡದೆ ಮರಣ ಹೊಂದಿದವನ ಆಸ್ತಿಯನ್ನು ಅವನ ಸಮೀಪದ ವಾರಸದಾರರಲ್ಲಿ ಹಂಚುವ ರೂಢಿಯಿದೆ. ಈ ರೂಢಿಯು ಸಾರ್ವತ್ರಿಕವಾಗಿದೆ. ಆದರೆ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಬಗೆಯ ವಾರಸದಾರರು ಹಕ್ಕುದಾರರಾಗುತ್ತಾರೆ. ಮರಣ ಹೊಂದಿದವನು ತನ್ನ ಆಸ್ತಿಯನ್ನು ತನ್ನ ಸಮೀಪದ ರಕ್ತಸಂಬಂಧಿಕರೇ ಉಪಭೋಗಿ ಸಲೆಂದು ಇಚ್ಛಿಸುವುದು ಸ್ವಾಭಾವಿಕವೆಂಬ ಊಹೆಯಮೇಲೆ ವಾರಸಾ ಹಕ್ಕಿಗೆ ಮನ್ನಣೆ ಸಿಕ್ಕಿದೆ.

ಸಂಪತ್ತು ಕೇಂದ್ರೀಕೃತವಾಗುತ್ತ ನಡೆದ ಇಂದಿನ ಜಗತ್ತಿನಲ್ಲಿ ಕೆಲ ಸುದೈವಿ ಜನರು ಕೇವಲ ಸಿರಿವಂತರ ಮಕ್ಕಳಾಗಿ ಜನಿಸಿದ ಒಂದೇ ಒಂದು ಅರ್ಹತೆಯ ಮೂಲಕ ದೊಡ್ಡ ದೊಡ್ಡ ಆಸ್ತಿಗಳಿಗೆ ಒಡೆಯರಾಗುತ್ತಿದ್ದಾರೆ.

ಅವರು ಜನತೆಗೆ ಕಲ್ಯಾಣವಾಗುವ ಕಾರ್ಯವಾವುದನ್ನೂ ಮಾಡದೆ ಹೇಯ ಸುಖೋಪಭೋಗಗಳಲ್ಲಿಯೇ ಆಜನ್ಮ ನಿರತರಾಗಬಹುದು. ಅವರ ಗೊತ್ತು ಗುರಿಯಿಲ್ಲದ ಜೀವನವು ಎಲ್ಲ ನಾಗರಿಕರ ಮನಸ್ಸನ್ನು ಆಕರ್ಷಿಸಬಹುದು. ಇದರಿಂದ ಸಾಮಾಜಿಕ ಪರಿಶ್ರಮದ ಓಘವೇ ತಪ್ಪು ದಾರಿ ಹಿಡಿಯಬಹುದು. ಹೀಗಾಗುವುದು ಆಸ್ತಿಯ ಉಪಭೋಗದ ಪರಿಹಾಸ್ಯವೇ ಸರಿ. ಹೀಗಾಗದಂತೆ ನೋಡಿಕೊಳ್ಳಲು ಅನೇಕ ಪ್ರಗತಿಪರ ರಾಜ್ಯಗಳು ಮೃತಪಟ್ಟವನ ಆಸ್ತಿಯ ಮೇಲೆ ದೊಡ್ಡ ಪ್ರಮಾಣದ ಕರ ಹೇರಹತ್ತಿವೆ. ಹೀಗೆ ವಾರಸಾ ಹಕ್ಕು ಮಿತಗೊಳಿಸಲ್ಪಟ್ಟಿದ್ದರೂ ಅದನ್ನು ಯಾವ ರಾಜ್ಯವೂ ಸಂಪೂರ್ಣ ಅಲ್ಲಗಳೆದಿಲ್ಲ.

### ೧೨. ಆಸ್ತಿರಕ್ಷಣೆಯ ಕಾಯ್ದೆಗಳು

ಸ್ವ ಸಂತೋಷದಿಂದ ಮಾಡಿಕೊಂಡ ಆಸ್ತಿ ಪಾಸ್ತಿಯ ಒಡಂಬಡಿಕೆಗಳನ್ನು ಸರಕಾರವು ಮನ್ನಿಸಬೇಕೆಂದು ೧೯ ನೆಯ ಶತಮಾನದ ನೀತಿಯು ಸಾರುತ್ತದೆ. ಇದು ಒಡಂಬಡಿಕೆಯ ಸ್ವಾತಂತ್ರ್ಯವೆಂದು ಪ್ರಸಿದ್ಧವಾಗಿದೆ. ವ್ಯಕ್ತಿಯು ತನ್ನ ಸುಖದುಃಖಗಳ ದೃಷ್ಟಿಯಿಂದ ತನ್ನ ಆರ್ಥಿಕ ಹಿತ ಸಂಬಂಧಗಳನ್ನು ಸರಕಾರಕ್ಕಿಂತಲೂ ಹೆಚ್ಚು ದಕ್ಷತೆಯಿಂದ ರಕ್ಷಿಸಿಕೊಳ್ಳಬಲ್ಲನೆಂಬುದೇ ಈ ಒಡಂಬಡಿಕೆಯ ಸ್ವಾತಂತ್ರ್ಯದ ಹಿನ್ನೆಲೆಯಲ್ಲಿರುವ ತತ್ವ. ಈ ತತ್ವವು ಸಿರಿವಂತರಷ್ಟು ಬಡವರೂ ಒಡಂಬಡಿಕೆ ಮಾಡಿಕೊಳ್ಳಲು ಸ್ವತಂತ್ರರಿದ್ದಾರೆಂದು ಗ್ರಹಿಸುತ್ತದೆ. ನಿಜವಾಗಿ ನೋಡಿದರೆ ಸಂಪತ್ಸಾಗರದಲ್ಲಿ ತೇಲುವ ಗಿರಣಿಯ ಒಡೆಯರೂ ಮತ್ತು ಹಸಿವಿನ ಬೇಗೆಯಿಂದ ಬೆಂದ ಕೂಲಿಕಾರರೂ ಒಡಂಬಡಿಕೆ ಮಾಡಿಕೊಳ್ಳುವದರಲ್ಲಿ ಸಮಾನಸ್ಕಂಧರೆಂದು ಹೇಳುವುದು ಒಂದು ವಿಡಂಬನೆಯೇ ಸರಿ. ಕೂಲಿಕಾರರು ಕೊಡುವ ಒಪ್ಪಿಗೆ ಸ್ವ ಸಂತೋಷದಿಂದ ಕೊಟ್ಟುದಲ್ಲವೆಂದೂ ಉಪವಾಸದ ಭಯದಿಂದ ಕೊಟ್ಟುದೆಂದೂ ತಿಳಿಯುವುದು ಹೆಚ್ಚು ಸಮರ್ಪಕವಾದೀತು. ಈ ಸಂಗತಿಯನ್ನು ಅನುಲಕ್ಷಿಸಿ ಈಚೆಗೆ ಅನೇಕ ಪ್ರಗತಿಪರ ರಾಜ್ಯಗಳು ಆರ್ಥಿಕ ದೃಷ್ಟಿಯಿಂದ ಬಲಹೀನ ವರ್ಗಗಳನ್ನೂ ಸಂರಕ್ಷಿಸಲು ಒಡಂಬಡಿಕೆಯ ಸ್ವಾತಂತ್ರ್ಯದ ಮೇಲೆ ನಿಯಂತ್ರಣಗಳನ್ನು ಹೇರಿವೆ. ಕನಿಷ್ಠ ಕೂಲಿಯನ್ನು ಗೊತ್ತುಮಾಡುವುದು, ದುಡಿತದ ಅವಧಿಯನ್ನು ಗೊತ್ತುಮಾಡುವುದು, ಅಪಘಾತಗಳಿಂದ ಒದಗುವ ಸಾವು ನೋವುಗಳಿಗೆ ಪರಿಹಾರವನ್ನು

ಗೊತ್ತುಮಾಡುವುದು, ಶ್ರಮಜೀವಿಗಳ ವಿಮೆ ಇಳಿಸುವಂತೆ ಮಾಡು ವುದು ಮೊದಲಾದವು ಇಂತಹ ನಿಯಂತ್ರಣದ ನಿದರ್ಶನಗಳಾಗಿವೆ.

ಸ್ವಂತ ಆಸ್ತಿ ಮತ್ತು ಸಾರ್ವಜನಿಕ ಆಸ್ತಿಗಳ ಭದ್ರತೆಯ ದೃಷ್ಟಿ ಯಿಂದ ಪ್ರತಿಯೊಂದು ರಾಜ್ಯವೂ ಕಾಯ್ದೆಗಳನ್ನು ಮಾಡುತ್ತದೆ. ಒಬ್ಬರ ಆಸ್ತಿಯನ್ನು ಇನ್ನೊಬ್ಬರು ಬಲಾತ್ಕಾರದಿಂದ ಕಸಿದುಕೊಳ್ಳುವದು ಅನ್ಯಾಯ; ಮೋಸದಿಂದ ಇಲ್ಲವೆ ಕಳವಿನಿಂದ ಎತ್ತಿಹಾಕುವದು ಅನ್ಯಾಯ; ನಿಷ್ಕಾರಣ ವಾಗಿ ಆಸ್ತಿನಾಶಮಾಡುವುದು ಅನ್ಯಾಯ; ಜೂಜದಿಂದ ಒಬ್ಬನು ಇನ್ನೊ ಬ್ಬನ ಆಸ್ತಿಯನ್ನು ದೊರಕಿಸುವದು ಅನ್ಯಾಯ; ಸಟ್ಟಾ ಇಲ್ಲವೆ ಅನೈತಿಕ ವ್ಯವಹಾರದಲ್ಲಿ ಆಸ್ತಿ ಹಾಳುಮಾಡಿಕೊಳ್ಳುವದು ಅನ್ಯಾಯ; ಇಂತಹ ಅನ್ಯಾಯಗಳನ್ನೆಸಗುವ ವ್ಯಕ್ತಿಗಳನ್ನು ಸಮಾಜದ್ರೋಹಿಗಳೆಂದು ರಾಜ್ಯವು ದಂಡಿಸುತ್ತದೆ. ಹೀಗೆ ಮಾಡುವುದು ನಾಗರಿಕರ ಹಿತದ ದೃಷ್ಟಿಯಿಂದ ಒಳ್ಳೆಯದೇ ಸರಿ. ಆದರೂ ಎಷ್ಟೋ ಸಲ ಸಮಾಜದ ಜುಲುಮೆಗೆ ಬಲಿ ಯಾದ ಜನರು ಆಸ್ತಿವಿರೋಧಕ ಅಪರಾಧಗಳನ್ನು ಮಾಡುವುದುಂಟು. ದುಡಿಮೆಗೆ ತಕ್ಕ ಪ್ರತಿಫಲವಿಲ್ಲದೆ ಜೀವನಾಧಾರದ ವಸ್ತುಗಳ ಕೊರತೆ ಯಿಂದ ಕಂಗೆಟ್ಟ ಜನರ ಪ್ರಮಾಣವು ಸಮಾಜದಲ್ಲಿ ಅಧಿಕವಾಗಿದ್ದರೆ ಆಸ್ತಿ ವಿರೋಧಕ ಅಪರಾಧಗಳು ಜರಗುವುದು ಸಹಜ. ವ್ಯಕ್ತಿಗಿಂಲೂ ಆಸ್ತಿಗೆ ಹೆಚ್ಚು ಬೆಲೆ ಕೊಡುವ ಲಾಭ ಬಡಕ ಸಮಾಜದಲ್ಲಿಯೂ ಸಹ ಈ ಅಪ ರಾಧಗಳು ಹೆಚ್ಚುವುದು ಸಹಜ. ಆದುದರಿಂದ ಕೇವಲ ದೈಹಿಕದಂಡನೆ ಯಿಂದ ಮಾತ್ರವಲ್ಲದೆ ಸಮಾಜದ ಆರ್ಥಿಕ ತಳಹದಿಯ ಪುನರ್ಘಟನೆ ಯಿಂದಲೂ ಆಸ್ತಿವಿರೋಧಕ ಅಪರಾಧಗಳನ್ನು ಕಡಿಮೆ ಮಾಡಬಹುದು.

## ೧೧. ಆಸ್ತಿಯ ಪುನರ್ಘಟನೆ

ತನ್ನ ನಿಸರ್ಗದತ್ತ ದೇಣಿಗೆಯ ಬಲದಿಂದ ತನ್ನದೇ ಆದ ರೀತಿಯಲ್ಲಿ ಸಮಾಜದ ಮೇಲ್ಮೆಯನ್ನು ಸಾಧಿಸಲು ಅವಕಾಶವೀಯುವಷ್ಟು ಆಸ್ತಿಯು ಪ್ರತಿಯೊಬ್ಬ ನಾಗರಿಕನಿಗೂ ಇರಲೇಬೇಕು. ಇಂದಿನ ಸಮಾಜವಂತೂ ಈ ತತ್ವದ ಮೇಲೆ ರಚಿತವಾಗಿಲ್ಲ. ಅದನ್ನು ಈ ತತ್ವಕ್ಕನುಗುಣವಾಗಿ ಪುನರ್ಘ ಟಿಸುವುದು ಅಷ್ಟೇನೂ ಸುಲಭವಾಗಿಲ್ಲ. ರಾಷ್ಟ್ರೀಯ ಸಂಪತ್ತನ್ನು ಎಲ್ಲರ ಲ್ಲಿಯೂ ಸಮನಾಗಿ ಹಂಚಿಬಿಡುವುದರಿಂದ ಈ ಕಾರ್ಯ ಮುಗಿದಂತಾಗು

ವದಿಲ್ಲ. ಸಮಾಜದ ಸುಸ್ಥಿತಿಗೆ ಒಕ್ಕಲಿಗ, ನೇಕಾರ, ಬಡಿಗ, ಕಮ್ಮಾರ ಕೂಲಿಕಾರ ಮೊದಲಾದವರ ಆವಶ್ಯಕತೆಯಿದ್ದಂತೆ ಕಲಾವಂತರೂ, ಸಂಶೋಧಕರೂ, ಸಂಘಟಿಕರೂ, ನ್ಯಾಯಾಧೀಶರೂ, ಯಾಂತ್ರಿಕರೂ, ಆಡಳಿತೆಗಾರರೂ, ಮೊದಲಾದವರ ಅವಶ್ಯಕತೆಯಿದೆ ದೈಹಿಕ ಪರಿಶ್ರಮದಿಂದ ಜೀವಿಸುವ ಬಹು ಜನರು ನಾಗರಿಕತ್ವದ ಚಟುವಟಿಕೆಗಳಿಗೆ ಅವಕಾಶವೀಯುವಷ್ಟು ಆಸ್ತಿಯು ಇರಲೇಬೇಕೆಂದು ಒಪ್ಪಿದರೂ, ಅವರಿಗೆ ಕೊಡುವಷ್ಟೇ ಪ್ರತಿಫಲದಿಂದ ಸಮಾಜವು ಕಲಾವಂತರು, ಸಂಶೋಧಕರು ಮೊದಲಾದವರ ನಿರ್ಮಾಪಕ ಸೇವೆಯನ್ನು ಪಡೆಯಬಲ್ಲದೆಂಬ ಭರವಸೆಯಿಲ್ಲ. ಕಲಾವಂತರ ಇಲ್ಲವೆ ಸಂಶೋಧಕರ ಬೆಲೆಯನ್ನು ಅವರಿಗೆ ಕೊಡಬಹುದಾದ ಆಸ್ತಿಯ ಗಾತ್ರದಿಂದ ಅಳೆಯುವುದು ಅಸಮರ್ಪಕವೆನಿಸಿದರೂ ಅವರಿಗೆ ಹೆಚ್ಚಿನ ಪ್ರತಿಫಲ ಕೊಡಬೇಕಾದುದು ವ್ಯವಹಾರ್ಯವೆನಿಸುತ್ತದೆ. ಪ್ರತಿಯೊಬ್ಬ ನಾಗರಿಕನಿಗೆ ದೊರೆಯುವ ಪ್ರತಿಫಲವು ಅವನು ಸಮಾಜದ ಮೇಲ್ಮೆಗೆ ಸಲ್ಲಿಸುವ ಉಪಯುಕ್ತ ಪರಿಶ್ರಮಕ್ಕೆ ತಕ್ಕುದಾಗಿರಬೇಕು. ಇಂದಿನ ಸಮಾಜದಲ್ಲಿರುವಂತೆ ಹಿರಿಯರು ಕೂಡಿಸಿಟ್ಟ ಆಸ್ತಿಯ ಉಪಭೋಗ ಮಾಡುತ್ತ ಗೊತ್ತು ಗುರಿಯಿಲ್ಲದೆ ಜೀವಿಸುವವರಿಗೆ ಆಸ್ಪದವಿರಕೂಡದು. ಸಮಾಜಕ್ಕಾಗಿ ಪರಿಶ್ರಮಿಸದ ಯಾವ ವ್ಯಕ್ತಿಯೂ ಆಸ್ತಿಯ ಒಡೆತನದ ಹಕ್ಕುಗಳನ್ನು ಪಡೆಯಕೂಡದು. ಇದು ನ್ಯಾಯ ನೀತಿ. ಮಕ್ಕಳು ಮರಿಗಳು, ಅಂಗವಿಹೀನರು, ವೃದ್ಧರು ಮೊದಲಾದವರನ್ನು ರಕ್ಷಿಸುವ ಏರ್ಪಾಟು ಸಹ ಸಮಾಜದಲ್ಲಿರಬೇಕು. ಆಗ ಪ್ರತಿಯೊಬ್ಬ ನಾಗರಿಕನ ವ್ಯಕ್ತಿತ್ವ ವಿಕಾಸಕ್ಕೆ ಆಸ್ಪದ ದೊರೆತು ಉತ್ತಮ ನಾಗರಿಕತ್ವವು ಬೆಳೆಯಬಹುದು.

### ೧೪. ಬಣಗಳು

ಕುಟುಂಬಗಳು ರಕ್ತಸಂಬಂಧ, ವೈವಾಹಿಕ ಸಂಬಂಧ, ಆರ್ಥಿಕ ಸಂಬಂಧಗಳಿಂದ ಬೆರೆತು ವಿಸ್ತೃತಗೊಂಡು ಬಣಗಳಾಗಿರಬಹುದು. ಒಂದು ಬಣದ ಜನರು ತಾವು ಒಬ್ಬ ಪೂರ್ವಜನ ವಂಶದವರೆಂದು ಹೇಳುವ ಪರಿಪಾಠವಿತ್ತೆಂದು ತೋರುತ್ತದೆ. ಋಗ್ವೇದ ಕಾಲದ ಯದು, ಪುರು, ತುರ್ವಾಸು, ಕುರು, ಪಾಂಚಾಲ, ಇಕ್ಷ್ವಾಕು, ಮೊದಲಾದ ಬಣಗಳ ಹೆಸರುಗಳು ಅವುಗಳ ಪೂರ್ವಜರಿಂದ ಬಂದಿರಬೇಕೆಂದೆನಿಸುತ್ತದೆ. ವಸಿಷ್ಠ, ವಿಶ್ವಾಮಿತ್ರ, ಮೊದಲಾದ ಋಷಿ ಕುಲಗಳಿಗೂ ಹೀಗೆಯೇ ಹೆಸರು ಬಂದಿ

ರಬೇಕು. ರಕ್ತಸಂಬಂಧವೇ ಆಯಾ ಬಣಗಳ ಆಂತರಿಕ ಐಕ್ಯತೆಗಳಿಗೆ ಮುಖ್ಯ ಕಾರಣವಾಗಿರಬೇಕು.

ವೇದಕಾಲದಲ್ಲಿ ಹಲವು ಕುಲಗಳು ಕೂಡಿ ವಿಶಗಳಾಗುತ್ತಿದ್ದುವೆಂದೂ, ಇಂತಹ ವಿಶಗಳು ಕೂಡಿ ಜನಗಳಾಗುತ್ತಿದ್ದುವೆಂದೂ, ಹೇಳಲಾಗಿದೆ. ಬಹುಶಃ ಅಂದಿನ "ಜನ"ಗಳೇ ಇಲ್ಲಿ ವಿವರಿಸುತ್ತಿರುವ ಬಣಗಳಾಗಿರಬೇಕು.

ಬಣದ ಐಕ್ಯತೆಗೆ ರಕ್ತ ಸಂಬಂಧವು ಮುಖ್ಯಕಾರಣವಾಗಿರಬಹುದಾದರೂ, ಪರಂಪರಾಗತ ಸಾಂಪ್ರದಾಯ, ಸಂಸ್ಕಾರ, ಭಾಷೆ, ವ್ಯವಸಾಯ, ನೈಸರ್ಗಿಕ ಸ್ಥಿತಿಗತಿಗಳು ಮೊದಲಾದವು ಸಹ ಅದರ ಬೆಳವಣಿಗೆಗೆ ಕಾರಣವಾಗಿರಬಹುದೆಂದು ಊಹಿಸಬಹುದು.

ಪ್ರಾಚೀನ ಕಾಲದಲ್ಲಿ ಬಣಗಳು ಒಂದು ಕಡೆಯಿಂದ ಇನ್ನೊಂದು ಕಡೆಗೆ ಅಲೆಯುತ್ತಿದ್ದುದು ಕಂಡು ಬಂದಿದೆ. ಏಸಿಯಾ ಮೈನರ ಮಧ್ಯ ಏಸಿಯಾಗಳಿಂದ ಹೊರಟ ಆರ್ಯ ಬಣಗಳು ಅಲೆಯುತ್ತ ಅಲೆಯುತ್ತ ಯುರೋಪಕ್ಕೂ ಹಿಂದುಸ್ಥಾನಕ್ಕೂ ಬಂದುದು ಪ್ರಸಿದ್ಧವಿದೆ. ಋಗ್ವೇದ ಕಾಲದಲ್ಲಿ ಸಿಂಧೂನದಿಯ ತೀರದಲ್ಲಿದ್ದ ಕುರು ಪಾಂಚಾಲ ಬಣಗಳು ಮಹಾ ಭಾರತದ ಕಾಲದಲ್ಲಿ ಜಮ್ಮು ದಿಲ್ಲಿಗಳ ನಡುವೆ ಇದ್ದುದು ವಿದಿತವಿದೆ. ಸಿಕಂದರನ ಕಾಲದಲ್ಲಿ ಮುಲ್ತಾನದ ಸಮೀಪದಲ್ಲಿ ವಾಸಿಸುತ್ತಿದ್ದ ಮಲ್ಲವ ಗಣವು ಗುಪ್ತ ಕಾಲದಲ್ಲಿ ಮಾಳವಾ ಪ್ರಾಂತದಲ್ಲಿದ್ದುದು ಗೊತ್ತಾಗಿದೆ. ಬಣಗಳು ಅತ್ತಿಂದಿತ್ತ ಅಲೆದಾಡುತ್ತ ಜೀವಿಸಿರುವ ವರೆಗೆ ತಮ್ಮತನವನ್ನು ಕಾಪಾಡಿಕೊಂಡಿರಬೇಕು. ಮುಂದೆ ಕೃಷಿಕಲೆಯನ್ನರಿತ ಬಣಗಳು ಸ್ಥಿರವಾಗಿ ಒಂದೆಡೆ ನೆಲೆಸಿರಬೇಕು. ಆಗ ನೆರೆಯ ಜನರ ಜೊತೆಗೆ ಬೆರೆತು ತಮ್ಮ ವೈಶಿಷ್ಟ್ಯ ಮತ್ತು ಐಕ್ಯತೆಯನ್ನು ಕಳೆದುಕೊಂಡಿರಬೇಕು.

ರಾಜಕೀಯ ಪ್ರಭುತ್ವವು ಬಣಗಳಿಗೆ ಅಪರಿಚಿತವಾದುದು ನಿಜ. ಆದರೆ ಬಣದಲ್ಲಿ ನೀತಿನಿಯಮಗಳು ಇರಲಿಲ್ಲವೆಂದು ತಿಳಿಯಕೂಡದು. ಮನುಷ್ಯನು ಸಾಮೂಹಿಕ ಜೀವನ ಸಾಗಿಸುವಾಗ ಒಂದಿಲ್ಲೊಂದು ಬಗೆಯ ನೀತಿನಿಯಮಗಳು ಅನಿವಾರ್ಯವೆಂದು ಅನುಭವದಿಂದ ಕಂಡುಕೊಳ್ಳುತ್ತಾನೆ. ಇತರರಿಗೆ ಹಿತಕಾರಿಯಾದ ನೀತಿನಿಯಮಗಳೇ ತನಗೂ ಹಿತಕಾರಿಯಾಗಿವೆಯೆಂಬ ಮಾತನ್ನು ಗ್ರಹಿಸುತ್ತಾನೆ. ಈ ಬಗೆಯ ವಿವೇಕವೇ

ಮನುಷ್ಯನ ನೀತಿಯ ಮೂಲ. ಆದರೆ ಅಂದಿನ ಮನುಷ್ಯನು ನೀತಿ ನಿಯಮ ಗಳನ್ನು ಅಂಗೀಕರಿಸಿ ವರ್ತಿಸುವ ಮುಂಚೆ ಈ ಬಗೆಯಾದ ನಿಚ್ಚಳ ತರ್ಕ ವಿತರ್ಕಗಳನ್ನು ಮಾಡಿರಲಿಕ್ಕಿಲ್ಲ. ಎಷ್ಟೋ ಸಲ ಇತರರ ಆಚಾರ ವಿಚಾರ ಭಾವನೆಗಳ ಅಂಧಾನುಕರಣದಿಂದ ಅವನು ನೀತಿಯನ್ನು ಕಲಿತಿರಬಹುದು. ಹೀಗೆ ಒಂದಿಲ್ಲೊಂದು ರೀತಿಯಿಂದ ಜನರು ಒಪ್ಪಿದ ನೀತಿಯ ಸಾಂಪ್ರದಾಯ ಗಳು ಬಣದಲ್ಲಿ ಇರಲೇಬೇಕು.

ಸಾಂಪ್ರದಾಯಗಳಿರುವಲ್ಲಿ ಅವುಗಳನ್ನು ಮುರಿಯುವವರೂ ಇರಲೇ ಬೇಕು. ಬಣದ ಸಾಂಪ್ರದಾಯ ಮುರಿಯುವವರನ್ನು ಅವರ ಸಮೀಪದ ಜನರೇ ದಂಡಿಸುತ್ತಿದ್ದರು. ಈ ದಂಡನೆಯು ಇಂದಿನ ನ್ಯಾಯಾಲಯಗಳಲ್ಲಿ ದೊರೆಯುವ ದಂಡನೆಗಿಂತಲೂ ಹೆಚ್ಚು ನಿಷ್ಠುರವಾದದ್ದೂ ಕ್ರೂರವಾದದ್ದೂ ಆಗಿದ್ದಿತೆಂದು ಹೇಳಬಹುದು. ಸಾಂಪ್ರದಾಯ ವಿರೋಧಿಯು ಅತ್ಯಂತ ಬಲಿಷ್ಠನಾಗಿದ್ದರೆ ಮಾತ್ರ ಅವನು ಅಂದು ದಂಡನೆಯಿಂದ ಪಾರಾಗಬಹು ದಾಗಿತ್ತು. ಆಗ ಒಣದಲ್ಲಿ ಕೇಂದ್ರ ಪ್ರಭುತ್ವವಿಲ್ಲದಿದ್ದರೂ ಸಾಂಪ್ರದಾಯ ರಕ್ಷಿಸಬಲ್ಲ ಅನೇಕ ಅಧಿಕಾರಯುಕ್ತ ಕೇಂದ್ರಗಳಿರಬೇಕು.

“ಒಂದಾನೊಂದು ಕಾಲದಲ್ಲಿ ದಸ್ಯು ಜನರು ಆರ್ಯರ ಬಣಗಳನ್ನು ಸೋಲಿಸುತ್ತಿದ್ದರಂತೆ. ಅವರಿಂದ ತಮ್ಮನ್ನು ರಕ್ಷಿಸಬೇಕೆಂದು ಆರ್ಯ ದೇವ ತೆಗಳು ಬ್ರಹ್ಮದೇವನನ್ನು ಮೊರೆಹೋದರಂತೆ. ಆಗ ಬ್ರಹ್ಮದೇವನು ಆರ್ಯ ಬಣಗಳಿಗೆ ಪ್ರಜಾಪತಿಯನ್ನು ದಯಪಾಲಿಸಿದನಂತೆ. ಆಮೇಲೆ ಆರ್ಯ ಬಣಗಳಿಗೆ ಗೆಲವಾಗಹತ್ತಿತಂತೆ.” ಈ ಊಹೆಯು ವೇದ ಪುರಾಣಗಳೆರಡರ ಲ್ಲಿಯೂ ಉಲ್ಲಿಖಿತವಾಗಿದೆ. ಅಂದಮೇಲೆ ಬಣಗಳು ಒಂದು ಪ್ರದೇಶದಲ್ಲಿ ಸ್ಥಿರವಾಗಿ ನೆಲೆಸಹತ್ತಿದಾಗ ಪರಕೀಯ ದಾಳಿಗಳಿಂದ ರಕ್ಷಿಸಿಕೊಳ್ಳುವ ಅವಶ್ಯ ಕತೆಯುಂಟಾಯಿತೆಂದೂ, ಈ ಅವಶ್ಯಕತೆಯಿಂದಲೇ ಅರಸೊತ್ತಿಗೆಗಳು ತಲೆ ಯೆತ್ತಿದವೆಂದೂ ಸ್ಪಷ್ಟವಾಗುತ್ತದೆ. ಮೊದಮೊದಲು “ ಜನಪತಿ ” ಯಾಗಲು ಕುಲಪತಿ ವಿಶ್ವಪತಿಗಳ ಒಪ್ಪಿಗೆ ಅವಶ್ಯವಿದ್ದಿತು. ಬರಬರುತ್ತ ಜನಪತಿಯ ವಂಶಜರು ಆ ಸ್ಥಾನಕ್ಕೆ ಯಥಾರ್ಥವಾಗಿ ಬರುವ ಸಾಂಪ್ರದಾಯ ತಲೆದೋ ರಿರಬೇಕು. ಈ ಸಾಂಪ್ರದಾಯ ರೂಢಿಯಾದಾಗ ಬಣದಲ್ಲಿ ಒಂದು ಕೇಂದ್ರ ಪ್ರಭುತ್ವವು ಸ್ಥಾಪಿತವಾಗಿರಬೇಕು. ಹೀಗೆ ಪ್ರಾಚೀನ ಕಾಲದ ರಾಜ್ಯಗಳು ಬಣಗಳಿಂದ ಹುಟ್ಟಿಕೊಂಡಿವೆಯೆಂದು ಹೇಳಬಹುದು.

## ೧೫. ಜನಾಂಗಗಳು

ಒಂದೇ ಬಗೆಯ ರೂಪ, ಮೈಕಟ್ಟು ಮೈಬಣ್ಣ ಭಾಷೆಗಳುಳ್ಳ ಬಣಗಳೆಲ್ಲ ಸೇರಿ ಜನಾಂಗಗಳಾಗಿವೆ. ಯದು, ಪುರು, ತುರ್ವಾಸು ಕುರು, ಪಾಂಚಾಲ, ಇಕ್ಷ್ವಾಕು, ಮೊದಲಾದ ಬಣಗಳೆಲ್ಲ ಆರ್ಯಜನಾಂಗದಲ್ಲಿ ಸಮಾವೇಶವಾಗಿದ್ದುದು ಇತಿಹಾಸ ಪ್ರಸಿದ್ಧವಿದೆ. ಹಿಂದುಸ್ಥಾನದಲ್ಲಿ ಬಂದು ನೆಲೆಸಿದ ಆರ್ಯರು ಕಾಲಾಂತರದಲ್ಲಿ ದ್ರಾವಿಡ ಜನಾಂಗದ ಜೊತೆಗೆ ಬೆರೆತಲ್ಲದೆ ಮುಂದೆ ಬಂದ ಗ್ರೀಕ, ಶಕ, ಕುಶನ, ಹೂಣ ಮತ್ತು ಯವನ ಜನಾಂಗಗಳನ್ನು ಅಳವಡಿಸಿಕೊಂಡರು. ಆದುದರಿಂದ ಇಂದಿನ ಹಿಂದೀ ಜನತೆಯಲ್ಲಿ ಪ್ರಾಚೀನ ಜನಾಂಗಗಳ ವಂಶಜರನ್ನು ಪ್ರತ್ಯೇಕಿಸುವುದು ಕಠಿಣ. ಇಂಗ್ಲಂಡದ ಜನತೆಯನ್ನು ಸಾಮಾನ್ಯವಾಗಿ ಆಂಗ್ಲ ಜನಾಂಗವೆಂದು ಕರೆಯುತ್ತಿದ್ದರೂ ಅವರಲ್ಲಿ ಕೆಲ್ಟ, ಡೇನ, ನಾರ್ಮನ್ ಮೊದಲಾದ ಪ್ರಾಚೀನ ಜನಾಂಗಗಳೂ ಬೆರೆತಿವೆ. ಯುರೋಪದಲ್ಲಿ ಗಾಲ್, ಟ್ಯೂಟಾನ್ ಮತ್ತು ಸ್ಲಾವ್ಹ ಜನಾಂಗಗಳಿವೆ. ಆದರೆ ಇವುಗಳನ್ನು ಪ್ರತ್ಯೇಕಿಸುವುದೂ ಸಹ ಕಠಿಣವಾಗಿದೆ. ಇವೆಲ್ಲವುಗಳಿಗೂ ಕೂಡಿ ಐರೋಪ್ಯ ಜನಾಂಗವೆಂದು ಹೇಳುವುದುಂಟು. ಇಂದು " ಜನಾಂಗ " ಎಂಬ ಶಬ್ದವನ್ನು ಇಂತಹ ವಿಸ್ತೃತ ಅರ್ಥದಲ್ಲಿಯೇ ಉಪಯೋಗಿಸುವುದು ವಿಹಿತ.

ಜನಾಂಗಗಳನ್ನು ಗುರುತಿಸಬಲ್ಲ ಹಲವು ಅಂಶಗಳನ್ನು ಶಾಸ್ತ್ರಜ್ಞರು ಯೋಜಿಸಿದ್ದಾರೆ. ಮನುಷ್ಯನ ತಲೆ ಬುರುಡೆಗಳ ಆಕೃತಿ, ಮೈಬಣ್ಣ. ತಲೆಗೂದಲು, ಮೊದಲಾದವುಗಳ ನಿರೀಕ್ಷಣೆಯಿಂದ ಒಬ್ಬ ವ್ಯಕ್ತಿಯ ಮೂಲ ಜನಾಂಗವನ್ನು ಗುರುತಿಸಲು ಪ್ರಯತ್ನಮಾಡಿದ್ದಾರೆ. ಆದರೆ ಈ ವಿಧಾನಗಳು ದೋಷಯುಕ್ತವಾಗಿವೆಯೆಂದು ತಿಳಿದುಬಂದಿದೆ. ಇವುಗಳಿಗಿಂತಲೂ ಜನರ ಭಾಷೆಯ ಮೇಲಿಂದ ಅವರ ಜನಾಂಗವನ್ನು ಗುರುತಿಸುವುದು ಹೆಚ್ಚು ವ್ಯಾವಹಾರಿಕವೆಂದು ಅನಿಸುತ್ತದೆ. ಆಯಾ ಭಾಷೆಯ ಮೂಲ ಶಬ್ದಗಳನ್ನು ಹೋಲಿಸಿನೋಡಿ ಅದರ ಬಳಗವನ್ನು ಗೊತ್ತುಹಚ್ಚಬಹುದು. ಹಿಂದುಸ್ಥಾನದ ಎಲ್ಲ ಭಾಷೆಗಳೂ ಸಂಸ್ಕೃತ ಇಲ್ಲವೆ ದ್ರಾವಿಡ ಭಾಷೆಗಳಿಗೆ ಸೇರಿವೆ. ಈ ಸಂಗತಿಯ ಬಲದಿಂದ ಹಿಂದೀಯರು ಬಹುತರವಾಗಿ ಆರ್ಯ ಮತ್ತು ದ್ರಾವಿಡ ಜನಾಂಗದವರೆಂದು ಹೇಳಬಹುದು.

ಒಂದೇ ಜನಾಂಗದ ಜನರು ಹಲವು ದೇಶಗಳಲ್ಲಿ ವಾಸಿಸುತ್ತಿರಬಹುದು. ಮಂಗೋಲ ಜನಾಂಗದವರು ಚೀನ, ಟಾರ್ಟರಿ, ಕೋರಿಯಾ, ಮಂಗೋಲಿಯಾ, ಇಂಡೋಚೀನಾ, ಸಿಯಾಮು, ಮಲಾಯಾ, ಇಂಡೋನೇಶಿಯಾ, ಬರ್ಮಾ, ಟಿಬೇಟ ಮೊದಲಾದ ದೇಶಗಳಲ್ಲಿ ವಾಸವಾಗಿದ್ದಾರೆ. ಸ್ಲಾವ್ಹ ಜನಾಂಗದವರು ರಶಿಯಾ, ಉಕ್ರಾಯಿನ್, ಬಲ್ಗಾರಿಯಾ, ಯುಗೋಸ್ಲಾವ್ಹಿಯಾ, ಝೆಕೋಸ್ಲಾವ್ಹಿಯಾ, ಪೋಲಂಡ ಮೊದಲಾದ ರಾಜ್ಯಗಳಲ್ಲಿ ಹರಿದು ಹಂಚಿಹೋಗಿದ್ದಾರೆ. ಇಂದು ಒಂದೇ ದೇಶದಲ್ಲಿ ಹಲವು ಜನಾಂಗಗಳ ಜನರನ್ನೂ ಸಹ ಕಾಣಬಹುದು. ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಐರೋಪ್ಯರು, ನಿಗ್ರೋಜನರು, ರೆಡ್ ಇಂಡಿಯನ್ನರು, ಮಂಗೋಲರು ಮೊದಲಾದವರನ್ನೆಲ್ಲ ಕಾಣಬಹುದು. ನಿಜವಾಗಿ ನೋಡಿದರೆ ಇಂದು ಒಂದೇ ಒಂದು ವಿಶಿಷ್ಟ ಜನಾಂಗದ ಜನರು ವಾಸವಾಗಿದ್ದ ದೇಶವು ಸಿಗುವುದೇ ಕಠಿಣ. ಪ್ರತಿಯೊಂದು ದೇಶದಲ್ಲಿಯೂ ಅನೇಕ ಜನಾಂಗಗಳು ಬೆರೆತು ಹೋಗಿವೆ. ಆದುದರಿಂದ ಜನಾಂಗದ ಭಾವನೆಯು ಹಿಂದಿನಂತೆ ಇಂದು ಬಲವತ್ತರವಾಗಿಲ್ಲ. ದೇಶ ದೇಶಗಳ ಸಂಪರ್ಕವು ಹೆಚ್ಚಾದಂತೆ ಈ ಭಾವನೆಯು ತಗ್ಗುತ್ತ ನಡೆದಿದೆ.

೧೬. ರಾಷ್ಟ್ರಗಳು

ಜನಾಂಗದ ಭಾವನೆಗೆ ಬದಲಾಗಿ ರಾಷ್ಟ್ರದ ಭಾವನೆಯು ಬಲಿತಿದೆ. ಒಂದು ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ಭಾಷೆ, ಧರ್ಮ, ಸಂಸ್ಕೃತಿ, ಸ್ವಭಾವ, ಆರ್ಥಿಕ ರಚನೆ ಮತ್ತು ಐತಿಹಾಸಿಕ ಪರಂಪರೆಗಳ ವೈಶಿಷ್ಟ್ಯದಿಂದ ಉದ್ಭವಿಸಿದ ಐಕ್ಯತೆಯ ಭಾವನೆಯೇ ರಾಷ್ಟ್ರೀಯತ್ವ. ಇಂತಹ ರಾಷ್ಟ್ರೀಯ ಭಾವನೆಯಿಂದ ಪ್ರೇರಿತವಾದ ಜನತೆಯುಳ್ಳ ದೇಶಕ್ಕೆ ರಾಷ್ಟ್ರವೆಂದು ಕರೆಯಬೇಕು. ೧೫ ನೆಯ ಶತಮಾನದ ಪೂರ್ವದಲ್ಲಿ ರಾಷ್ಟ್ರಗಳು ಅಪರೂಪವಾಗಿದ್ದವು. ಯುರೋಪದಲ್ಲಾದ ಬೌದ್ಧಿಕ ಪುನರುಜ್ಜೀವನ ಮತ್ತು ಧಾರ್ಮಿಕ ಸುಧಾರಣೆಯ ಚಳವಳಿಗಳ ಪರಿಣಾಮವಾಗಿ ರಾಷ್ಟ್ರೀಯತ್ವವು ಅಂಕುರಿಸಿತು. ಮುಂದೆ ಫ್ರೆಂಚ ಮಹಾಕ್ರಾಂತಿಯ ನಂತರ ಯುರೋಪದಲ್ಲಿ ರಾಷ್ಟ್ರೀಯತ್ವವು ಸಾರ್ವತ್ರಿಕವಾಯಿತು. ಯುರೋಪದ ರಾಷ್ಟ್ರೀಯ ರಾಜ್ಯಗಳು ೧೯ ನೆಯ ಶತಮಾನದಲ್ಲಿ ಇಡೀ ಜಗತ್ತನ್ನೇ ಹಂಚಿಕೊಂಡವು. ಅವುಗಳ ಸಾಮ್ರಾಜ್ಯ ಶೋಷಣೆಗೆ ಗುರಿಯಾದ ದೇಶಗಳಲ್ಲಿಯೂ ರಾಷ್ಟ್ರೀ

ಯತ್ವವು ಕಾಣಿಸಿಕೊಂಡಿತು. ಚೀನ, ಜಪಾನ, ಹಿಂದುಸ್ಥಾನ, ಬರ್ಮಾ, ಇಜಿಪ್ತ ಮೊದಲಾದವು ಈ ಮಾತಿಗೆ ತಕ್ಕ ನಿದರ್ಶನವಾಗಿವೆ. ಐರೋಪ್ಯರ ಪ್ರಾಬಲ್ಯಕ್ಕೆ ಅವರ ರಾಷ್ಟ್ರೀಯತ್ವವೇ ಕಾರಣವೆಂದೂ, ತಮ್ಮ ದೌರ್ಬಲ್ಯಕ್ಕೆ ಅದರ .ಅಭಾವವೇ ಕಾರಣವೆಂದೂ, ಪರಾಧೀನ ಜನರು ಭಾವಿಸಿದರು. ಈ ಭಾವನೆಯಿಂದ ಅವರಲ್ಲಿ ರಾಷ್ಟ್ರೀಯತ್ವವು ಬೆಳೆಯಿತು. ಇದಲ್ಲದೆ ಹಿಂದುಸ್ಥಾನದಂತಹ ದೇಶಗಳಲ್ಲಿ ಪರಕೀಯರು ಸ್ಥಾಪಿಸಿದ ಆಡಳಿತೆಯ ಐಕ್ಯತೆ ಮತ್ತು ವಿದ್ಯಾಸಂಸ್ಥೆಗಳು ರಾಷ್ಟ್ರೀಯತ್ವವನ್ನು ಜಾಗ್ರತೆಗೊಳಿಸಲು ಕಾರಣವಾದುವೆಂದು ಹೇಳಬಹುದು.

ರಾಷ್ಟ್ರದ ಮೂಲ ಅಂಶಗಳಾದ ಭಾಷೆ, ಧರ್ಮ, ಸಂಸ್ಕೃತಿ, ಆರ್ಥಿಕ ಹಿತಸಂಬಂಧ, ಐತಿಹಾಸಿಕಪರಂಪರೆ ಮೊದಲಾದವುಗಳಲ್ಲಿ ಒಂದೆರಡು ಅಂಶಗಳ ಅಭಾವವಿದ್ದರೂ ರಾಷ್ಟ್ರದ ಐಕ್ಯತೆಗೆ ಚ್ಯುತಿಯುಂಟಾಗದು. ಹಿಂದುಸ್ಥಾನದಲ್ಲಿ ಹಲವು ಭಾಷೆಗಳಿವೆ, ಹಲವು ಧರ್ಮಗಳಿವೆ. ಆದರೂ ಅದು ರಾಷ್ಟ್ರವೆನಿಸುತ್ತದೆ. ರಾಷ್ಟ್ರಕ್ಕೆ ಮೂಲ ಜನರಲ್ಲಿ ಕಂಡು ಬರುವ ಐಕ್ಯತಾಭಾವನೆ. ವಿವಿಧ ಭಾಷೆಗಳನ್ನಾಡುವವರು, ವಿವಿಧ ಧರ್ಮಗಳನ್ನನುಸರಿಸುವವರು, ವಿವಿಧ ಜನಾಂಗದವರು ವಿವಿಧ ಸಂಸ್ಕೃತಿಗೆ ಅಂಟಿಕೊಂಡವರು ಇರುವ ಅಮೇರಿಕೆಯ ಸಂಯುಕ್ತ ಸಂಸ್ಥಾನವು ಒಂದು ರಾಷ್ಟ್ರವೆಂದು ಗಣಿಸಲ್ಪಡುತ್ತದೆ. ಅದಕ್ಕೆ ಆ ದೇಶದ ಜನರಲ್ಲಿ ಕಾಣಬರುವ ಐಕ್ಯತೆಯ ಭಾವನೆಯೇ ಮೂಲ. ಅದಿಲ್ಲದಿದ್ದರೆ ಬೇರಾವ ಅನಕೂಲ ಸಂಗತಿಗಳೂ ರಾಷ್ಟ್ರವನ್ನು ನಿರ್ಮಾಣ ಮಾಡಲಾರವು.

ರಾಷ್ಟ್ರಕ್ಕೆ ಒಂದು ನಿರ್ದಿಷ್ಟ ಪ್ರದೇಶವಿರಲೇಬೇಕು. ಅನೇಕ ದೇಶಗಳಲ್ಲಿ ವಾಸಿಸುವ ಜ್ಯೂ ಜನರು ಒಂದೇ ರಾಷ್ಟ್ರದವರಾಗರು. ಇಂಗ್ಲಂಡ, ಆಸ್ಟ್ರೇಲಿಯಾ, ನ್ಯೂಝಿಲಂಡಗಳ ಜನರು ಬಹುತರವಾಗಿ ಒಂದೇ ಬಗೆಯ ಧರ್ಮ, ಭಾಷೆ, ಮತ್ತು ಸಂಸ್ಕೃತಿಯುಳ್ಳವರಾಗಿದ್ದರೂ ಅವರು ಬೇರೆ ಬೇರೆ ರಾಷ್ಟ್ರದವರೆನಿಸುತ್ತಾರೆ.

ಐತಿಹಾಸಿಕ ಪರಂಪರೆಯೂ ರಾಷ್ಟ್ರದ ಐಕ್ಯತೆಗೆ ಬಲವಾದ ಕಾರಣವಾಗಿದೆ. ಹಿಂದೀಯರು ತಮ್ಮ ಐತಿಹಾಸಿಕ ಪರಂಪರೆಯ ಬಲದಿಂದ ಒಂದೇ ರಾಷ್ಟ್ರದವರೆಸಿನಿಕೊಳ್ಳುತ್ತಾರೆ.

ಇಂದಿನ ರಾಜ್ಯಗಳು ಬಹುತರವಾಗಿ ರಾಷ್ಟ್ರದ ಮೇರೆಯನ್ನೇ ಅನುಸರಿಸಿವೆ. ಪ್ರತಿಯೊಂದು ರಾಷ್ಟ್ರವೂ ತನ್ನದೇ ಆದ ರಾಜ್ಯವನ್ನು ಸ್ಥಾಪಿಸಿಕೊಳ್ಳಲು ಸ್ವತಂತ್ರವಿರಬೇಕೆಂದು ಇಂದಿನ ಎಲ್ಲ ಪ್ರಗತಿಪರರೂ ಒಪ್ಪುತ್ತಾರೆ. ನಾಗರಿಕ ಸ್ವಾತಂತ್ರ್ಯಕ್ಕೆ ರಾಷ್ಟ್ರೀಯ ಸ್ವಾತಂತ್ರ್ಯವು ಆಗತ್ಯವೆಂದು ಹೇಳುತ್ತಾರೆ. ಈ ಮಾತು ಮೂಲತಃ ನಿಜವಿದ್ದರೂ ರಾಷ್ಟ್ರ ರಾಷ್ಟ್ರಗಳು ಪರಸ್ಪರ ಅವಲಂಬಿಸಿ ಬಾಳಬೇಕಾದ ಇಂದಿನ ಯುಗದಲ್ಲಿ ತೀವ್ರತಮ ರಾಷ್ಟ್ರೀಯತ್ವವು ವಿಘಾತಕವಾದುದೆಂಬುದನ್ನು ಮರೆಯ ಕೂಡದು. ಅದು ಎರಡು ಭಯಾನಕ ಮಹಾಯುದ್ಧಗಳಿಗೆ ಕಾರಣವಾಗಿದೆ. ಅಂದಮೇಲೆ ಜಗತ್ತಿನ ಎಲ್ಲ ನಾಗರಿಕರು ತಮ್ಮ ರಾಷ್ಟ್ರೀಯತ್ವವು ಸದ್ಭಾವನೆಯ ಸೀಮೆಯನ್ನು ದಾಟಿ ದುರ್ಭಾವನೆಯ ದಳ್ಳುರಿಯಲ್ಲಿ ಧುಮುಕದಂತೆ ಎಚ್ಚರ ತಾಳುವುದು ಒಳಿತು.

ಒಂದು ದೃಷ್ಟಿಯಿಂದ ನೋಡಿದರೆ ಇದು ರಾಷ್ಟ್ರೀಯ ರಾಜ್ಯಗಳ ಯುಗದಂತೆ ಭಾಸವಾಗುತ್ತದೆ. ಎಲ್ಲ ರಾಜ್ಯಗಳೂ ತಮ್ಮ ತಮ್ಮ ರಾಷ್ಟ್ರಗಳ ಹಿತಸಂಬಂಧ ಮತ್ತು ಗೌರವರಕ್ಷಣೆಯ ಕಾರ್ಯದಲ್ಲಿ ಮಗ್ನವಾದಂತೆ ತೋರುತ್ತದೆ. ಆದರೆ ವಸ್ತುಸ್ಥಿತಿಯು ಭಿನ್ನವಾಗಿದೆ. ಪಶ್ಚಿಮ ಯುರೋಪದ ಲೋಕಸತ್ತಾತ್ಮಕ ರಾಜ್ಯಗಳ ಒಕ್ಕೂಟ, ಕಮ್ಯುನಿಷ್ಟ ರಾಜ್ಯಗಳ ಸಮೂಹ, ಬ್ರಿಟಿಷ ಪ್ರಜಾರಾಜ್ಯಗಳ ಗುಂಪು, ಬ್ರಹನ್ ಅಮೇರಿಕೆಯ ಕ್ರಿಯಾತ್ಮಕ ಅಸ್ತಿತ್ವ, ಮತ್ತು ಅರಬರಾಷ್ಟ್ರಗಳನ್ನು ಒಂದು ಗೂಡಿಸುವ ಪ್ರಯತ್ನ ಮೊದಲಾದವು ರಾಷ್ಟ್ರದ ಪ್ರಾಧಾನ್ಯತೆಯನ್ನು ತಗ್ಗಿಸುವ ಸಂಗತಿಗಳಾಗಿವೆ. ಯಾವುದೊಂದು ರಾಷ್ಟ್ರವು ಇಂದು ಸ್ವಯಂಪೂರ್ಣವಾಗಿ ಬಾಳಲಾರದು. ಇಂದಿನ ಸಂಪರ್ಕ ಸೌಕರ್ಯಗಳು ಉತ್ಪಾದಕ ಸಂಸ್ಥೆಗಳು, ವ್ಯವಹಾರದ ಸಂಬಂಧಗಳು, ಸಾಂಸ್ಕೃತಿಕ ಮತ್ತು ರಾಜಕೀಯ ಪಂಥಗಳು, ಸಂರಕ್ಷಣೆಯ ವಿಧಾನಗಳು ಮೊದಲಾದವು ರಾಷ್ಟ್ರದ ಪ್ರತ್ಯೇಕತೆಯನ್ನು ಕೊನೆಗಾಣಿಸಿವೆ. ಆದುದರಿಂದ ಒಂದು ರಾಷ್ಟ್ರದ ಆಂತರಿಕ ಅವಸ್ಥೆಯು ಆದರ ಅಂತರರಾಷ್ಟ್ರೀಯ ಸಂಬಂಧಗಳ ಮೇಲೆ ಅವಲಂಬಿಸುವ ಕಾಲವೊದಗಿದೆ. ಪಶ್ಚಿಮ ಯುರೋಪದ ಲೋಕಸತ್ತಾತ್ಮಕ ರಾಜ್ಯಗಳ ಆಂತರಿಕ ವ್ಯವಸ್ಥೆಯು ಅಮೇರಿಕೆಯ ರಾಜಕೀಯ ಗೊತ್ತುಗುರಿಗಳನ್ನು ಅನುಸರಿಸುತ್ತಿರುವುದು ಕಂಡುಬರುತ್ತಿದೆ. ಆದರಂತೆ ಪೂರ್ವ–

ರೋಪ ಮತ್ತು ಚೀನಾದ ಕಮ್ಯುನಿಷ್ಟ ರಾಜ್ಯಗಳು ರಸಿಯಾದ ರಾಜಕೀಯ ಗೊತ್ತುಗುರಿಗಳನ್ನು ಅನುಸರಿಸುತ್ತಿರುವುದೂ ಸ್ಪಷ್ಟವಿದೆ. ಈ ಬಗೆಯ ಸಂಗತಿಗಳನ್ನು ಅವಗಾಹನೆಗೆ ತೆಗೆದುಕೊಂಡರೆ ರಾಷ್ಟ್ರದ ಭಾವನೆಯು ಹಿಂದಿನಂತೆ ಮುಂದಾದರೂ ಬಲವತ್ತರವಾಗಿ ಉಳಿಯಬಹುದೋ ಹೇಗೆ ಎಂಬುದು ಸಂಶಯವಿದೆ.

೧೭. ಜಾತಿ ಪದ್ಧತಿಯ ಇತಿಹಾಸ

ಜಾತಿ ಪದ್ಧತಿಯು ಹಿಂದುಸ್ತಾನದ ಒಂದು ವಿಶಿಷ್ಟ ಸಂಸ್ಥೆ. ಜಾತಿಯು ವರ್ಣ, ಉದ್ಯೋಗ, ಧರ್ಮ, ಮತ್ತು ಜನ್ಮಗಳ ಪರಂಪರೆಯಿಂದ ಉದ್ಭವಿಸಿದಂತೆ ತೋರುತ್ತದೆ. ಆರ್ಯರು ಹಿಂದುಸ್ತಾನಕ್ಕೆ ಹೊಸದಾಗಿ ಬಂದಾಗ ತಾವು ಸವರ್ಣೀಯರೆಂದೂ ದಸ್ಯು ಜನರು ಅವರ್ಣೀಯರೆಂದೂ ಭಾವಿಸತೊಡಗಿದರು. ಆರ್ಯರು ದ್ರಾವಿಡರ ಸಂಗಡ ಬೆರೆಯುತ್ತ ಬಂದಂತೆ ಈ ವರ್ಣದ್ವೇಷವು ಕಡಮೆಯಾಗಿರಬೇಕು. ಆಗ ಜನರನ್ನು ಅವರವರ ಉದ್ಯೋಗಗಳ ಮೇಲಿಂದ ವರ್ಗೀಕರಣ ಮಾಡಹತ್ತಿರಬೇಕು. “ಸಮಾಜವೆಂದರೆ ಒಬ್ಬ ಸಜೀವ ಪುರುಷ. ಬ್ರಾಹ್ಮಣನು ಸಮಾಜ ಪುರುಷನ ಮುಖ; ಕ್ಷತ್ರಿಯನು ಅವನು ಬಾಹು; ವೈಶ್ಯನು ಅವನ ಡಿಂಭ; ಶೂದ್ರನು ಅವನ ಅವನ ಪಾದ”— ಎಂಬ ಮಾತು ವೇದದಲ್ಲಿ ಉಲ್ಲಿಖಿತವಾಗಿದೆ. ಈ ಮಾತಿನಿಂದ ಆಗ ವರ್ಣಗಳನ್ನು ಅವರವರ ಉದ್ಯೋಗದ ಮೇಲಿಂದ ನಿರ್ಧರಿಸಲಾಗುತ್ತಿತ್ತೆಂದು ಸ್ಪಷ್ಟವಾಗುತ್ತದೆ.

ವೇದ ಕಾಲದಲ್ಲಿ ಕೆಲವೆಡೆ ಮೂರು ವರ್ಣಗಳ ಜನರು ಒಂದೇ ಕುಟುಂಬದಲ್ಲಿ ಜೀವಿಸುತ್ತಿದ್ದುದು ಕಂಡುಬಂದಿದೆ. ಆಗ ವರ್ಣದ್ವೇಷ ಅಷ್ಟು ಬಲವತ್ತರವಾಗಿದ್ದಿಲ್ಲವೆಂದು ಕಾಣುತ್ತದೆ. ಆದರೆ ಶೂದ್ರರು ಕೀಳು ಎಂಬ ಭಾವನೆ ಮಾತ್ರ ಆಗಲೇ ಅಂಕುರಿಸಿತ್ತೆಂದು ಹೇಳಬಹುದು.

ಕ್ರಿ. ಶ. ಪೂರ್ವ ೬ನೆಯ ಶತಮಾನದ ಧರ್ಮಸೂತ್ರಗಳ ಕಾಲದಲ್ಲಿ ವರ್ಣಾಶ್ರಮ ಧರ್ಮವು ಸಾರ್ವತ್ರಿಕವಾದಂತೆ ತೋರುತ್ತದೆ. ವಂಶಪರಂಪರೆಯಿಂದ ಒಂದೇ ಉದ್ಯೋಗ ಮಾಡುತ್ತ ಬಂದ ಜನರು ಆಯಾ ಉದ್ಯೋಗಕ್ಕೆ ತಕ್ಕ ವರ್ಣವನ್ನು ಜನ್ಮದಾರಭ್ಯ ಪಡೆಯಹತ್ತಿದರು. ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದವರು ಬ್ರಾಹ್ಮಣರೂ, ಕ್ಷತ್ರಿಯ ಕುಟುಂಬದಲ್ಲಿ ಜನಿಸಿ

ದವರು ಕ್ಷತ್ರಿಯರೂ, ವೈಶ್ಯ ಕುಟುಂಬದಲ್ಲಿ ಜನಿಸಿದವರು ವೈಶ್ಯರೂ, ಶೂದ್ರ ಕುಟುಂಬದಲ್ಲಿ ಜನಿಸಿದವರು ಶೂದ್ರರೂ ಎಂದು ತಿಳಿಯತೊಡಗಿದರು. ಬ್ರಾಹ್ಮಣರು ವೇದಾಭ್ಯಾಸ ಮತ್ತು ಯಜ್ಞಯಾಗಾದಿಗಳಲ್ಲಿ ತೊಡಗಿರಬೇಕು; ಕ್ಷತ್ರಿಯರು ಸಮಾಜದ ರಕ್ಷಣೆಯ ಕಾರ್ಯದಲ್ಲಿ ನಿರತರಾಗಿರಬೇಕು; ವೈಶ್ಯರು ಒಕ್ಕಲತನ ಉದ್ಯೋಗ ವ್ಯವಹಾರಗಳಲ್ಲಿ ತೊಡಗಿರಬೇಕು; ಶೂದ್ರರು ಕೇವಲ ದೈಹಿಕ ಪರಿಶ್ರಮದ ಕಾರ್ಯಗಳನ್ನು ಮಾಡುತ್ತಿರಬೇಕು ಎಂಬ ನಿಯಮವು ಸಾಮಾನ್ಯವಾಗಿದ್ದಿತು. ಆದರೆ ಈ ನಿಯಮಕ್ಕೆ ಆಗ ಕೆಲವು ಅಪವಾದಗಳೂ ಇದ್ದವೆಂದು ಕಾಣುತ್ತದೆ. ಸೂತ್ರ ಮತ್ತು ಜಾತಕ ಸಾಹಿತ್ಯಗಳಲ್ಲಿ ಬ್ರಾಹ್ಮಣರು ಮತ್ತು ಕ್ಷತ್ರಿಯರು ಕೆಲವೆಡೆ ಕೃಷಿಕರ್ಮದಲ್ಲಿ ತೊಡಗಿದ್ದುದು ಉಲ್ಲಿಖಿತವಾಗಿದೆ.

ಕ್ರಿ. ಶ. ಪ್ರಾರಂಭದ ಧರ್ಮಶಾಸ್ತ್ರಗಳ ಕಾಲದಲ್ಲಿ ವರ್ಣಾಶ್ರಮ ಧರ್ಮವು ಜಾತಿ ಪದ್ಧತಿಯಲ್ಲಿ ರೂಪಾಂತರ ಹೊಂದಿತೆಂದು ಹೇಳಬಹುದು. ಮನುಷ್ಯನ ಜಾತಿಯು ಅವನ ಜನ್ಮವನ್ನೇ ಅನುಸರಿಸುತ್ತದೆಯೆಂಬ ನಿಷ್ಠುರ ನಿಯಮವು ಪ್ರಚುರವಾಯಿತು. "ಮನುಷ್ಯನು ಸಮಾಜದಲ್ಲಿ ತನ್ನ ಸ್ಥಾನವನ್ನು ಜನ್ಮದಿಂದ ಪಡೆಯುತ್ತಾನೆ. ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದವನು ಬ್ರಾಹ್ಮಣ್ಯದ ಸಂಸ್ಕಾರವನ್ನು ಪಡೆಯುತ್ತಾನೆ. ಕ್ಷತ್ರಿಯ ಕುಟುಂಬದಲ್ಲಿ ಜನಿಸಿದವನು ಕ್ಷಾತ್ರ ಸಂಸ್ಕಾರವನ್ನೂ ಪಡೆಯುತ್ತಾನೆ.

ಈ ಸಂಸ್ಥಾನವು ಅವರವರ ಪೂರ್ವಜನ್ಮದ ಕರ್ಮದ ಫಲ. ಅದು ದೇವ ಸಂಕಲ್ಪ, ಅದನ್ನು ತಪ್ಪಿಸುವುದು ಮನುಷ್ಯನ ಕೈಯಲ್ಲಿಲ್ಲ. ಶೂದ್ರನು ಬ್ರಾಹ್ಮಣನಾಗಲು ಹವ್ಯಾಸಪಡುವುದು ಅಧರ್ಮ. ಆದುದರಿಂದ ಮನುಷ್ಯನು ತನಗೆ ಜನ್ಮದಿಂದ ಲಭಿಸಿದ ಸ್ಥಾನದಲ್ಲಿಯೇ ಬಾಳಿ ಬದುಕಬೇಕು. ಎಂಬ ತತ್ವಸರಣಿಯೇ ಜಾತಿ ಪದ್ಧತಿಯ ಬುನಾದಿ.

ಈ ತತ್ವಸರಣಿಗೆ ಅನುಗುಣವಾದ ಆಚರಣೆಗಳೂ ಪ್ರಚಲಿತವಾದವು. ಬ್ರಾಹ್ಮಣನು ಬ್ರಾಹ್ಮಣನಾಗಿಯೇ ಉಳಿಯಲು ಅವನು ಅನ್ಯಜಾತಿಯವರ ಸಂಗಡ ವೈವಾಹಿಕ ಸಂಬಂಧ ಬೆಳೆಸದಂತಾಯಿತು; ಊಟ ಉಪಚಾರಗಳನ್ನು ಮಾಡದಂತಾಯಿತು; ಶೂದ್ರರನ್ನು ಸ್ಪರ್ಶಿಸದಂತಾಯಿತು; ಅವರಿಗೆ ಬ್ರಹ್ಮಜ್ಞಾನವನ್ನೂ ಸಹ ಬೋಧಿಸದಂತಾಯಿತು." ಬ್ರಾಹ್ಮಣರು, ಕ್ಷತ್ರಿ

ಯರು ಮತ್ತು ವೈಶ್ಯರು ಸವರ್ಣೀಯರಾದರು; ಶೂದ್ರರು ಅವರ್ಣೀಯ ರಾದರು. ಬ್ರಾಹ್ಮಣನು ಸಮಾಜದ ಮುಕುಟ; ಕ್ಷತ್ರಿಯನು ಅವನಿಗಿಂತಲೂ ಕೀಳು; ವೈಶ್ಯನು ಕ್ಷತ್ರಿಯನಗಿತಂಲೂ ಕೀಳು; ಶೂದ್ರನು ಎಲ್ಲರಗಿಂತಲೂ ಕೀಳು ಎಂಬ ಭಾವನೆಯು ಬೆಳೆಯಿತು. ಉಚ್ಚ ಜಾತಿಯವನು ಕೆಳ ಜಾತಿ ಯವನ ಸಂಗಡ ಸಂಪರ್ಕ ಬೆಳೆಸಿದರೆ ಅವನ ಜಾತಿ ನಷ್ಟವಾಯಿತೆಂದು ತಿಳಿಯಲು ಪ್ರಾರಂಭವಾಯಿತು. ಆಗ ಒಂದಿಲ್ಲೊಂದು ಬಗೆಯ ಉಚ್ಚ ನೀಚ ಜಾತಿಯ ಜನರ ನಡುವಿನ ಸಂಪರ್ಕದಿಂದ ಮಧ್ಯಂತರದ ಎಷ್ಟೋ ಉಪಜಾತಿಗಳುಂಟಾಗುವಂತಾಯಿತು. ಇದಲ್ಲದೆ ಜನರು ತೊಡಗಿದ ಉದ್ಯೋ ಗಗಳಲ್ಲಿಯೂ ತಾರ ತಮ್ಯವನ್ನು ಮಾಡಲಾಯಿತು. ಬೌದ್ಧಿಕ ಚಟುವಟಿ ಕೆಗಳಲ್ಲಿ ತೊಡಗಿದವರು ಉಚ್ಚಸ್ಥಾನವನ್ನು ಪಡೆದರು. ದೈಹಿಕ ಪರಿಶ್ರಮ ದಿಂದ ಬದುಕುವವರು ಕೀಳು ಸ್ಥಾನವನ್ನು ಪಡೆದರು. ಇವೆರಡೂ ಸೀಮಾಂತ ರಗಳ ನಡುವೆ ಆಯಾ ಉದ್ಯೋಗಕ್ಕೆ ಹೊಂದಿಕೊಂಡ ನೂರಾರು ಜಾತಿ ಗಳು ಉಂಟಾದವು. ಹೀಗೆ ಉಚ್ಚನೀಚ ಭಾವನೆಗಳ ಮೇಲೆ ಕಟ್ಟಿದ ಜಾತಿಪದ್ಧತಿಯು ಕಾಲಾಂತರದಲ್ಲಿ ಸ್ಥಿರಗೊಂಡಿತು.

**೧೪. ಜಾತಿಪದ್ಧತಿಯಿಂದ ಹಿಂದೆ ಒದಗಿದ ಲಾಭ**

ಒಂದು ದೃಷ್ಟಿಯಿಂದ ನೋಡಿದರೆ ಜಾತಿಪದ್ಧತಿಯು ಶ್ರಮವಿಭಜ ನೆಯ ತತ್ವವನ್ನು ಅನುಸರಿಸುವಂತೆ ಭಾಸವಾಗುತ್ತದೆ. ಆಯಾ ಜಾತಿಯ ಜನರು ಪರಸ್ಪರ ಪೋಷಕ ಉದ್ಯೋಗಗಳಲ್ಲಿ ನಿರತರಾಗಿರುತ್ತಾರೆ. ಇದ ಲ್ಲದೆ ವಂಶ ಪರಂಪರೆಯಿಂದ ಒಂದೇ ಉದ್ಯೋಗದಲ್ಲಿ ನಿರತವಾದ ಜಾತಿಯ ಜನರು ತಮ್ಮ ಉದ್ಯೋಗದಲ್ಲಿ ನೈಪುಣ್ಯತೆಯನ್ನು ಪಡೆಯುವುದು ಸಹಜ. ಹಿಂದುಸ್ತಾನದ ಕೈಗಾರಿಕೆಯ ವಸ್ತುಗಳು ಒಂದು ಕಾಲಕ್ಕೆ ಪ್ರಸಿದ್ಧವಾ ಗಿದ್ದುವೆಂದು' ಇತಿಹಾಸ ಸಾರುತ್ತದೆ. ಇಂದಿಗೂ ಹಿಂದುಸ್ತಾನದ ಆಯಾ ಜಾತಿಯ ಕಸಬುದಾರರು ತಮ್ಮ ವಂಶ ಪರಂಪರೆಯ ಕೈಗಾರಿಕೆಗಳಲ್ಲಿ ಬಹಳ ಕುಶಲರಾಗಿದ್ದಾರೆಂಬುದು ತಿಳಿದ ಮಾತಾಗಿದೆ. ಒಂದು ಕಾಲಕ್ಕೆ ಜಾತಿಪದ್ಧತಿಯು ಹಿಂದುಸ್ತಾನದ ಔದ್ಯೋಗಿಕ ಪ್ರಗತಿಗೆ ಕಾರಣವಾಗಿ ತ್ತೆಂದು ಹೇಳಬಹುದು

ಜಾತಿ ಪದ್ಧತಿಯಿಂದ ಸಮಾಜದಲ್ಲಿ ಗಣ್ಯಸ್ಥಾನ ಪಡೆದ ಬ್ರಾಹ್ಮಣ ಕ್ಷತ್ರಿಯ ವರ್ಗದವರೂ ಸಹ ಹಿಂದೂ ಸಮಾಜಕ್ಕೆ ತಮ್ಮ ಕಾಣಿಕೆಯನ್ನು

ಸಲ್ಲಿಸಿದ್ದಾರೆ. ಬೌದ್ಧಿಕ ಚಟುವಟಿಕೆಗಳಲ್ಲಿ ತೊಡಗಿದ ಇವರು ವೇದ, ಸೂತ್ರ, ಶಾಸ್ತ್ರ, ಪುರಾಣ ಮೊದಲಾದವುಗಳನ್ನು ರಚಿಸಿದರಲ್ಲದೆ ಆಯು ರ್ವೇದ, ಜ್ಯೋತಿಷ, ಗಣಿತ, ವ್ಯಾಕರಣ, ರಾಜನೀತಿ ಮೊದಲಾದ ವಿಷ ಯಗಳ ಮೇಲೆಯೂ ಉತ್ತಮೋತ್ತಮ ಕೃತಿಗಳನ್ನು ರಚಿಸಿದ್ದಾರೆ. ಭಾರ ತೀಯರ ಪ್ರಾಚೀನ ಸಾಹಿತ್ಯವು ಇವರ ಗಣ್ಯದೇಣಿಗೆಯಾಗಿದೆ. ಆ ಕಾಲದ ಸಣ್ಣ ಪುಟ್ಟ ಗಣ ರಾಜ್ಯಗಳನ್ನು ಕೀರ್ತಿಗೆ ತಂದವರೂ ದೊಡ್ಡ ಸಾಮ್ರಾ ಜ್ಯಗಳನ್ನು ಕಟ್ಟಿ ಆಳಿದವರೂ ಇವರೇ ಎಂದು ಹೇಳಬಹುದು. ಆದರೆ ಉದ್ಯೋಗ ವ್ಯವಹಾರ ಒಕ್ಕಲತನ ಕೈಗಾರಿಕೆ ಮೊದಲಾದ ದೈಹಿಕ ಪರಿಶ್ರ ಮಗಳಲ್ಲಿ ತೊಡಗಿದ ಜಾತಿಯವರೂ ಉಚ್ಚ ಜಾತಿಯವರು ಸಾಧಿಸಿದ ಪ್ರಗತಿಗೆ ಭದ್ರವಾದ ಆರ್ಥಿಕ ತಳಹದಿಯನ್ನು ಒದಗಿಸಿದ್ದರೆಂಬುದನ್ನು ಮಾತ್ರ ಮರೆಯಲಾಗದು.

**೧೯ ಜಾತಿ ಪದ್ಧತಿಯ ಪರಿವರ್ತನೆಯ ಕಾರಣಗಳು.**

ಇದು ಹಿಂದಿನ ಕಾಲದ ಮಾತು. ಜಾತಿ ಪದ್ಧತಿಯ ಸ್ವರೂಪ ಇಂದು ಪರಿವರ್ತನೆ ಹೊಂದುತ್ತ ನಡೆದಿದೆ. ಈ ಪರಿವರ್ತನೆಗೆ ಬ್ರಿಟಿಷರ ರಾಜ್ಯದಾಡಳಿತೆ ಪ್ರಚೋದನೆಯನ್ನಿತ್ತಿತು. ಉಚ್ಚ ವರ್ಗದವರು ಬ್ರಿಟಿಷರ ರಾಜಕೀಯ ಶ್ರೇಷ್ಠತೆಯನ್ನು ಪ್ರಶ್ನಿಸತೊಡಗಿದ ಕೂಡಲೆ ಬ್ರಿಟಿಷರು ಉದ್ದೇಶ ಪೂರ್ವಕವಾಗಿ ರಾಜ್ಯದಾಡಳಿತದಲ್ಲಿ ಮಧ್ಯಮ ಮತ್ತು ಹಿಂದುಳಿದ ಜಾತಿ ಗಳ ಜನರಿಗೆ ಪ್ರಾತಿನಿಧ್ಯ ಕೊಡಹತ್ತಿದರು ಇದಲ್ಲದೆ ಕೆಳಜಾತಿಯವರಿಗೆ ಹೆಚ್ಚಿನ ಶೈಕ್ಷಣಿಕ ಸೌಲಭ್ಯಗಳನ್ನು ಕೊಡಹತ್ತಿದರು. ಇದರಿಂದ ಬಹು ಕಾಲದಿಂದ ಗಳಿಸಿದ ಉಚ್ಚ ಜಾತಿಯವರ ಬೌದ್ಧಿಕ ಮತ್ತು ಸಾಮಾಜಿಕ ಸ್ಥಾನಮಾನಕ್ಕೆ ಚ್ಯುತಿಯುಂಟಾಯಿತು. ಈಗಾಗಲೆ ಹಿಂದುಳಿದ ಜಾತಿಯ ವರು ಈ ದಿಸೆಯಲ್ಲಿ ಸರಿಸಮಾನ ಸ್ಥಾನ ಪಡೆದಿರದಿದ್ದರೂ, ಉಚ್ಚ ಜಾತಿಯ ವರು ತಮ್ಮ ಹಿಂದಿನ ಕಾಲದ ಸ್ಥಾನವನ್ನು ಪುನಃ ಪಡೆಯಲಾರರೆಂದು ಅನಿ ಸುತ್ತಿದೆ. ಆ ಬಗೆಯ ಪ್ರಯತ್ನವೂ ಅನುಚಿತ.

ಆಧುನಿಕ ವಾಹನ ಸೌಕರ್ಯಗಳು ಮತ್ತು ಉದ್ದಿಮೆಗಳು ಹಿಂದು ಸ್ತಾನದ ಆರ್ಥಿಕ ವ್ಯವಸ್ಥೆಯಲ್ಲಿ ಸ್ಥಿತ್ಯಂತರವನ್ನುಂಟು ಮಾಡಿವೆ. ಇದ ರಿಂದಲೂ ಜಾತಿಪದ್ಧತಿಯಲ್ಲಿ ಪರಿವರ್ತನೆ ಹೊಂದಲು ಕಾರಣವಾಗಿದೆ. ಕಾರಖಾನೆಗಳಲ್ಲಿ ಉದ್ಯೋಗ ವ್ಯವಹಾರಗಳಲ್ಲಿ ಕಚೇರಿಗಳಲ್ಲಿ ಕೆಲಸ ಮಾಡಲು

ಜನರು ಹಳ್ಳಿಗಳನ್ನು ಬಿಟ್ಟು ಪಟ್ಟಣಗಳಿಗೆ ಬರಹತ್ತಿದರು. ಹೀಗೆ ಬಂದ ವರು ಜಾತಿಪದ್ಧತಿಯ ನಿಯಮಗಳನ್ನು ಎಷ್ಟೊ ತಪ್ಪದೆ ಪಾಲಿಸದಾದರು. ನಳದ ನೀರನ್ನು ಅನಿವಾರ್ಯವಾಗಿ ಉಪಯೋಗಿಸಬೇಕಾಯಿತು. ಅನೇಕ ಜಾತಿಯವರು ಬೆರೆತು ಚಹಾಪಾನ ಮಾಡಬೇಕಾಯಿತು. ರೇಲ್ವೆ, ಮೋಟಾರು, ಹಡಗುಗಳಲ್ಲಿ ಪ್ರವಾಸಮಾಡುವಾಗ ಅನ್ನ ನೀರು ದೊರಕಿ ಸುವಯತ್ನದಲ್ಲಿ ಜಾತಿಯನ್ನು ಮರೆಯಬೇಕಾಯಿತು. ದೂರದ ನಾಡುಗ ಳಿಗೆ ಹೋದಾಗ್ಗೆ ಸ್ವಜಾತಿಯವರನ್ನು ಕಾಣುವುದೇ ದುರ್ಲಭವಾಯಿತು ಅಲ್ಲಿ ಇತರ ಜಾತಿಯವರ ಜೊತೆಗೆ ಬೆರೆಯಬೇಕಾಯಿತು. ಕಚೇರಿಗಳಲ್ಲಿ ಹಲವು ಸಲ ಉಚ್ಚ ಜಾತಿಯವರು ಕೆಳ ಜಾತಿಯವರ ಕೈಕೆಳಗೆ ಕೆಲಸ ಮಾಡುವಂತಾಯಿತು. ಹೀಗೆ ಜಾತಿಪದ್ಧತಿಯ ನಿಯಮಗಳು ಸಡಿಲಾಗು ವಂತಾಯಿತು.

ಜಾತಿಪದ್ಧತಿಯ ಪರಿವರ್ತನೆಗೆ ಪಾಶ್ಚಿಮಾತ್ಯರ ಸಂಪರ್ಕವೂ ಒಂದು ಕಾರಣ. ಪಾಶ್ಚಿಮಾತ್ಯರಲ್ಲಿ ಧಾರ್ಮಿಕ ಪಂಥಗಳಿವೆ ಆದರೆ ಅವರ ಧಾರ್ಮಿಕ ಪಂಥಗಳಿಗೂ ಹಿಂದೂ ಸಮಾಜದ ಜಾತಿಗಳಿಗೂ ಮಹದಂತರವಿದೆ. ಕ್ರೈಸ್ತ ಇಲ್ಲವೆ ಇಸ್ಲಾಂ ಪಂಥಗಳಲ್ಲಿ ಮೇಲು ಕೀಳು ಭಾವನೆಯು ಅಷ್ಟು ತೀಕ್ಷ್ಣ ವಾಗಿಲ್ಲ. ಅವು ಕೇವಲ ಧಾರ್ಮಿಕ ನಂಬುಗೆ ಮತ್ತು ಆಚರಣೆಗಳ ಪ್ರತ್ಯೇಕತೆಯ ತಳಹದಿಯ ಮೇಲೆ ನಿಂತಿವೆ. ಪಾಶ್ಚಿಮಾತ್ಯರು ಹಿಂದು ಸ್ತಾನದಲ್ಲಿ ಪ್ರಭುತ್ವಪಡೆದ ಕಾಲಕ್ಕೆ ಅವರಲ್ಲಿ ಪರಪಂಥ ಮತ್ತು ಪರಧರ್ಮ ಸಹಿಷ್ಣುತೆಯು ಅಂಕುರಿಸಹತ್ತಿತು. ಎಲ್ಲ ಧರ್ಮದ ಜನರೂ ದೇವರ ದೃಷ್ಟಿ ಯಲ್ಲಿ ಸಮಾನಸ್ಕಂಧರೆಂಬ ಭಾವನೆಯು ಬೆಳೆಯತೊಡಗಿತ್ತು. ಈ ಭಾವ ನೆಯನ್ನು ಕ್ರೈಸ್ತ ಪಾದ್ರಿಗಳು ಹಿಂದುಸ್ತಾನದ ಜನತೆಗೆ ಬೋಧಿಸತೊ ಡಗಿದರು. ಅನೇಕರನ್ನು ಕ್ರೈಸ್ತಮತಕ್ಕೂ ಸೇರಿಸಿಕೊಂಡರು ಇದರಿಂದ ಎಚ್ಚತ್ತ ಹಿಂದೂ ಸಮಾಜದಲ್ಲಿ ಸಮಾಜ ಸುಧಾರಕರು ತಲೆಯೆತ್ತಿದ್ದರು. ಬ್ರಹ್ಮಸಮಾಜ ಆರ್ಯ ಸಮಾಜ ಮೊದಲಾದ ಹೊಸ ಪಂಥಗಳು ರೂಪು ಗೊಂಡವು. ಉಚ್ಚನೀಚ ಜಾತಿಗಳಿಂದ ಒಡೆದು ದುರ್ಬಲವಾದ ಹಿಂದೂ ಸಮಾಜವನ್ನು ಸಮತೆಯ ತಳಹದಿಯ ಮೇಲೆ ಸಂಘಟಿಸುವುದೇ ಈ ಪಂಥ ಗಳ ಗುರಿಯಾಗಿತ್ತು. ಈಗುರಿ ಸಾಧಿಸಲಿಲ್ಲೆಂಬುದು ನಿಜ. ಆದರೆ ಇವು ಗಳ ಪರಿಣಾಮವಾಗಿ ಜಾತಿಪದ್ಧತಿಯ ರೂಢಿಗಳ ಬಗ್ಗೆ ಇದ್ದ ಗೌರವವು ಮಾತ್ರ ತಗ್ಗಿತ್ತು.

ಆಂಗ್ಲ ವಿದ್ಯಾಭ್ಯಾಸದ ಪ್ರಸಾರವು ಜಾತೀಯತೆಯನ್ನು ತಗ್ಗಿಸಿದ ಪ್ರಬಲಕಾರಣಗಳಲ್ಲಿ ಒಂದು. ಅದು ಹಿಂದೀಯರಲ್ಲಿ ವೈಜ್ಞಾನಿಕ ಪ್ರವೃತ್ತಿಯನ್ನು ಹೆಚ್ಚಿಸಿತು. ಅದು ಪರಂಪರಾಗತ ರೂಢಿಗಳ ಅನೌಚಿತ್ಯವನ್ನು ಎತ್ತಿತೋರಿಸಿತು. ಮನುಷ್ಯನ ಬೆಲೆಯನ್ನು ಜಾತಿಯಮೇಲಿಂದ ಅಳೆಯುವುದು ತೀರ ಕೃತ್ರಿಮವೆಂಬುದನ್ನು ಅದು ಮನವರಿಕೆ ಮಾಡಿಕೊಟ್ಟಿತು. ಇದರಿಂದ ಜಾತಿಪದ್ಧತಿಯ ನೈತಿಕ ತಳಹದಿಯೇ ಕುಸಿದುಬಿದ್ದಿತು.

ಜಾತಿಪದ್ಧತಿಯ ಪರಿವರ್ತನೆಗೆ ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಹಿಂದುಸ್ತಾನದ ರಾಜಕೀಯ ಸ್ವಾತಂತ್ರ್ಯದ ಆಂದೋಲನವೂ ಕಾರಣವಾಯಿತು. ಜಾತಿ ಜಾತಿಗಳ ನಡುವೆ ಧರ್ಮ ಧರ್ಮಗಳ ನಡುವೆ ಇರುವ ವಿಷಮತೆಯನ್ನು ದೇವರು ಸೃಷ್ಟಿಸಿಲ್ಲ; ಸ್ಪೃಶ್ಯ ಅಸ್ಪೃಶ್ಯರೆಂದು ದೇವರು ಕಲ್ಪಿಸಿಲ್ಲ; ಇವೆಲ್ಲವೂ ಮನುಷ್ಯನ ಕೃತ್ರಿಮ ರೂಢಿಯಿಂದ ಉಂಟಾದವುಗಳು; ಈ ದೋಷಗಳು ಮಾಯವಾಗದ ಹೊರತು ರಾಷ್ಟ್ರದ ಐಕ್ಯತೆ ಸಾಧಿಸುವುದಿಲ್ಲ; ರಾಷ್ಟ್ರದ ಐಕ್ಯತೆಯಿಲ್ಲದೆ ರಾಜಕೀಯ ಸ್ವಾತಂತ್ರ್ಯ ಲಭಿಸುವುದಿಲ್ಲವೆಂಬ ವಿಚಾರಗಳು ಸ್ವಾತಂತ್ರ್ಯದ ಆಂದೋಲನದ ಸಮಯದಲ್ಲಿ ಹಿಂದುಸ್ತಾನದ ಸಾಮಾನ್ಯ ಜನತೆಯಲ್ಲಿ ಬಿತ್ತರಿಸಲ್ಪಟ್ಟವು. ಇದರಿಂದ ಜಾತೀಯತೆಯು ಸಿಥಿಲವಾಗಿ ರಾಷ್ಟ್ರೀಯತ್ವವು ತಲೆದೋರಿತು.

### ೨೦. ಜಾತಿ ಪದ್ಧತಿಯ ಅನೌಚಿತ್ಯ

ಇಂದಿನ ಯುಗದಲ್ಲಿ ಪ್ರಚಲಿತವಿರುವ ಲೋಕ ಸತ್ತಾತ್ಮಕ ನಾಗರಿಕ ಸ್ವಾತಂತ್ರ್ಯದ ವಿಚಾರಗಳೂ ಜಾತಿಪದ್ಧತಿಯ ನೀತಿಯನ್ನು ವಿರೋಧಿಸುತ್ತವೆ. ಜಾತೀಯತೆಯ ಅಸಮತೆಯ ಭಾವನೆ ಮನುಷ್ಯನ ನೈಜ ಗುಣಧರ್ಮಕ್ಕೆ ವಿರೋಧವಾಗಿದೆ ಮನುಷ್ಯ ಮನುಷ್ಯನಲ್ಲಿ ದೈಹಿಕ ಮತ್ತು ಮಾನಸಿಕ ವ್ಯತ್ಯಾಸಗಳಿವೆ. ಆದರೆ ಎಲ್ಲರೂ ತಮ್ಮ ತನವನ್ನು ಕಳೆದುಕೊಳ್ಳದೆ ಸ್ವತಂತ್ರರಾಗಲು ಬಯಸುತ್ತಾರೆ. ಎಲ್ಲರೂ ಉತ್ತಮ ಸಮಾಜ ಮತ್ತು ಉತ್ತಮ ರಾಜ್ಯಗಳನ್ನೇ ಬಯಸುತ್ತಾರೆ. ಆದುದರಿಂದ ಎಲ್ಲರಿಗೂ ಸಮ ಅವಕಾಶ ಒದಗಿಸಬಲ್ಲ ಸಮಾಜವೇ ಮನುಷ್ಯನ ನೈಜ ಗುಣಧರ್ಮಕ್ಕನುಗುಣವಾದ ಸಮಾಜವಾಗಬಲ್ಲದು. ಜನ್ಮದಾರಭ್ಯ ಮೇಲು ಕೀಳುಗಳನ್ನು ಅಂಟಿಸುವ ಜಾತಿ ಪದ್ಧತಿಯು ನಾಗರಿಕ ಸ್ವಾತಂತ್ರ್ಯ ಪ್ರೇಮಿ

ಗಳ ಸಹಾನುಭೂತಿಯನ್ನು ಕಳೆದುಕೊಂಡಿದೆ. ಅಸ್ಪೃಶ್ಯತೆಯಂತಹ ಅಮಾನುಷ ರೂಢಿಯು ಇಂದಿನ ನಾಗರಿಕ ಜನಾಂಗಕ್ಕೆ ಒಪ್ಪುವಂತಹದಲ್ಲ. ಅಮೇರಿಕೆ ಮತ್ತು ಆಫ್ರಿಕೆಯಲ್ಲಿ ಬಿಳಿಯರು ಕಪ್ಪು ಜನಾಂಗದವರನ್ನು ಕಾಣುವ ಬಗೆಯೂ ಹಿಂದೀಯರು ಹರಿಜನರನ್ನು ಕಾಣುವ ಬಗೆಯೂ ಮಾನವ ಕುಲಕ್ಕೆ ಕಲಂಕ ಹಚ್ಚುವ ಸಂಗತಿಗಳು

ಬುದ್ಧಿವಂತಿಕೆಯ ಒಂದು ವಿಶಿಷ್ಟ ಜಾತಿಯ ಇಲ್ಲವೆ ಒಂದು ವಿಶಿಷ್ಟ ವರ್ಗದ ಸೊತ್ತಾಗಿಲ್ಲ. ಈ ಮಾತನ್ನು ಮಾನಸಶಾಸ್ತ್ರಜ್ಞರು ಸ್ಪಷ್ಟಪಡಿಸಿದ್ದಾರೆ. ಸದವಕಾಶದೊರೆತ ಕೆಳ ಜಾತಿಯವರು ವಿವಿಧ ಬೌದ್ಧಿಕ ಚಟುವಟಿಕೆಗಳಲ್ಲಿ ತೋರ್ಪಡಿಸುತ್ತಿರುವ ಜಾಣತನ ಈ ಮಾತಿಗೆ ಪುಷ್ಟಿ ಕೊಡುತ್ತದೆ. ಈ ಮಾತು ಜಾತಿಯ ಔಚಿತ್ಯವನ್ನೇ ಅಲ್ಲಗಳೆಯುತ್ತದೆ.

ಜಾತಿಪದ್ಧತಿಯು ವರ್ಗೀಕರಣವು ಇಂದಿನ ಆರ್ಥಿಕ ಸ್ಥಿತಿಗೆ ಸಲ್ಲದು, ಹಿಂದೆ ಮನೆ ಮನೆಗಳಲ್ಲಿ ನಡೆಯುತ್ತಿದ್ದ ಕೈಗಾರಿಕೆಯ ಉದ್ಯೋಗಗಳು ಇಂದು ದೊಡ್ಡ ದೊಡ್ಡ ಕಾರಖಾನೆಗಳಲ್ಲಿ ಕೇಂದ್ರಿಕೃತವಾಗಿವೆ. ವೈಯಕ್ತಿಕ ಕಲಾಕೌಶಲ್ಯಕ್ಕೆ ಇದ್ದ ಬೆಲೆಯು ತಗ್ಗಿ ಯಂತ್ರಗಳಲ್ಲಿ ಸಿದ್ಧವಾದ ಒಂದೇ ಬಗೆಯ ವಸ್ತುಗಳ ಸಂಖ್ಯೆಗೆ ಬೆಲೆ ಬಂದಿದೆ. ಜನರು ತಮ್ಮ ವಂಶಪರಂಪರೆಯ ಕೈಗಾರಿಕೆಯ ವಿಧಾನಗಳನ್ನು ಬಿಟ್ಟು ಹೊಸ ವಿಧಾನಗಳನ್ನು ಅನುಸರಿಸಬೇಕಾಗಿದೆ. ಇದಲ್ಲದೆ ಒಂದು ಉದ್ಯೋಗವನ್ನು ಬಿಟ್ಟು ಇನ್ನೊಂದು ಉದ್ಯೋಗಕ್ಕೆ ಜನರು ಕೈನೀಡಬೇಕಾದ ಅವಶ್ಯಕತೆಯುಂಟಾಗಿದೆ. ಹೀಗಿರುವಾಗ ಒಂದು ಜಾತಿಯವರು ತಮ್ಮ ವಂಶಪರಂಪರೆಯ ಉದ್ಯೋಗಕ್ಕೆ ಅಂಟಿಕೊಂಡಿರುವುದು. ಅವ್ಯವಹಾರ್ಯವೆನಿಸುತ್ತದೆ.

ಜಾತಿಪದ್ಧತಿಯ ವರ್ಗೀಕರಣವು ಶ್ರಮಜೀವನದ ಅವಹೇಳನೆ ಮಾಡುತ್ತದೆ. ಆದುದರಿಂದ ಇಂದು ಉಚ್ಚಜಾತಿಯವರು ಶ್ರಮಜೀವಿಗಳಾಗಿ ಬದುಕಲು ನಾಚುತ್ತಿದ್ದಾರೆ, ಇಷ್ಟೇ ಅಲ್ಲ; ಎಲ್ಲ ಜಾತಿಗಳಲ್ಲಿಯೂ ದುಡಿದು ಉಣ್ಣುವುದು ಅಗೌರವ, ಕುಳಿತು ಉಣ್ಣುವುದು ದೊಡ್ಡಸ್ತಿಕೆಯ ಲಕ್ಷಣವೆಂಬ ಅಸ್ವಾಭಾವಿಕ ಭಾವನೆಯು ಬೇರೂರುವಂತಾಗಿದೆ. ಇದರಿಂದ ಒಕ್ಕಲಿಗರಿಗೆ ಮತ್ತು ಕೂಲಿಕಾರರಿಗೆ ಸಮಾಜದಲ್ಲಿ ಗೌರವವಿಲ್ಲದಾಗಿದೆ. ಗೌರವವಿಲ್ಲದ ಉದ್ಯೋಗದಲ್ಲಿ ಜನರು ಆಸ್ಥೆವಹಿಸಿ ದುಡಿಯಲಾರರು. ಹೀಗೆ

ಶ್ರಮಜೀವನದ ಅವಹೇಳನೆಗೆ ಕಾರಣವಾದ ಜಾತಿಪದ್ಧತಿಯು ಹಿಂದುಸ್ತಾನದ ಆರ್ಥಿಕ ಪ್ರಗತಿಗೆ ಬಾಧಕವಾಗಿದೆಯೆಂದು ಹೇಳಬಹುದು.

ಹಿಂದೂ ಸಮಾಜದ ಐಕ್ಯತೆಯನ್ನು ನಷ್ಟಗೊಳಿಸಿದುದು ಜಾತಿಪದ್ಧತಿಯ ಮಹಾದೋಷ. ಮೇಲು ಕೀಳು ಭಾವನೆ, ಊಟ ಉಪಚಾರದ ನಿಷಿದ್ಧತೆ, ವೈವಾಹಿಕ ಸಂಭಂಧಗಳ ನಿರ್ಬಂಧನೆ, ಸ್ಪೃಶ್ಯ ಅಸ್ಪೃಶ್ಯತೆಯ ಹೀನ ಆಚಾರಣೆ ಮೊದಲಾದವು ಜಾತಿ ಜಾತಿಗಳಲ್ಲಿ ವಿಷಮತೆಯನ್ನು ಹುಟ್ಟಿಸಿತು. ಇದರಿಂದುಂಟಾದ ಸಮಾಜದ ಛಿದ್ರೀಕರಣವೇ ಒಂದು ಕಾಲಕ್ಕೆ ಹಿಂದುಸ್ತಾನವನ್ನು ಪರದಾಸ್ಯದಲ್ಲಿ ನೂಕಿತು. ಇಂದಿಗೂ ಹಿಂದುಸ್ತಾನದ ರಾಜಕೀಯ ರಂಗದಲ್ಲಿ ಜಾತಿಯು ಅನೈಕ್ಯತೆಗೆ ಕಾರಣವಾಗಿದೆಯೆಂದರೆ ತಪ್ಪಾಗದು.

೨೧ ಜಾತಿ ಪದ್ಧತಿಯ ಹೊಸರೂಪ

ಇಂದು ಜಾತಿಪದ್ಧತಿಯು ಜೀವಂತವಿದೆ; ಆದರೆ ಸಾಮರ್ಥ್ಯ ಉಳಿದಿಲ್ಲ. ಜಾತಿ ಜಾತಿಗಳಲ್ಲಿ ಬಳಿಕೆ ಹೆಚ್ಚುತ್ತಿದೆ. ವಿಜಾತಿಯವರಲ್ಲಿ ವಿವಾಹವಾದರೆ ಜನರು ಅಷ್ಟೊಂದು ಅಚ್ಚರಿಗೊಳ್ಳುವುದಿಲ್ಲ. ಎಲ್ಲ ಜಾತಿಯವರು ಕೂಡಿ ಊಟ ಉಪಚಾರ ಮಾಡಿದರೆ ಬಹಿಷ್ಕಾರದ ಭಯವಿಲ್ಲ. ಹರಿಜನರು ದೇವಾಲಯಗಳಿಗೆ ಹೋಗಿ ದೇವದರ್ಶನ ಪಡೆದರೆ ಕ್ರಾಂತಿಯಾಯಿತೆಂದು ಯಾರೂ ತಿಳಿಯುವುದಿಲ್ಲ. ಪ್ರವಾಸದಲ್ಲಿ, ಸಿನೇಮಾ ಗೃಹಗಳಲ್ಲಿ, ಚಹಾದ ಅಂಗಡಿಗಳಲ್ಲಿ, ಶಾಲೆ–ಕಾಲೇಜುಗಳಲ್ಲಿ ಯಾರೂ ಜಾತಿಯ ಪರವೆ ಮಾಡುವುದಿಲ್ಲ. ಹೀಗೆ ಜಾತಿಯ ನಿರ್ಬಂಧನೆಗಳನ್ನು ಮುರಿಯುವವರಿಗೆ ಹಿಂದಿನ ಕಾಲದ ಭೀತಿ ತಪ್ಪಿದೆ. ಆದರೆ ಜಾತಿಯ ರೂಢಿಗಳನ್ನು ಸಂಪೂರ್ಣವಾಗಿ ತ್ಯಜಿಸಿದ ಜನರನ್ನು ಕಾಣುವುದು ದುರ್ಲಭ. ಒಂದಿಲ್ಲೊಂದು ರೀತಿಯಿಂದ ಜನರು ಇನ್ನೂ ಜಾತಿಗೆ ಅಂಟಿಕೊಂಡಿದ್ದಾರೆ. ಜನಿವಾರ ಧರಿಸಿದವನು, ಲಿಂಗ ಕಟ್ಟಿದವನು, ಕೇಶ ಬಿಡದವನು, ಎಲ್ಲರ ಸಂಗಡ ಬಳಿಕೆ ಮಾಡುವವನು ಸಹ ವಿವಾಹ ಮೊದಲಾದ ವಿಷಯಗಳಲ್ಲಿ ಜಾತಿಯ ನಿಯಮಗಳಂತೆ ನಡೆಯುತ್ತಿದ್ದುದನ್ನು ಕಾಣಬಹುದು. ಜಾತಿಯ ಬಾಹ್ಯ ಆಚರಣೆಗಳನ್ನು ತ್ಯಜಿಸಿದವರೂ, ಆಧುನಿಕ ಶಿಕ್ಷಣ ಹೊಂದಿದವರೂ, ಉದಾರ ಮತಗಳನ್ನು ಕಂಠೋಕ್ತವಾಗಿ ಹೊಗಳುವವರೂ ಸಹ ಹಲವು ಸಲ ಜಾತಿಯ ಪಕ್ಷವನ್ನು

ಕಟ್ಟಿ ವರ್ತಿಸುವದುಂಟು. ಈ ಮಾತು ಚುನಾವಣೆಗಳಲ್ಲಿ, ನೌಕರದಾರರನ್ನು ಆರಿಸುವಲ್ಲಿ, ವಿದ್ಯಾಸಂಸ್ಥೆಗಳಲ್ಲಿ, ವಿವಿಧ ಪಕ್ಷಪಂಗಡಗಳಲ್ಲಿ ನಿಚ್ಚಳವಾಗಿ ಕಾಣಿಸುತ್ತದೆ. ಜಾತಿಯು ಇಂದಿನ ಕಾಲಕ್ಕೆ ಹೊಸ ರೂಪಗಳನ್ನು ಧರಿಸ ಹತ್ತಿದೆ. ಆದುದರಿಂದ ಜಾತಿಯ ಕೆಲ ಹಳೆಯ ನಿರ್ಬಂಧನೆಗಳು ಮಾಯ ವಾಗಹತ್ತಿವೆಯೆಂದು ಆನಂದ ಪಡುವವರು ಅದರ ಹೊಸ ರೂಪಗಳನ್ನು ಗುರುತಿಸುವುದು ಒಳಿತು.

ಹಳ್ಳಿಯ ಜೀವನವು ಜಾತಿಯ ನಿಯಮಗಳನ್ನು ಪಾಲಿಸಲು ಪಟ್ಟಣದ ಜೀವನಕ್ಕಿಂತಲೂ ಹೆಚ್ಚು ಅನುಕೂಲವಾಗಿದೆ. ಹಳ್ಳಿಯ ಶಿಕ್ಷಣ ಮಟ್ಟವು ಪಟ್ಟಣಕ್ಕಿಂತಲೂ ಕಡಮೆಯಾಗಿದೆ, ಈ ಕಾರಣಗಳಿಂದ ಹಳ್ಳಿಗಾಡಿನ ಜನರು ಪಟ್ಟಣಿಗರಿಗಿಂತಲೂ ಹೆಚ್ಚು ಜಾತೀಯತೆಯುಳ್ಳವರಾಗಿದ್ದಾರೆ.

ಹಿಂದುಸ್ತಾನವು ಜಾತ್ಯಾತೀತ ರಾಜ್ಯವೆಂದೂ ಅಸ್ಪೃಶ್ಯತೆಯು ಅಪರಾಧವೆಂದೂ ಸಂವಿಧಾನವು ಸಾರಿದೆ. ಬಹಿಷ್ಕಾರ ಹಾಕುವುದು ಶಾಸನ ಬಾಹಿರವೆಂಬ ನಿರ್ಬಂಧವಿದೆ. ಹರಿಜನರಿಗೆ ದೇವಾಲಯಗಳನ್ನು ಪ್ರವೇಶಿಸಲು, ಸಾರ್ವಜನಿಕರ ಸ್ಥಳಗಳನ್ನು ಉಪಯೋಗಿಸಲು, ಸಮಾನ ಅಧಿಕಾರವಿದೆ ಯೆಂದು ಕಾಯ್ದೆಯು ಹೇಳುತ್ತದೆ. ಈ ಬಗೆಯ ಕಾಯ್ದೆಗಳಿಂದ ಜಾತೀಯತೆಯ ಬಾಹ್ಯ ಆಚರಣೆಯನ್ನು ನಿರ್ಬಂಧಿಸಬಹುದಾದರೂ ಅದರ ಮಾನಸಿಕ ಬೇರುಗಳನ್ನು ಕೀಳುವುದು ಸಾಧ್ಯವಿಲ್ಲ. ಜಾತೀಯತೆಯ ಅನೀತಿಯನ್ನು ಎತ್ತಿ ತೋರಿಸುವ ವೈಜ್ಞಾನಿಕ ಶಿಕ್ಷಣವೇ ಅದರ ಮಾನಸಿಕ ಬೇರುಗಳನ್ನು ಕೀಳಬಲ್ಲದು. ಜಾತಿಯಮೇಲೆ ವ್ಯಕ್ತಿಯ ಬೆಲೆಕಟ್ಟುವುದು ಕೃತ್ರಿಮವೆಂಬ ಭಾವನೆಯು ಹಿಂದೀಯರಲ್ಲಿ ಬಲಿತ ಕಾಲಕ್ಕೆ ಜಾತೀಯತೆಯು ನಷ್ಟವಾಗುವುದು.

ಇದುವರೆಗೆ ವಿವರಿಸಿದ ಸಂಗತಿಗಳು ಹಿಂದುಸ್ತಾನಕ್ಕೆ ಮಾತ್ರ ಸಂಬಂಧಪಟ್ಟವುಗಳಿರುವುದರಿಂದ ಜಾತೀಯತೆಯು ಹಿಂದುಸ್ತಾನದಲ್ಲಿಯಲ್ಲದೆ ಬೇರಾವ ದೇಶದಲ್ಲಿಯೂ ಇಲ್ಲವೆಂದು ಈ ವಿವರಣೆಯು ಸೂಚಿಸಿದಂತೆ ಭಾಸವಾಗುತ್ತದೆ. ಆದರೆ ಹಾಗೇನೂ ಇಲ್ಲ. ಮಧ್ಯಯುಗದ ಯುರೋಪಖಂಡದಲ್ಲಿ ಸರಂಜಾಮಿ ಪದ್ಧತಿಯು ಅಸ್ತಿತ್ವದಲ್ಲಿದ್ದಾಗ ಹಿಂದುಸ್ತಾನದ ಜಾತಿ ಪದ್ಧತಿಯನ್ನು ಹೋಲುವ ಸಾಮಾಜಿಕ ವ್ಯವಸ್ಥೆಯಿತ್ತು. ಇಂದಿಗೂ ಹಲವು

ಹಿಂದುಳಿದ ರಾಷ್ಟ್ರಗಳಲ್ಲಿ ಒಂದಿಲ್ಲೊಂದು ಬಗೆಯ ಜಾತಿಪದ್ಧತಿಯನ್ನು ಕಾಣಬಹುದು. ಆದರೆ ಅವುಗಳನ್ನು ಹಿಂದೀಯರು ಅಭ್ಯಸಿಸುವ ಅಗತ್ಯವಿಲ್ಲ. ಹಿಂದೀಯರು ತಮಗೆ ಸಂಬಂಧಿಸಿದ ಜಾತೀಯತೆಯ ಸಮಸ್ಯೆಯನ್ನು ತಿಳಿದುಕೊಂಡು ಅದರ ಪರಿಹಾರೋಪಾಯಗಳನ್ನು ಕಂಡುಕೊಂಡರೆ ಸಾಕು. ಇದೇ ವ್ಯಾವಹಾರಿಕ ದೃಷ್ಟಿ.

೨೨. ವರ್ಗದ ಸ್ವರೂಪ

ಸಂಪತ್ತು, ವ್ಯವಸಾಯ, ಸಂಸ್ಕೃತಿ, ಶಿಕ್ಷಣ ಇಲ್ಲವೆ ರಾಜಕೀಯ ಸ್ಥಿತಿಗತಿಗಳ ವೈಶಿಷ್ಟ್ಯದಿಂದ ಗುರುತಿಸಬಹುದಾದ ಜನರ ಗುಂಪಿಗೆ ವರ್ಗವೆನ್ನುತ್ತಾರೆ. ಇಂದು ಸಿರಿವಂತರು, ಬಡವರು, ಒಡೆಯರು ಕೂಲಿಕಾರರು, ಜಮೀನದಾರರು, ಒಕ್ಕಲಿಗರು, ವ್ಯವಹಾರಸ್ಥರು, ಗುಮಾಸ್ತರು, ಬುದ್ಧಿಜೀವಿಗಳು, ಶ್ರಮಜೀವಿಗಳು, ಕಲಾವಿದರು, ವಿಜ್ಞಾನಿಗಳು, ರಾಜಕಾರಣಿಗಳು, ಆಡಳಿತೆಗಾರರು, ಸನಾತನಿಗಳು ಸುಧಾರಕರು, ಶಿಕ್ಷಕರು, ವಿದ್ಯಾರ್ಥಿಗಳು, ತರುಣರು, ವೃದ್ಧರು ಎಂದು ಮೊದಲಾದ ಅನಂತ ವರ್ಗಗಳು ಅಸ್ತಿತ್ವದಲ್ಲಿವೆ. ಹೀಗೆ ಸಮಾಜವು ವರ್ಗ ವರ್ಗಗಳಲ್ಲಿ ವಿಂಗಡಿಸಲ್ಪಟ್ಟಿರುವುದು ಕೃತ್ರಿಮವೆಂದೂ, ವರ್ಗರಹಿತ ಸಮಾಜ ನಿರ್ಮಾಣ ಮಾಡುವುದು ಸಾಧ್ಯವಿದೆಯೆಂದೂ, ಕೆಲವರು ವಾದಿಸುತ್ತಾರೆ ಒಂದಿಲ್ಲೊಂದು ಬಗೆಯ ವರ್ಗಗಳು ಸಮಾಜದಲ್ಲಿರಲೇಬೇಕೆಂದು ಇನ್ನೂ ಹಲವರು ವಾದಿಸುತ್ತಾರೆ. ಈ ಎರಡೂ ವಾದಗಳಲ್ಲಿಯೂ ಸತ್ಯಾಂಶವಿದೆ. ವರ್ಗರಹಿತ ಸಮಾಜ ನಿರ್ಮಾಣಮಾಡ ಬಯಸುವವರು ಕೇವಲ ಆರ್ಥಿಕ ಸ್ವರೂಪದ ವರ್ಗಗಳನ್ನಷ್ಟೇ ಅವಗಾಹನೆಗೆ ತೆಗೆದುಕೊಳ್ಳುತ್ತಾರೆ. ಉತ್ಪಾದನೆ, ವ್ಯವಹಾರ ಮತ್ತು ಹಣಕಾಸಿನ ಸಂಸ್ಥೆಗಳು ಲೋಕಸತ್ತಾತ್ಮಕ ತಳಹದಿಯ ಮೇಲೆ ರಚಿತವಾದ ಸಮಾಜದ ಒಡೆತನಕ್ಕೆ ಒಳಪಡಿಸುವಂತೆ ಆಮೂಲಾಗ್ರ ಆರ್ಥಿಕ ಪುನರ್ಘಟನೆ ಯಾದರೆ ರಾಷ್ಟ್ರದಲ್ಲಿ ಸಿರಿವಂತರು, ಬಡವರು, ಉದ್ದಿಮೆಗಾರರು, ಕೂಲಿಕಾರರು ಮೊದಲಾದ ವರ್ಗಗಳು ಮಾಯವಾಗುವವೆಂದು ಅವರು ನಂಬುತ್ತಾರೆ. ಆದರೆ ರಾಷ್ಟ್ರದಲ್ಲಿ ಕೇವಲ ಆರ್ಥಿಕ ವರ್ಗಗಳಷ್ಟೇ ಇರದೆ ಇತರ ಬಗೆಯ ವರ್ಗಗಳೂ ಇರುವವೆಂದು ಒಪ್ಪಲೇಬೇಕು. ಸಿರಿವಂತರು, ಉದ್ದಿಮೆಗಾರರು, ಜಮೀನದಾರರು ಮೊದಲಾದ ಆರ್ಥಿಕ ವರ್ಗಗಳು ಮಾಯವಾದ ಸಮಾಜದಲ್ಲಿಯೂ ಸಹ ವ್ಯವಸ್ಥಾಪಕ ವರ್ಗ, ಯಾಂತ್ರಿಕ ತಜ್ಞರ ವರ್ಗ, ಆಡಳಿತ

ಗಾರರ ವರ್ಗ, ಸಾಮಾಜಿಕ ಕಾರ್ಯಕರ್ತರವರ್ಗ ಮೊದಲಾದ ಹೊಸ ವರ್ಗಗಳು ತಲೆಯೆತ್ತುವ ಸಂಭವವಿದೆ. ಈ ಮಾತಿಗೆ ಇಂದಿನ ರಶಿಯಾ ಮತ್ತು ಇಂಗ್ಲಂಡಗಳ ಅನುಭವವು ಪುಷ್ಟಿಕೊಡುತ್ತಿದೆ.

ವಿವಿಧ ವ್ಯವಸಾಯಗಳಲ್ಲಿ, ವಿವಿಧ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮತ್ತು ವಿವಿಧ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿದ ಜನರು ತಮ್ಮ ತಮ್ಮ ವೃತ್ತಿಗಳಿಗೆ ಅನುಗುಣವಾದ ಗುಂಪಿನಲ್ಲಿ ಸೇರುವುದು ಸಹಜ. ಸಮಾಜವಲ್ಲಿ ಗ್ರಂಥಕರ್ತರರು, ಶಿಕ್ಷಕರು, ಕಾರ್ಮಿಕರು ಮೊದಲಾದ ವರ್ಗಗಳಿರುವುದು ಸಮಾಜ ಹಿತದ ದೃಷ್ಟಿಯಿಂದ ತಪ್ಪೇನೂ ಅಲ್ಲ. ಪ್ರತಿಯೊಬ್ಬರಿಗೂ ಒಂದು ವೃತ್ತಿಯನ್ನು ತ್ಯಜಿಸಿ ಬೇರೊಂದು ವೃತ್ತಿಯನ್ನು ಸೇರುವ ಅವಕಾಶವಿರುವ ವರೆಗೆ ಇಂತಹ ವರ್ಗಗಳಿಂದ ನಾಗರಿಕನಿಗೆ ಹಾನಿಯಾಗುವುದಿಲ್ಲ. ಆದರೆ ವರ್ಗಗಳು ಜನ್ಮದ ಆಧಾರದ ಮೇಲೆ ಇಲ್ಲವೆ ಸಂಪತ್ತಿನ ತಾರತಮ್ಯದ ಮೇಲೆ ಅವಲಂಬಿತವಾದರೆ ಮಾತ್ರ ಅವು ನಾಗರಿಕನ ವ್ಯಕ್ತಿತ್ವಕ್ಕೆ ಚ್ಯುತಿಯನ್ನುಂಟು ಮಾಡುತ್ತವೆ. ಏಕೆಂದರೆ, ಆಗ ಒಂದು ವರ್ಗದವನು ತನ್ನ ಯೋಗ್ಯತೆ ಮತ್ತು ಅಭಿರುಚಿಗೆ ತಕ್ಕಂತಹ ಇನ್ನೊಂದು ವರ್ಗದಲ್ಲಿ ಸೇರುವುದು ದುಸ್ತರವಾಗುತ್ತದೆ.

ಇಂದಿನಯುಗದಲ್ಲಿ ಸಂಪತ್ತಿನ ತಾರತಮ್ಯದ ಮೇಲೆ ವಿರಚಿತವಾದ ಸಿರಿವಂತರ ವರ್ಗ, ಮಧ್ಯಮವರ್ಗ, ಮತ್ತು ಬಡವರ ವರ್ಗಗಳು ನಾಗರಿಕನ ಪ್ರಗತಿಗೆ ಅನಕೂಲವಾಗಿಲ್ಲ. ಸಿರಿವಂತರಾದವರು ಯೋಗ್ಯತೆಯಿಲ್ಲದಿದ್ದರೂ ಸಮಾಜದ ಗಣ್ಯಸ್ಥಾನಗಳನ್ನು ಆಕ್ರಮಿಸಬಲ್ಲರು. ಆದರೆ ಬಡವರು ಎಷ್ಟೇ ಬುದ್ಧಿವಂತರೂ ಸಾಹಸಿಗಳೂ ಪರಿಶ್ರಮಿಗಳೂ ಆಗಿದ್ದರೂ ಅವರಿಗೆ ಸಮಾಜದಲ್ಲಿ ಘನತೆಯ ಸ್ಥಾನಗಳು ದೊರೆಯುವುದು ಅಪರೂಪ. ಇದು ಇಂದಿನ ವರ್ಗ ರಚನೆಯ ದೋಷ. ಮನುಷ್ಯನಿಗಿಂತಲೂ ಹಣಕ್ಕೆ ಹೆಚ್ಚು ಮನ್ನಣೆಕೊಡುವ ಭಾವನೆಯ ಮೇಲೆ ಈ ವರ್ಗಗಳು ರಚಿಸಲ್ಪಟ್ಟಿವೆ. ಆದುದರಿಂದ ಅವು ನಾಗರಿಕನ ಗೌರವ, ಯೋಗ್ಯತೆ, ಸಾಹಸ, ಸದ್ಗುಣಗಳನ್ನು ಅಲಕ್ಷಿಸುತ್ತವೆ. ಈ ಮಾತನ್ನು ಅವುಗಳ ರಚನೆ, ಉದ್ದೇಶ ಮತ್ತು ಚಟುವಟಿಕೆಗಳ ವಿವರಣೆಯಿಂದ ಸ್ಪಷ್ಟಪಡಿಸಬಹುದು.

## ೨೩. ಉಚ್ಚ ವರ್ಗ

ಸಿರಿವಂತರ ವರ್ಗಕ್ಕೆ ಇಂದಿನ ರಾಜ್ಯಗಳಲ್ಲಿ ಅತಿ ಮಹತ್ವದ ಸ್ಥಾನ ವಿದೆ. ಗಿರಣಿ, ಕಾರಖಾನೆ, ಖಣಿ, ರೇಲ್ವೆ, ಹಡಗ, ವಿಮಾನ, ಮೋಟರ, ಬ್ಯಾಂಕು, ಶೇವುಗಳ ಮಾರಾಟ ಕೇಂದ್ರ, ಪರರಾಷ್ಟ್ರ ವ್ಯವಹಾರ, ಕುದುರೆ ಜೂಜು, ಚಲಚಿತ್ರ, ಸುದ್ದಿವಿತರಣ ಮೊದಲಾದವುಗಳ ಒಡೆಯರೆಲ್ಲ ಈ ವರ್ಗದಲ್ಲಿ ಸಮಾವೇಶವಾಗುತ್ತಾರೆ. ದೇಶದ ಮುಖ್ಯ ಆರ್ಥಿಕ ಚಟುವಟಿಕೆ ಗಳೆಲ್ಲ ಅವರ ಅಂಕಿತವಾಗಿರುತ್ತದೆ. ಆಯಾ ಉದ್ದಿಮೆಗಳಲ್ಲಿ ದುಡಿಯುವವ ರಿಗೆ ಕನಿಷ್ಠ ಜೀವನಕ್ಕೆ ಸಾಲುವಷ್ಟು ವೇತನ ಕೊಟ್ಟು, ಉತ್ಪಾದಿಸಲ್ಪಟ್ಟ ವಸ್ತುಗಳನ್ನು ಸಾಧ್ಯವಿದ್ದಷ್ಟು ಹೆಚ್ಚು ಬೆಲೆಗೆ ಮಾರಿ ಲಾಭ ಪಡೆಯುವುದೇ ಅವರ ಉದ್ದೇಶ. ಲಾಭ ದೊರೆಯುವ ವರೆಗೆ ಅವರು ತಮ್ಮ ಆರ್ಥಿಕ ಚಟು ವಟಿಕೆಗಳನ್ನು ವಿಸ್ತರಿಸುತ್ತ ಹೋಗುತ್ತಾರೆ. ಆಗ ಸರಕಾರವು ಜನತೆಯ ಹಿತದ ದೃಷ್ಟಿಯಿಂದ ಅವರಮೇಲೆ ನಿಯಂತ್ರಣ ಹಾಕಲು ಪ್ರಯತ್ನಿಸಿದರೆ ಅವರು ಅದನ್ನು ವಿರೋಧಿಸುತ್ತಾರೆ. ಸರಕಾರವು ತಮ್ಮ ಸ್ವಾತಂತ್ರ್ಯ ಹರಣ ಮಾಡಿ ತಮ್ಮಿಂದಾಗಬಲ್ಲ ಜನತಾ ಕಲ್ಯಾಣಕ್ಕೆ ಅಡ್ಡಿ ತರುತ್ತಿದೆಯೆಂದು ಕೂಗೆಬ್ಬಿಸುತ್ತಾರೆ. ಇದೇ ಜನರು ತಮಗೆ ಲಾಭ ದೊರೆಯದ ಕಾಲವು ಪ್ರಾಪ್ತಿಯಾದಾಗ ಸರಕಾರದ ಸಹಾಯನ್ನು ಯಾಚಿಸುತ್ತಾರೆ. ಆಗ ಅವರು ತಮ್ಮ ಆರ್ಥಿಕ ಚಟುವಟಿಕೆಗಳನ್ನು ತಗ್ಗಿಸುತ್ತಾರೆ. ಕಾರ್ಮಿಕರನ್ನು ಕೆಲಸದಿಂದ ತಳ್ಳುತ್ತಾರೆ. ಜನರು ಕರಗಳ ರೂಪದಿಂದ ಕೊಟ್ಟ ಹಣದಿಂದ ಸರಕಾರವು ಉದ್ದಿಮೆಗಳಿಗೆ ಸಹಾಯಧನ ಸಲ್ಲಿಸಬೇಕೆಂದು ಕೇಳುತ್ತಾರೆ. ರಾಜ್ಯದ ಆಡಳಿತ ವರ್ಗದವರು ಮತ್ತು ರಾಜಕೀಯ ಮುಖಂಡರು ಬಹು ತರವಾಗಿ ಇದೇ ವರ್ಗಕ್ಕೆ ಸಂಬಂಧಪಟ್ಟವರಾಗಿರುತ್ತಾರೆ. ಆದುದರಿಂದ ಸಿರಿವಂತರ ಬೇಕುಬೇಡಗಳಿಗೆ ಸರಕಾರದಲ್ಲಿ ಬೇಗ ಮನ್ನಣೆ ದೊರೆಯುವ ಸಂಭವವಿರುತ್ತದೆ. ಇದರಿಂದ ಈ ವರ್ಗದ ಲಾಭಕ್ಕಾಗಿ ಹಲವು ಸಲ ಜನ ಸಾಮಾನ್ಯರು ಆರ್ಥಿಕ ವಿಪತ್ತಿಗೀಡಾಗುವ ಪ್ರಸಂಗವೊದಗುತ್ತದೆ.

ಸಿರಿವಂತರ ನೀತಿಯು ಮನುಷ್ಯನಿಗಿಂತಲೂ ಹಣಕ್ಕೆ ಹೆಚ್ಚು ಬೆಲೆ ಕೊಡುತ್ತದೆ. ಅವರು ಬಹಳ ಹಣ ಕೊಟ್ಟು ದೊರಕಿಸಬಹುದಾದ ವಸ್ತುವಿಗೆ ಬೆಲೆ ಕೊಡಬಲ್ಲರು; ಆದರೆ ನಿಸರ್ಗವನ್ನು ಸುಂದರವಾಗಿಯೂ

ನೈಜವಾಗಿಯೂ ಚಿತ್ರಿಸಿದ ಕಲಾಕೃತಿಗೆ ಬೆಲೆ ಕೊಡಲರಿಯರು. ಐಶ್ವರ್ಯ ದಲ್ಲಿ ಬೆಳೆದು ಬಂದ ಸಿರಿವಂತರಿಗೆ ಸಾದಾ ಜೀವನದ ಬೆಲೆ ತಿಳಿಯುವುದಿಲ್ಲ. ಮುಖಸ್ತುತಿಯನ್ನು ಕೇಳುತ್ತ ಬೆಳೆದು ಬಂದ ಅವರಿಗೆ ಸತ್ಯದ ನಿಷ್ಠುರತೆಯು ಸೇರುವುದಿಲ್ಲ. ಹುಟ್ಟಿದಂದಿನಿಂದ ಆಟನೋಟಗಳಲ್ಲಿಯೇ ಹೊತ್ತುಗಳೆದ ಅವರಿಗೆ ಪರಿಶ್ರಮದ ಅವಶ್ಯಕತೆ ಅನಿಸುವುದಿಲ್ಲ. ಈ ಬಗೆಯ ಅವರ ಆಲಸ್ಯ ಜೀವನದ ಪ್ರಭಾವವು ಉಳಿದ ಸಮಾಜದಮೇಲೂ ಆಗುತ್ತದೆ. ಅವರ ತೃಪ್ತಿಗಾಗಿ ಅಮಂಗಲ ಮತ್ತು ಅಶ್ಲೀಲ ಚೇಷ್ಟೆಗಳನ್ನು ಒದಗಿಸುವ ಕಾರ್ಯದಲ್ಲಿ ಅನಂತ ಹೀನ ಕಲಾವಿದರು ನಿರತರಾಗುತ್ತಾರೆ. ಸಿರಿವವಂತರೇ ಸಮಾಜದ ಗಣ್ಯ ಸ್ಥಾನಗಳನ್ನಾಕ್ರಮಿಸಿಕೊಂಡಿರುವುದರಿಂದ ಅವರ ಅಭಿರುಚಿ, ನೀತಿ, ಮತ್ತು ಆಚರಣೆಗಳನ್ನು ಜನರು ಅನುಕರಿಸುವುದು ಸ್ವಾಭಾವಿಕ. ಇಂದಿನ ಚಲಚ್ಚಿತ್ರದ ಪ್ರಪಂಚದ ಅನೈಜ ವಾತಾವರಣ, ಪತ್ರಿಕಾ ಪ್ರಪಂಚದ ಅಶ್ಲೀಲ ಸೃಷ್ಟಿ, ಕುದುರೆಯ ಜೂಜಿನ ಜನಪ್ರಿಯತೆ, ಫ್ಯಾಶನ್ನಿನ ಒಲವು, ಉತ್ಸವಗಳ ವೈಭವ, ಹಾಟೆಲ್ಲುಗಳ ಠೀವಿ, ವೇಶ್ಯಾ ವೃತ್ತಿಯ ಇರುವು ಮೊದಲಾದವು ಈ ಸಂಗತಿಯನ್ನೇ ಪ್ರಕಟಪಡಿಸುತ್ತವೆ. ಹಗಲಿರುಳು ಪರಿಶ್ರಮಿಸಿ ಜೀವನಾಧಾರಕ್ಕೆ ಬೇಕಾಗುವಷ್ಟು ಪ್ರತಿಫಲ ಪಡೆ ಯದ ಬಹುಜನರು ಇವರ ಬಗ್ಗೆ ಅಸೂಯೆ ಪಡದೇ ಇರಲಾರರು. ಇದರಿಂದ ಸಮಾಜದಲ್ಲಿ ಘರ್ಷಣೆ ಮತ್ತು ಅನೀತಿಗಳೆರಡೂ ಉಂಟಾಗುವುದು ಸಹಜ.

ಸಿರಿವಂತರ ಬಗ್ಗೆ ಇಲ್ಲಿ ಕೊಟ್ಟ ವಿವರಣೆಯು ಹಲ ಕೆಲವು ವ್ಯಕ್ತಿಗಳಿಗೆ ಅನ್ವಯಿಸಲಿಕ್ಕಿಲ್ಲ. ಅವರಲ್ಲಿ ಕೆಲವರು ಸಂಪತ್ತನ್ನು ತಮ್ಮ ಪೂರ್ವಜರಿಂದ ಪಡೆಯದೆ ಸ್ವತಃ ಸಂಪಾದಿಸಿರಬಹುದು; ಅವರು ಆಲಸಿಗಳಾಗಿರದೆ ಅತ್ಯಂತ ಪರಿಶ್ರಮಿಗಳಾಗಿರಬಹುದು; ಆಡಂಬರವಿಲ್ಲದ ಸರಳ ಜೀವಿಗಳಾಗಿರಬಹುದು; ಲಾಭದಾಸೆಯಿಂದ ಇತರರನ್ನು ಶೋಷಿಸದಿರಬಹುದು. ಆದರೆ ಇಂಥವರು ಸಾಮಾನ್ಯ ನಿಯಮಕ್ಕೆ ಅಪವಾದದಂತೆ ಇರುತ್ತಾರೆ.

ಸಿರಿವಂತರು ತಮ್ಮ ಸಂಘಟನೆಯ ಚಾತುರ್ಯ ಮತ್ತು ಔದ್ಯೋಗಿಕ ಸಾಹಸಗಳಿಂದ ಉತ್ಪಾದನೆಯನ್ನು ಹೆಚ್ಚಿಸಿ ಜನತೆಯ ಕಲ್ಯಾಣ ಮಾಡುತ್ತಾ ರೆಂದು ಹಲವರು ತಿಳಿದಿದ್ದಾರೆ. ಆದರೆ ವಸ್ತುಸ್ಥಿತಿಯು ಹೀಗಿಲ್ಲ. ಕೆಲವು ಸಿರಿವಂತರು ಸಂಘಟನಾ ಚತುರರೂ ಸಾಹಸಿಗರೂ ಆಗಿರುವದೇನೋ ನಿಜ.

ಆದರೆ ಅವರಲ್ಲಿ ಬಹುಜನರು ಈ ಗುಣಗಳಿಗೆ ಅಪರಿಚಿತರು. ನಿಜವಾಗಿ ನೋಡಿದರೆ ಅವರ ಸೇವೆಯಲ್ಲಿರುವ ತಜ್ಞರು ಈ ಕಾರ್ಯ ನಿರ್ವಹಿಸುತ್ತಾರೆ. ಉದ್ದಿಮೆಗಳನ್ನು ಸಂಘಟಿಸಿ ಉತ್ಪಾದನೆ ಹೆಚ್ಚಿಸುವ ಶ್ರೇಯಸ್ಸು ಚತುರ ತಜ್ಞರ ವರ್ಗಕ್ಕೆ ಸಲ್ಲುತ್ತದೆಯೇ ಹೊರತು ಸಿರಿವಂತರ ವರ್ಗಕ್ಕಲ್ಲ. ಎಷ್ಟೋ ಸಲ ಧನಿಕರ ದುರಾಸೆ ಮತ್ತು ದುರ್ವ್ಯಸನಗಳು ತಜ್ಞರ ಯೋಜನೆಗಳಿಗೆ ಆತಂಕವುಂಟುಮಾಡಿ ಔದ್ಯೋಗಿಕ ಅವನತಿಗೆ ಕಾರಣವಾಗುವುದುಂಟು. ಈ ಮಾತಿಗೆ ಹಿಂದುಸ್ತಾನದ ಚಲಚಿತ್ರ ಉದ್ಯಮದ ಸ್ಥಿತಿಗತಿಯೇ ತಕ್ಕ ನಿದರ್ಶನವಾಗಿದೆ.

ಸಿರಿವಂತರು ತಮ್ಮ ಲಾಭದಾಸೆಗಾಗಿ ಕೆಲವು ಸಲ ಜನರ ನಾಗರಿಕ ಹಕ್ಕುಗಳನ್ನು ಕಸಿದುಕೊಳ್ಳಲು ಸರಕಾರಕ್ಕೆ ನೆರವಾದ ನಿದರ್ಶನಗಳಿವೆ. ೧೯೩೩ ರಲ್ಲಿ ಜರ್ಮನಿಯ ಉದ್ದಿಮೆಗಾರರು ಹಿಟ್ಲರನಿಗೆ ಬೆಂಬಲಕೊಟ್ಟು ಜರ್ಮನ್ನರ ನಾಗರಿಕ ಹಕ್ಕುಗಳನ್ನು ಕಸಿದುಕೊಳ್ಳಲು ಸಹಾಯಕವಾದರು. ಕೆಲವು ಸಲ ಅವರು ದೇಶದ್ರೋಹಿಗಳಂತೆ ವರ್ತಿಸಿದ ಉದಾರಣೆಗಳಿವೆ. ೧೯೪೦ ರಲ್ಲಿ ಫ್ರಾನ್ಸದ ಉದ್ದಿಮೆಗಾರರು ಫ್ರೆಂಚ ಜನತೆಯ ಹಿತಾಹಿತಗಳನ್ನು ಕಡೆಗಣಿಸಿ ಜರ್ಮನ್ನರನ್ನು ಬರಮಾಡಿಕೊಂಡರು. ಎಷ್ಟೋ ಸಲ ಅವರು ಅನ್ಯರಾಷ್ಟ್ರಗಳ ಜನತೆಯ ಸ್ವಾತಂತ್ರ್ಯ ಅಪಹರಣಮಾಡಲು ಪ್ರಯತ್ನಿಸಿದ್ದಾರೆ. ಜಪಾನದ ಉದ್ದಿಮೆಗಾರರು ಕೋರಿಯಾ, ಮಂಚೂರಿಯಾ, ಚೀನಗಳ ಸ್ವಾತಂತ್ರ್ಯ ಅಪಹರಿಸಲು ತಮ್ಮ ಸರಕಾರಕ್ಕೆ ಬೆಂಬಲವಿತ್ತರು. ಹೀಗೆ ಈ ವರ್ಗವು ಹಲವು ಸಲ ನಾಗರಿಕ ಹಕ್ಕುಗಳಿಗೆ ಧಕ್ಕೆ ತಂದಿದೆ.

ಸಿರಿವಂತರ ವರ್ಗದ ಈ ದೋಷಗಳಿಗೆ ಮೂಲ ಆ ವರ್ಗದ ರಚನೆ ಮತ್ತು ಉದ್ದೇಶಗಳು. ಧನಿಕರು ಮಾತ್ರ ಆ ವರ್ಗಕ್ಕೆ ಸೇರಬಲ್ಲರು. ಸಾಮಾನ್ಯವಾಗಿ ಧನಿಕರ ಮಕ್ಕಳು ಧನಿಕರಾಗುತ್ತ ಹೋಗುವರು. ಧನಿಕರು ಆಕಸ್ಮಿಕವಾಗಿ ಭಿಕ್ಷುಕರಾಗುವ ಸಂಭವವಿದ್ದರೂ ಇದು ಸಾಮಾನ್ಯ ನಿಯಮವಲ್ಲ. ಬಡವರು ಬಡವರಾಗಿ ಉಳಿಯುವುದು ಸಿರಿವಂತರು ಸಿರಿವಂತರಾಗಿ ಉಳಿಯುವುದು ಸಾಮಾನ್ಯ ನಿಯಮ. ಬಡವನು ಸಿರಿವಂತನಾಗಲು ಅತ್ಯಂತ ಅನಕೂಲ ಪರಿಸ್ಥಿತಿಯೂ ಅಸಾಧಾರಣ ವ್ಯವಹಾರ ಚಾತುರ್ಯವೂ ಸಿರಿವಂತರ ಸಹಾಯವೂ ಅವಶ್ಯ. ಎಷ್ಟೋ ಸಲ

ಕಾಯ್ದೆಯ ಹಿಡಿತದಲ್ಲಿ ಸಿಗದೆ ಕೆಲವರು ವಂಚನೆ, ಪುಂಡಾಟಿಕೆ, ಲಂಚಬ
ಡಕತನ ಮೊದಲಾದ ವಿಧಾನಗಳಿಂದ ಧನಿಕರಾಗಬಹುದು. ಸಿರಿವಂತರ
ನೀತಿಯಲ್ಲಿ ಹಣಕ್ಕೆ ಪ್ರಾಮುಖ್ಯತೆಯುಂಟು; ಆದರೆ ಹಣ ಸಂಪಾದಿಸುವ
ರೀತಿಗೆ ಅವರು ಅಷ್ಟು ಮಹತ್ವಕೊಡುವುದಿಲ್ಲ. ಹೀಗೆ ಅನೀತಪರ ರೀತಿ
ಯಿಂದ ಸಿರಿವಂತರಾಗಿ ಸಮಾಜದಲ್ಲಿ ಮಹತ್ವದ ಸ್ಥಾನ ಪಡೆದವರು ನೀತಿ
ಪರ ಸಮಾಜ ರಚನೆಯ ಪ್ರವರ್ತಕರಾಗಲಾರರು. ಅವರು ಜನರ ಶೋಷಣೆ
ಮಾಡುವ ವಿಧಾನದಲ್ಲಿ ಹಿಂದಿನ ಕಾಲದ ಸರದಾರರನ್ನು ಹಿಂದೆಹಾಕಿದ್ದಾರೆ.
ಆದರೆ ಸರದಾರರ ವರ್ಗದ ಸದ್ಗುಣಗಳೊಂದೂ ಅವರಲ್ಲಿ ಕಂಡುಬರುವು
ದಿಲ್ಲ. ಆದುದರಿಂದ ಸಿರಿವಂತರ ವರ್ಗದ ಬಗ್ಗೆ ಜಗತ್ತಿನಲ್ಲಿ ಇಂದು
ಒಂದು ಬಲವಾದ ವಿರೋಧಭಾವನೆ ಹಬ್ಬಿಕೊಂಡಿದೆ.

ಸಮಾಜವಾದದ ಚಳವಳಿಯು ಸಿರಿವಂತರ ಬಗ್ಗೆ ಜನರಲ್ಲಿರುವ
ವಿರೋಧ ಭಾವನೆಯನ್ನೇ ಪ್ರಕಟಪಡಿಸುತ್ತದೆ. ರಶಿಯಾದ ೧೯೧೭ ನೆಯ
ಕ್ರಾಂತಿಯು ಸಿರಿವಂತರ ಉಚ್ಚಾಟನೆ ಮಾಡಿತು. ಇಂಗ್ಲಂಡದಲ್ಲಿ ೧೯೪೫
ನೆಯ ಮಹಾಚುನಾವಣೆಯ ನಂತರ ಕೂಲಿಕಾರ ಪಕ್ಷವು ಸಿರಿವಂತರಿಂದ
ಬ್ಯಾಂಕು, ಕಲ್ಲಿದ್ದಲಿ, ಕಬ್ಬಿಣ, ಉಕ್ಕು, ವಿದ್ಯುತ್‌ಶಕ್ತಿ, ವಾಹನ ಸೌಕರ್ಯ,
ಮೊದಲಾದ ಉದ್ದಿಮೆಗಳ ಮೇಲಿನ ಒಡೆತನವನ್ನು ಕಿತ್ತುಕೊಂಡಿದೆ. ಆದರೆ
ಇಷ್ಟರಿಂದ ರಸಿಯಾದಲ್ಲಾಗಲಿ ಇಲ್ಲವೆ ಇಂಗ್ಲಂಡದಲ್ಲಾಗಲಿ ಸಿರಿವಂತರು
ಇಲ್ಲವೇ ಇಲ್ಲವೆಂಬದಲ್ಲ. ಇನ್ನು ಮುಂದೆ ಆ ದೇಶಗಳಲ್ಲಿ ಕೇವಲ ಬುದ್ಧಿ
ವಂತರು, ಯೋಗ್ಯತಾಸಂಪನ್ನರು, ಪರಿಶ್ರಮಿಸುವವರು, ಸಾಹಸಿಗರು
ಮಾತ್ರ ಸಿರಿವಂತರಾಗಬಲ್ಲರು. ಅವರು ತಮ್ಮ ಸಂಪತ್ತನ್ನು ತಮ್ಮ ಜೀವ
ನದಲ್ಲಿಯೇ ಉಪಭೋಗಿಸಬಲ್ಲರು. ಅವರು ಬಿಟ್ಟುಹೋದ ಸಂಪತ್ತಿನ ಬಹು
ಭಾಗವು ಸರಕಾರಕ್ಕೆ ಹೋಗುತ್ತದೆ. ಇದರಿಂದ ವಂಶಪರಂಪರೆಯಿಂದ
ಸಿರಿವಂತರಾಗುವುದು ನಿಲ್ಲಬಹುದು. ಪ್ರತಿಯೊಂದು ದೇಶವೂ ತನ್ನ ಅಸಾ
ಧಾರಣ ಮೇಧಾವಿಗಳನ್ನೂ, ಕಲಾವಿದರನ್ನೂ, ವಿಜ್ಞಾನಿಗಳನ್ನೂ, ಯಂತ
ಜ್ಞರನ್ನೂ, ಸಂಶೋಧಕರನ್ನೂ, ಶಿಕ್ಷಕರನ್ನೂ, ಆಡಳಿತಗಾರರನ್ನೂ ಒಂದಿ
ಲ್ಲೊಂದು ರೀತಿಯಿಂದ ಪ್ರತಿಫಲಕೊಟ್ಟು ಗೌರವಿಸಲೇಬೇಕು. ಇಂತಹರಿಗೆ
ಇಹಲೋಕದ ಜೀವನದಲ್ಲಿ ಇತರರಿಗಿಂತಲೂ ಹೆಚ್ಚಿನ ಸೌಕರ್ಯಗಳು
ಒದಗಿಸುವುದರಿಂದ ದೇಶವು ತನ್ನ ಉನ್ನತಿಯನ್ನೇ ಸಾಧಿಸಿದಂತಾಗುವುದು.

## ೨೪. ಕನಿಷ್ಠ ವರ್ಗ

ಬಡವರು ಇಂದು ಸಮಾಜದ ಕನಿಷ್ಠ ಸ್ಥಾನದಲ್ಲಿದ್ದಾರೆ. ಸಮಾಜ ದಲ್ಲಿ ಇವರು ಬಹು ಸಂಖ್ಯಾತರು. ಈ ವರ್ಗದಲ್ಲಿ ಶಿಕ್ಷಕರು, ಗ ಮಾಸ್ತರು, ಕೂಲಿಕಾರರು, ಒಕ್ಕಲಿಗರು, ಕೈಗಾರಿಕೆಯ ಕೆಲಸಗಾರರೂ, ಸಾರಿಗೆಯ ಕೆಲಸಗಾರರೂ, ಕಾರಕೂನರೂ, ಪೋಲೀಸರೂ ಮೊದಲಾದವರು ಸಮಾ ವೇಶವಾಗಿದ್ದಾರೆ. ಹಗಲಿರುಳು ಪರಿಶ್ರಮಿಸುವುದು ಇವರ ಪಾಡು. ಆದರೆ ಪರಿಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುವದು ಅಪರೂಪ. ಈ ವರ್ಗದವ ರಿಗೆ ಯೋಗ್ಯ ಶಿಕ್ಷಣ. ಔಷಧೋಪಚಾರ, ಮನರಂಜನೆ, ವಿಶ್ರಾಂತಿ ಮೊದ ಲಾದವು ದುರ್ಲಭ. ಅನ್ನ ಅರಿವೆಯ ಚಿಂತೆಯಲ್ಲಿ ಮುಳುಗಿದ ಈ ಜನರು ಉಚ್ಚ ಸಾಂಸ್ಕೃತಿಕ ವಿಚಾರಗಳಿಗೆ ಕಿವಿಗೊಡರು. ಆದುದರಿಂದ ಇವರಲ್ಲಿ ಒಳ್ಳೆಯ ಭಾವನೆಗಳಿಗಿಂತಲೂ ಹೆಚ್ಚಾಗಿ, ಕೆಟ್ಟ ಭಾವನೆಗಳೇ ಬೆಳೆಯುವ ಸಂಭವವಿದೆ. ಇವರಲ್ಲಿ ನಾಗರಿಕ ಹಕ್ಕುಗಳನ್ನು ಕಾಪಾಡಿಕೊಳ್ಳುವ ತೀವ್ರ ಆಕಾಂಕ್ಷೆ ಎಷ್ಟೋ ಸಲ ಕಂಡು ಬರುವುದೇ ಇಲ್ಲ. ಒಮ್ಮೊಮ್ಮೆ ಇವರು ಆಸೆ ತೋರಿಸುವ ರಾಜಕೀಯ ವಂಚಕರ ಬೆನ್ನುಹತ್ತುವುದುಂಟು. ಹೀಗೆ ಜರ್ಮನ್ನರು ಹಿಟ್ಲರನ ಬೆನ್ನುಹತ್ತಿ ತಮ್ಮ ನಾಗರಿಕ ಹಕ್ಕುಗಳನ್ನು ಕಳೆ ದುಕೊಂಡರಲ್ಲದೆ ಇತರರ ಸ್ವಾತಂತ್ರ್ಯ ಹರಣಮಾಡಲು ಉದ್ಯುಕ್ತರಾದರು. ಆದುದರಿಂದ ದೇಶದ ಕನಿಷ್ಟವರ್ಗದವರೂ ಸಹ ಉಪಜೀವನದ ಬಗ್ಗೆ ನಿರಾ ಸೆಯುಳ್ಳವರಾಗದಂತೆ ನೋಡಿಕೊಳ್ಳುವುದು ಪ್ರಗತಿಪರ ರಾಜ್ಯದ ಆದ್ಯ ಕರ್ತವ್ಯ. ಸ್ವಾತಂತ್ರ್ಯದ ಅಭಿಲಾಸೆಯುಳ್ಳ ತೃಪ್ತ ವರ್ಗವು ಸಮಾಜದ ತಳಹದಿಯಾಗಿರುವುದು ನಾಗರಿಕ ಸ್ವಾತಂತ್ರ್ಯ ದೃಷ್ಟಿಯಿಂದ ಹಿತಕರ.

ಬಡವರಲ್ಲಿ ಕೂಲಿಕಾರರು ಈ ಕಾಲದಲ್ಲಿ ಪ್ರಾಮುಖ್ಯತೆಯನ್ನು ಪಡೆ ದಿದ್ದಾರೆ. ಇವರು ಗಿರಣಿ, ಕಾರಖಾನೆ, ಖಣಿ, ರೇಲ್ವೆ, ಹಡಗು, ಮೋಟರ ಸಾರಿಗೆ ಮೊದಲಾದವುಗಳಲ್ಲಿ ದುಡಿಯುತ್ತಿರುತ್ತಾರೆ. ಇವರು ಪ್ರಾಮುಖ್ಯತೆ ಪಡೆಯಲು ಕಾರಣವಿದೆ. ಕೂಲಿಕಾರರು ಒಂದೆಡೆ ಸೇರಿ ಪರಸ್ಪರ ಅವಲಂಬಿ ತರಾಗಿ ಕಾರ್ಯ ಮಾಡಬೇಕಾಗುತ್ತದೆ. ನಿಯಮಿತ ವೇಳೆಗೆ ಕೆಲಸಕ್ಕೆ ಬರ ಬೇಕಾಗುತ್ತದೆ. ನಿಯಮಿತ ವೇಳೆಗೆ ಕೆಲಸದಿಂದ ಮರುಳಬೇಕಾಗುತ್ತದೆ. ಅವರ ಉಪಜೀವನವು ಅವರು ದುಡಿಯುತ್ತಿರುವ ಉದ್ದಿಮೆಯ ಊರ್ಜಿ

ತಾವಸ್ಥೆಯ ಮೇಲೆ ಅವಲಂಬಿಸಿರುತ್ತದೆ. ಆದುದರಿಂದ ಅವರಲ್ಲಿ ಐಕ್ಯತೆ, ಪರಸ್ಪರ ಸಹಕಾರ, ಮತ್ತು ಶಿಸ್ತು ಬೆಳೆಯಲು ಆಸ್ಪದವಾಗುತ್ತದೆ. ಇದಲ್ಲದೆ ಅವರಿಗೆ ತಮ್ಮ ದುಡಿಮೆಯ ಫಲವು ತಮಗೆ ದೊರೆಯದೆ ಸಿರಿವಂತರ ಬೊಕ್ಕಸಕ್ಕೆ ಹೋದಂತೆ ಭಾಸವಾಗುತ್ತದೆ. ಸಿರಿವಂತರ ಕೈಗೆ ಬೀಳುವಂತೆ ಕಾಣಿಸುವ ಸಂಪತ್ತು ನ್ಯಾಯವಾಗಿ ತಮಗೆ ದೊರೆಯಬೇಕೆಂಬ ಉದ್ದೇಶದಿಂದ ಕೂಲಿಕಾರರು ಸಂಘಟಿತರಾಗಲು ಪ್ರಚೋದನೆ ದೊರೆಯುತ್ತದೆ. ಹೀಗೆ ಕೂಲಿಕಾರ ಸಂಘಗಳು ಹುಟ್ಟಿಕೊಂಡಿವೆ. ಒಕ್ಕಲಿಗರ ನಾಡಾದ ಹಿಂದುಸ್ತಾನದಲ್ಲಿ ಇಂತಹ ಸಂಘಗಳು ಕಡಿಮೆ. ಆದರೆ ಔದ್ಯೋಗಿಕ ಪ್ರಗತಿಯನ್ನು ಸಾಧಿಸಿದ ಎಲ್ಲ ದೇಶಗಳಲ್ಲಿಯೂ ಕಾರ್ಮಿಕರ ಸಂಘಗಳು ಸಮಾಜದಲ್ಲಿ ಗಣ್ಯಸ್ಥಾನಪಡೆದಿವೆ. ಇಂಗ್ಲಂಡದಲ್ಲಿ ೧೯೪೫–೫೧ ರ ವರೆಗೆ ಕೂಲಿಕಾರ ಪಕ್ಷವು ರಾಜ್ಯ ನಡೆಸುತ್ತಿತ್ತು. ರಶಿಯಾದ ರಾಜ್ಯವು ಕೂಲಿಕಾರರ ರಾಜ್ಯವೆಂದು ಪ್ರಸಿದ್ಧಪಡೆದಿದೆ. ಕೂಲಿಕಾರ ಸಂಘಗಳು ನಿರುದ್ಯೋಗ, ಅನಾರೋಗ್ಯ, ದುಡಿತದ ಅವಧಿ, ದುರ್ಘಟನೆಯಿಂದ ಒದಗುವ ಸಾವು ನೋವುಗಳಿಗೆ ಪರಿಹಾರ ಇಳಿವಯಸ್ಸಿನ ಆರ್ಥಿಕ ಸುರಕ್ಷಿತತೆ, ಮಕ್ಕಳ ಶಿಕ್ಷಣ, ಕನಿಷ್ಠ ಕೂಲಿಯ ದರ ಮೊದಲಾದವುಗಳ ಬಗ್ಗೆ ಉದ್ದಿಮೆದಾರರ ಸಂಗಡ ಹೋರಾಡುತ್ತವೆ. ಸಂಪುಹೂಡಿ ಕೆಲವು ಸಲ ಉತ್ಪಾದನೆಯನ್ನೇ ನಿಲ್ಲಿಸಿಬಿಡುತ್ತವೆ. ಇದು ಆತ್ಮಘಾತಕವೂ ಅವ್ಯವಹಾರ್ಯವೂ ಎಂದು ಇದೀಗ ಕಂಡುಬಂದಿದೆ. ಏಕೆಂದರೆ ಯಾವ ಸಮಾಜವೂ ತನ್ನ ಜೀವನಾಧಾರದ ಉತ್ಪತ್ತಿ ಕ್ರಮದಲ್ಲಿ ಅರಾಜಕತೆಯುಂಟಾಗುವುದನ್ನು ಸಹಿಸದು. ರಾಜ್ಯವು ಉತ್ಪತ್ತಿ ನಿಲ್ಲದಂತೆ ನೋಡಬೇಕಾಗುತ್ತದೆ. ಅಂದಮೇಲೆ ಅಂತಿಮ ಪ್ರಸಂಗದಲ್ಲಿ ಸಂಪುಹೂಡಿದ ಕೂಲಿಕಾರರು ಇಡೀ ರಾಜ್ಯದ ವಿರುದ್ಧ ನಿಲ್ಲಬೇಕಾಗುತ್ತದೆ. ಇದು ಅವ್ಯವಹಾರ್ಯ ಮತ್ತು ಅನವಶ್ಯ. ಇದಕ್ಕಿಂತಲೂ ಕೂಲಿಕಾರರು ಸಮಾಜದ ಇತರ ವರ್ಗಗಳ ವಿಶ್ವಾಸಕ್ಕೆ ಪಾತ್ರರಾಗಿ ಶಾಂತಿಯುತವಾಗಿ ಚುನಾವಣೆಗಳ ಮುಖಾಂತರ ಗಣ್ಯ ರಾಜಕೀಯ ಸ್ಥಾನಪಡೆದು ತಮ್ಮ ಉದ್ದೇಶ ಸಾಧಿಸುವುದು ಹೆಚ್ಚು ಒಳ್ಳೆಯದೆಂದು ನಿನ್ನೆ ಮೊನ್ನೆಯ ಇಂಗ್ಲಂಡದ ಇತಿಹಾಸದಿಂದ ಮನವರಿಕೆ ಮಾಡಿಕೊಳ್ಳಬಹುದು.

ಈಗೀಗ ಕೂಲಿಕಾರರ ಮತ್ತು ಉದ್ದಿಮೆದಾರರ ನಡುವಿನ ಹಲವು ತಂಟೆಗಳನ್ನು ಬಗೆಹರಿಸಲು ಸರಕಾರವು ಪಂಚಾಯತಿಗಳನ್ನು ನಿಯಮಿಸಿದೆ.

ಉದ್ದಿಮೆದಾರರು ತಮ್ಮ ಕಾರಖಾನೆಯ ಬಾಗಿಲುಗಳನ್ನು ಮುಚ್ಚಿ ಕೂಲಿ ಕಾರರನ್ನು ಕೆಲಸಗೇಡಿಗಳನ್ನಾಗಿ ಮಾಡಿ ಉತ್ಪಾದನೆ ನಿಲ್ಲಿಸುವುದು ಸಹ ಸಂಪಿನಷ್ಟೇ ಅನರ್ಥಕಾರಿ. ಆದುದರಿಂದ ಸರಕಾರವು ಅದನ್ನು ಸಹ ನಿರ್ಬಂಧಿಸಿ ಪಂಚಾಯತಿಗೆ ಒಳಪಡಿಸಿದೆ. ಹೀಗೆ ಸರಕಾರದ ಮಧ್ಯಸ್ಥಿಕೆಯ ಕೆಳಗೆ ಉದ್ದಿಮೆದಾರರು ಮತ್ತು ಕೂಲಿಕಾರರು ತಮ್ಮ ತಂಟೆಗಳನ್ನು ಬಗೆ ಹರಿಸಿಕೊಳ್ಳುವುದು ಇಂದಿನ ಔದ್ಯೋಗಿಕ ಯುಗದ ಮಹತ್ವದ ಗುರುತಾಗಿದೆ. ಆದರೆ ಪಂಚಾಯತಿಯ ಉಪಯುಕ್ತತೆಯು ಸರಕಾರದ ನಿಷ್ಪಕ್ಷಪಾತತನದ ಮೇಲೆ ಅವಲಂಬಿಸಿದೆ.

ಕೂಲಿಕಾರ ಸಂಘಗಳೂ ಉದ್ದಿಮೆದಾರರ ಸಂಘಗಳೂ ಇಂದು ರಾಜ ಕೀಯ ರಂಗದಲ್ಲಿ ತಮ್ಮ ಪ್ರಭಾವ ಬೀರುತ್ತಿರುತ್ತವೆ. ಆಯಾ ದೇಶಗಳ ಶಾಸನ ಸಭೆಗಳಲ್ಲಿ ಇವೆರಡು ಪಕ್ಷಗಳ ಪ್ರತಿನಿಧಿಗಳೂ ಪರಸ್ಪರ ವಿರೋಧ ವಾಗಿ ಕಾರ್ಯ ಮಾಡುತ್ತಿರುವುದು ಕಂಡುಬಂದಿದೆ. ಔದ್ಯೋಗೀಕರಣ ಹೊಂದಿದ ದೇಶಗಳಲ್ಲಿ ಕೂಲಿಕಾರರು ಬಹುಸಂಖ್ಯಾತರಿರುತ್ತಾರೆ; ಉದ್ದಿಮೆ ದಾರರು ಅಲ್ಪಸಂಖ್ಯಾತರಿರುತ್ತಾರೆ. ಆದರೂ ಹಲವು ರಾಜ್ಯಗಳಲ್ಲಿ ಉದ್ದಿಮೆ ದಾರರ ರಾಜಕೀಯ ಸ್ಥಾನಮಾನ ಕೂಲಿಕಾರರಿಗಿಂತಲೂ ಹೆಚ್ಚು ಭದ್ರವಾ ಗಿದೆ. ಇದಕ್ಕೆ ಮಧ್ಯಮ ವರ್ಗದವರ ಚಟುವಟಿಕೆಗಳೇ ಕಾರಣ.

### ೨೫. ಮಧ್ಯಮ ವರ್ಗ

ಮಧ್ಯಮ ವರ್ಗದಲ್ಲಿ ಆಡಳಿತೆಗಾರರು, ಉಚ್ಚ ಶಿಕ್ಷಣ ಸಂಸ್ಥೆಗಳ ಶಿಕ್ಷಕರು, ಸಣ್ಣಪುಟ್ಟ ವ್ಯವಹಾರಸ್ಥರು, ಯಂತ್ರಜ್ಞರು, ವಕೀಲರು, ಡಾಕ್ಟ ರರು, ಹಾಟೆಲ್ಲುಗಳ ಒಡೆಯರು ಮೊದಲಾದ ಅಸಂಖ್ಯ ಬಗೆಯ ಜನರು ಸಮಾವೇಶವಾಗುತ್ತಾರೆ. ಈ ವರ್ಗದವರು ತಮ್ಮ ಜೀವನದಲ್ಲಿ ಆರ್ಥಿಕ ಭದ್ರತೆಯ ಆಸೆಯಿರುವ ವರೆಗೆ ಸಿರಿವಂತರ ಪಕ್ಷಪಾತಿಗಳಾಗಿರುವುದುಂಟು. ಆಗ ಅವರು ಸಾಮಾಜಿಕ ಭದ್ರತೆಯ ಪುರಸ್ಕರ್ತರಾಗುತ್ತಾರೆ. ಈ ವರ್ಗದ ದವರ ಪ್ರಭಾವವು ಬಡವರ ಮೇಲೆ ಅತ್ಯಂತ ತೀಕ್ಷ್ಣವಾಗಿರುತ್ತದೆ. ಬಹುತರ ವಾಗಿ ಬಡವರು ಮಧ್ಯಮ ವರ್ಗದವರ ಮಾರ್ಗದರ್ಶನವನ್ನೇ ಅನುಸರಿಸು ತ್ತಾರೆ. ಆದುದರಿಂದ ಮಧ್ಯಮವರ್ಗದವರು ಸಿರಿವಂತರ ಪಕ್ಷಪಾತಿಗಳಾಗಿ ರುವ ವರೆಗೆ ಸಿರಿವಂತರ ಸ್ಥಾನಕ್ಕೆ ಚ್ಯುತಿಯುಂಟಾಗುವುದಿಲ್ಲ. ಆದರೆ ಒಮ್ಮೆ

ಈ ವರ್ಗದವರು ಸಧ್ಯದ ಸಾಮಾಜಿಕ ಸ್ಥಿತಿಯಲ್ಲಿ ತಮ್ಮ ಉಪಜೀವನದ ಆಸೆಯನ್ನು ಕಳೆದುಕೊಂಡರೆ ಅವರು ಸಮಾಜವನ್ನು ಪುನರ್ಘಟಿಸಲು ಇಚ್ಛಿಸಬಹುದು. ಸಮಾಜದ ಬುದ್ಧಿವಂತರು ಬಹುತರವಾಗಿ ಈ ವರ್ಗ ದಲ್ಲಿಯೇ ಇರುವುದರಿಂದ ಮೊಟ್ಟಮೊದಲು ಅವರಲ್ಲಿ ವಿಚಾರಕ್ರಾಂತಿಯಾಗು ವುದು ಸಹಜ. ಈ ವಿಚಾರ ಕ್ರಾಂತಿಯನ್ನು ಬಡವರಲ್ಲಿಯೂ ಅವರು ಬಿತ್ತ ರಿಸಬಲ್ಲರು. ಆಗ ಸಾಮಾಜಿಕ ಇಲ್ಲವೆ ರಾಜಕೀಯ ಕ್ರಾಂತಿಯಾಗುವ ಸಂಭವವುಂಟು. ಹೀಗೆ ಉಂಟಾದ ಕ್ರಾಂತಿಯಲ್ಲಿ ಸಿರಿವಂತರ ಸ್ಥಾನಮಾನ ಗಳಿಗೆ ಧಕ್ಕೆಯೊದಗಬಹುದು. ಆದುದರಿಂದ ಸಿರಿವಂತರ ಪ್ರಾಬಲ್ಯವಿರುವ ರಾಜ್ಯಗಳಲ್ಲಿಯೂ ಸಹ ಮಧ್ಯಮ ವರ್ಗದವರ ಸ್ಥಿತಿಗತಿಗಳ ಕಡೆಗೆ ಹೆಚು ಲಕ್ಷ್ಯ ಪೂರೈಸಲಾಗುತ್ತದೆ.

ತೃಪ್ತ ಮತ್ತು ಬಲಿಷ್ಠ ಮಧ್ಯಮವರ್ಗವುಳ್ಳ ಪ್ರತಿಯೊಂದು ದೇಶದಲ್ಲಿ ನಾಗರಿಕ ಹಕ್ಕುಗಳ ರಕ್ಷಣೆಯಾಗುತ್ತ ಬಂದಿದೆಯೆಂಬ ಮಾತನ್ನು ಇತಿಹಾ ಸವು ತೋರಿಸಿದೆ. ಇಂಗ್ಲಂಡದಲ್ಲಿ ವಿಪ್ಲವಗಳಿಲ್ಲದೆ ಲೋಕಸತ್ತಾತ್ಮಕ ರಾಜ್ಯ ಸ್ಥಾಪನೆಯಾದುದಕ್ಕೆ ಆ ದೇಶದ ಮಧ್ಯಮ ವರ್ಗದ ಪ್ರಾಬಲ್ಯವೇ ಕಾರಣ ವೆಂದು ಇತಿಹಾಸಕಾರರ ಅಭಿಪ್ರಾಯ. ಮಧ್ಯಮ ವರ್ಗದವರಿಗೆ ಯೋಗ್ಯ ಶಿಕ್ಷಣ ದೊರೆಯುತ್ತಿದ್ದರೆ, ಯೋಗ್ಯತೆಯುಳ್ಳವರಿಗೆ ಉದ್ಯೋಗದ ಭರವಸೆಯಿ ದ್ದರೆ, ಸಾಹಸಿಗಳಿಗೆ ತಮ್ಮ ಸ್ಥಿತಿಗತಿ ಸುಧಾರಿಸಿಕೊಳ್ಳಲು ಅವಕಾಶವಿದ್ದರೆ, ಅವರು ತಮ್ಮ ಚಟುವಟಿಕೆಗಳ ಮೇಲೆ ಸರಕಾರದ ನಿಯಂತ್ರಣವಿರಬಾರ ದೆಂದು ಬಯಸುವುದು ಸ್ವಾಭಾವಿಕ. ಇಂಥ ಪರಿಸ್ಥಿತಿಯಲ್ಲಿ ಅವರು ಎಲ್ಲ ರಿಗೂ ಸಮಾನ ಹಕ್ಕು ಇರಬೇಕೆಂದು ಆಗ್ರಹಪಡುತ್ತಾರೆ. ಏಕೆಂದರೆ ಅವರಿಗೆ ಬಡವರ ಮುಂದಾಳುತನವನ್ನು ತಾವೇ ವಹಿಸಬಲ್ಲೆವೆಂಬ ಆತ್ಮವಿಶ್ವಾಸವಿರು ತ್ತದೆ. ಇದಕ್ಕೆ ೧೭೮೯ ರ ಫ್ರೆಂಚ ಕ್ರಾಂತಿಯಲ್ಲಿ ಮಧ್ಯಮ ವರ್ಗವು ವಹಿಸಿದ ಪಾತ್ರವೇ ತಕ್ಕ ನಿದರ್ಶನವಾಗಿದೆ. ಈಗಲೂ ಫ್ರಾನ್ಸ ದೇಶದ ಮಧ್ಯಮ ವರ್ಗವು ನಾಗರಿಕ ಹಕ್ಕುಗಳನ್ನು ಕಾಯ್ದುಕೊಳ್ಳುವ ಕಾರ್ಯ ದಲ್ಲಿ ಮುಖ್ಯ ಪಾತ್ರವಹಿಸಿದ್ದುದು ಕಂಡುಬಂದಿದೆ.

ಮಧ್ಯಮ ವರ್ಗದ ನೀತಿಯ ಬಗ್ಗೆ ಜಾರ್ಜ ಬರ್ನಾರ್ಡಶಾರವರು ಅಪ ಹಾಸ್ಯ ಮಾಡಿರುವುದರಲ್ಲಿ ಸತ್ಯಾಂಶವಿದೆ. ಆದರೂ ಈ ವರ್ಗದವರು ಸಾಮಾಜಿಕ ನೀತಿಯ ಪುರಸ್ಕರ್ತರು ಎಂದು ಹೇಳಬಹುದು. ಸಿರಿಂವತ

ರ್ಗದ ಆಲಸ್ಯಮಯ, ಆಡಂಬರಮಯ, ಅವಿಚಾರಮಯ ಜೀವನವನ್ನು ತಿರಸ್ಕರಿಸುವವರು ಮಧ್ಯಮ ವರ್ಗದಲ್ಲಿಯೇ ಹೆಚ್ಚಾಗಿ ದೊರೆಯುತ್ತಾರೆ. ಬಡತನದಲ್ಲಿ ಬಾಳುವವರು ಸಿರಿವಂತರ ಬಗ್ಗೆ ಅಸೂಯೆ ಪಡಬಹುದು. ಆದರೆ ಅವರಲ್ಲಿ ಆ ಬಗ್ಗೆ ನಿಚ್ಚಳ ತಿಳುವಳಿಕೆ ಕಡಮೆ. ಸಿರಿವಂತರ ಆಚಾರ ವಿಚಾರಗಳಲ್ಲಿಯ ಲೋಪದೋಷಗಳನ್ನು ತಿಳಿಯಬಲ್ಲವರು ಸಾಮಾನ್ಯವಾಗಿ ಮಧ್ಯಮ ವರ್ಗದವರೇ. ಸಿರಿವಂತರಿಗೆ ಸರಿಯಾಗಿ ಅರ್ಥವಾಗದಿರುವ ಬಡವರ ಸಮಸ್ಯೆಗಳನ್ನು ತಿಳಿಯಬಲ್ಲವರೂ ಮಧ್ಯಮ ವರ್ಗದವರೇ. ಅರ ಮನೆಗಳನ್ನು ಕಟ್ಟಿಸಿ, ಕುದುರೆ ನಾಯಿಗಳನ್ನು ಸಾಕಿ, ಹೂವಿನ ಗಿಡಗಳ ಪ್ರದರ್ಶನ ಮಾಡಿ ಬಡವರ ಕಲ್ಯಾಣ ಮಾಡುತ್ತಿರುವೆವೆಂದು ಹೇಳುವ ಸಿರಿವಂತರೂ ಇದ್ದಾರೆ. ಇಂತಹ ಮಾತುಗಳನ್ನು ನಂಬುವ ಏನೂ ಅರಿಯದ ಬಡವರೂ ಇದ್ದಾರೆ. ಆದರೆ ಬುದ್ಧಿವಂತ ಮಧ್ಯಮ ವರ್ಗವು ದೇಶದ ಸಮಸ್ಯೆಗಳ ಬಗ್ಗೆ ಇದಕ್ಕಿಂತಲೂ ಹೆಚ್ಚು ನೈಜದೃಷ್ಟಿಯನ್ನಿಟ್ಟುಕೊಂಡಿರಬಲ್ಲದು. ಆದುದರಿಂದ, ನಾಗರಿಕ ಹಕ್ಕುಗಳ ಹಿತದ ದೃಷ್ಟಿಯಿಂದ ದೇಶದಲ್ಲಿ ನೀತಿಯುತ ಮಧ್ಯಮ ವರ್ಗವಿರುವುದು ಅಗತ್ಯ.

ಸಮಾಜದಲ್ಲಿ ಒಂದಿಲ್ಲೊಂದು ಬಗೆಯ ವರ್ಗಗಳಿರಲೇಬೇಕೆಂದಾಗ ಅವು ಮಾನವನ ವ್ಯಕ್ತಿತ್ವಕ್ಕೆ ಪೋಷಕವಾಗುವಂತೆ ರಚಿಸಲ್ಪಡುವುದು ಒಳಿತು. ದೇಶದಲ್ಲಿ ಕಾಣಬರುವ ಸಂಶೋಧಕರೂ, ಮಹಾಕಲಾವಿದರೂ, ಉಚ್ಚ ಮಟ್ಟದ ಬರಹಗಾರರೂ, ಆಡಳಿತ ಚತುರರೂ, ಅಸಾಧಾರಣ ಸಂಘಟನಾ ಚತುರರೂ ಮೊದಲಾದವರಿಗೆ ಉಚ್ಚತರಗತಿಯ ಜೀವನ ಸಾಗಿಸಲು ಅವಕಾಶವಿರುವುದು ಜನಹಿತದ ದೃಷ್ಟಿಯಿಂದಲೂ ಒಳ್ಳೆಯದು. ಆದರೆ ಆಲಸ್ಯಮಯ ಉಚ್ಚವರ್ಗವಿರುವುದು ಅಹಿತಕರ. ಅದರಂತೆ ದೇಶದಲ್ಲಿ ದಾರುಣ ದಾರಿದ್ರ್ಯದಲ್ಲಿ ನರಳುವ ಬಡವರಿರುವುದೂ ಅಹಿತಕರ. ಅವರು ನಾಗರಿಕ ಸ್ವಾತಂತ್ರ್ಯದ ತಿರುಳನ್ನೇ ಅರಿಯರು. ಇಂದಿನ ಜಗತ್ತಿನಲ್ಲಿ ಕನಿಷ್ಠ ವರ್ಗದ ಜನರನ್ನು ಮಧ್ಯಮ ವರ್ಗದವರ ಮಟ್ಟಕ್ಕೆ ತರುವುದು ಸಾಧ್ಯವಿದೆ. ಅದಕ್ಕೆ ತಕ್ಕ ಶಿಕ್ಷಣ ಮತ್ತು ಅವಕಾಶಗಳನ್ನು ಒದಗಿಸಲು ಸಾಧ್ಯವಿದೆ. ಇಂಗ್ಲಂಡ, ಅಮೇರಿಕೆ, ಫ್ರಾನ್ಸ, ರಸಿಯಾ ಮೊದಲಾದ ಮುಂದುವರಿದ ರಾಷ್ಟ್ರಗಳ ಜನಸಾಮಾನ್ಯರ ಜೀವನ ಮಟ್ಟವನ್ನು ನೋಡಿದಾಗ ಈ ವಿಷಯದಲ್ಲಿ ಸಂದೇಹ ಉಳಿಯುವುದಿಲ್ಲ.

ಸಹಾಯಕ ಗ್ರಂಥಗಳು:—

1. Man and Society. By R.M. Mac Ivor.
2. Sociology. By Morris Ginnsberg.
3. Hindu Law. By Maine,
4. State in Ancient India. By Beniprasad·
5. Jurisprudence. By Salmond·
6· Grammar of Politics By H· J· Laski·

ಪ್ರಕರಣ ೩ ಸಮಾಜ ಮತ್ತು ರಾಜ್ಯ

೧. ಸಮಾಜ.
೨. ರಾಜ್ಯ.
೩. ಸಮಾಜ ಮತ್ತು ರಾಜ್ಯಗಳ ನಡುವಿನ ಅಂತರ.
೪. ರಾಜ್ಯ ಮತ್ತು ಸಮಾಜ ಒಂದಾಗಿಸುವ ಪ್ರಯತ್ನಗಳು.
೫. ಸರಕಾರ.
೬. ಸರಕಾರದ ಅಂಗಗಳು.
೭. ಶಾಸನಾಂಗದ ರಚನೆ.
೮. ಶಾಸನಾಂಗದಲ್ಲಿ ರಾಜಕೀಯ ಪಕ್ಷಗಳ ಪಾತ್ರ.
೯. ರಾಜಕೀಯ ಪಕ್ಷಗಳ ಲೋಪದೋಷಗಳು.
೧೦. ಶಾಸನ ಸಭೆಗಳ ಸಭಾಸದರು.
೧೧. ಶಾಸನ ಸಭೆಯ ಕಾರ್ಯಕಲಾಪಗಳು.
೧೨. ಕಾರ್ಯಾಂಗದ ರಚನೆ ಮತ್ತು ಕಾರ್ಯಮಾಡುವ ರೀತಿ
೧೩. ಕಾರ್ಯಾಂಗದ ಕಾರ್ಯಕ್ಷೇತ್ರ.
೧೪. ಸ್ವತಂತ್ರ ನ್ಯಾಯಾಂಗದ ಮಹತ್ವ ಮತ್ತು ಕಾರ್ಯ.
೧೫. ಶಾಸನ ಪ್ರಾಧಾನ್ಯ ನ್ಯಾಯಪದ್ಧತಿ.
೧೬. ಆಡಳಿತ ಪ್ರಾಧಾನ್ಯ ನ್ಯಾಯಪದ್ಧತಿ.
೧೭. ಕಾಯ್ದೆಯ ಉಗಮ ಮತ್ತು ಸ್ವರೂಪ.
೧೮ ಕಾಯ್ದೆಯ ಪ್ರಕಾರಗಳು.
೧೯. ಕಾಯ್ದೆ ಮತ್ತು ನಾಗರಿಕನ ಸ್ವಾತಂತ್ರ್ಯ.
೨೦. ಕಾಯ್ದೆಯ ಹಿನ್ನೆಲೆಯಲ್ಲಿರುವ ಬಲಗಳು.

# ಪ್ರಕರಣ ೩

# ಸಮಾಜ ಮತ್ತು ರಾಜ್ಯ

## ೧. ಸಮಾಜ

ಮನುಷ್ಯನು ತನ್ನ ಜೀವನ ಹೋರಾಟದಲ್ಲಿ ನಿರ್ಮಾಣ ಮಾಡಿದ ಕೌಟುಂಬಿಕ, ವೈವಾಹಿಕ, ಧಾರ್ಮಿಕ, ನೈತಿಕ, ಆರ್ಥಿಕ, ರಾಜಕೀಯ ಮತ್ತು ಐತಿಹಾಸಿಕ ಹಿತಸಂಬಂಧಗಳಿಗೆಲ್ಲ ಸಮಾಜವೆಂದು ಕರೆಯುತ್ತಾರೆ. ನಿಜವಾಗಿ ನೋಡಿದರೆ, ಜಗತ್ತಿನಲ್ಲಿ ಒಂದೇ ಸಮಾಜವಿದೆ. ಅದು ಮಾನವ ಸಮಾಜ ಅದನ್ನು ರೂಢಿಯಲ್ಲಿ ಜಾತಿ, ಪಂಥ, ಧರ್ಮಗಳ ದೃಷ್ಟಿಯಿಂದ ವಿಂಗಡಿಸಿರಬಹುದು. ಬ್ರಾಹ್ಮಣ ಸಮಾಜ, ಲಿಂಗಾಯತ ಸಮಾಜ, ದೇವಾಂಗ ಸಮಾಜ, ಬ್ರಹ್ಮ ಸಮಾಜ, ಆರ್ಯ ಸಮಾಜ, ಮೊದಲಾದ ರೂಢಿಯ ಮಾತುಗಳು "ಸಮಾಜ" ಎಂಬ ಶಬ್ದದ ವಿಶಾಲ ಅರ್ಥವನ್ನೇ ಸೂಚಿಸುತ್ತವೆ. ಜಾಗತಿಕ ಸಮಾಜವನ್ನು ದೇಶ ದೇಶಗಳಲ್ಲಿ ವಿಂಗಡಿಸಿ ರಾಷ್ಟ್ರೀಯ ಸಮಾಜಗಳೆಂದು ಕರೆಯುವದುಂಟು. ಇದಲ್ಲದೆ ಸ್ತ್ರೀ ಸಮಾಜ, ಪುರುಷ ಸಮಾಜ, ವೃದ್ಧ ಸಮಾಜ, ತರುಣ ಸಮಾಜ, ಎಂದು ಮನುಷ್ಯನ ಲಿಂಗ, ವಯಸ್ಸುಗಳ ದೃಷ್ಟಿಯಿಂದ ಸಮಾಜವನ್ನು ವಿಂಗಡಿಸುವುದುಂಟು. ಹಳ್ಳಿಯ ಸಮಾಜ, ಪಟ್ಟಣ ಸಮಾಜವೆಂದು ಸ್ಥಾನದ ದೃಷ್ಟಿಯಿಂದ ವಿಂಗಡಿಸುವುದುಂಟು. ಸಹಕಾರೀ ಸಮಾಜ, ಹರಿಜನ ಸೇವಾ ಸಮಾಜ, ವನಿತಾ ಸೇವಾ ಸಮಾಜ ಎಂದು ಮೊದಲಾಗಿ ಮನುಷ್ಯನ ಸಂಘ ಸಂಸ್ಥೆಗಳ ದೃಷ್ಟಿಯಿಂದಲೂ ಸಮಾಜವನ್ನು ವಿಂಗಡಿಸುವುದುಂಟು. ಸಮಾಜವು ಎಲ್ಲ ಜಾತಿ, ಪಂಥ, ಪಂಗಡ, ಧರ್ಮ, ಭಾಷೆ, ವರ್ಗ, ಸಂಘ, ಸಂಸ್ಥೆ, ರಾಷ್ಟ್ರ, ರಾಜ್ಯ, ಮೊದಲಾದ ಮನುಷ್ಯನ ಪರಸ್ಪರ ಸಂಬಂಧವನ್ನು ಸೂಚಿಸುವ ಎಲ್ಲ ಘಟಕಗಳನ್ನೂ ಒಳಗೊಂಡಿದೆ. ಸಮಾಜವು ಇಡೀ ಮಾನವ ಕುಲದಷ್ಟೇ ವಿಸ್ತೃತವಾಗಿದೆ. ಕುಟುಂಬ ಎಂಬ ಪುಟ್ಟ ಸಂಸ್ಥೆಯಿಂದ ಸಂಯುಕ್ತರಾಷ್ಟ್ರ ಸಂಘದವರೆಗೆ ಎಲ್ಲ ಸಂಘ ಸಂಸ್ಥೆಗಳೂ ಅದರಲ್ಲಿ ಅಡಕವಾಗಿವೆ.

ಮಾನವನು ಸಮಾಜದ ಅಡಿಗಲ್ಲು. ಅವನು ತನ್ನ ಜೀವನ ಹೋರಾಟದಲ್ಲಿ ಯಶಸ್ವಿಯಾಗಲು ಸಮಾಜವನ್ನು ನಿರ್ಮಿಸಿಕೊಂಡಿದ್ದಾನೆ. ಮೊದ

ಮೊದಲು ವಿವಾಹ, ಕುಟುಂಬ, ಆಸ್ತಿ ಮೊದಲಾದ ಸಣ್ಣ ಸಂಸ್ಥೆಗಳನ್ನು ಕಟ್ಟಿದನು. ಮುಂದೆ ಪರಸ್ಪರ ಸಂಪರ್ಕವು ಹೆಚ್ಚಿದಂತೆ ಬಣ, ಜನಾಂಗ, ರಾಷ್ಟ್ರ ಮೊದಲಾದ ವಿಸ್ತೃತ ಸಂಸ್ಥೆಗಳನ್ನು ಕಟ್ಟಿದನು. ಅಂತರರಾಷ್ಟ್ರೀಯ ಸಂಪರ್ಕವು ಹೆಚ್ಚಿದ ಇಂದಿನ ದಿನಗಳಲ್ಲಿ ಅವನು ಜಾಗತಿಕ ಸಮಾಜವನ್ನೇ ನಿರ್ಮಾಣ ಮಾಡಿದ್ದಾನೆ. ಆದರೆ ಅದು ಇನ್ನೂ ದೃಢಗೊಂಡಿಲ್ಲ. ವರ್ಣ ದ್ವೇಷ, ಸಂಸ್ಕೃತಿಗಳ ಮೇಲಾಟ, ಆರ್ಥಿಕ ವ್ಯವಸ್ಥೆಗಳ ತಾಕಲಾಟ, ಪರಸ್ಪರ ಪರಿಚಯದ ಅಭಾವ, ಭಿನ್ನ ಭಿನ್ನ ಐತಿಹಾಸಿಕ ಹಿನ್ನೆಲೆ, ರಾಷ್ಟ್ರ ರಾಷ್ಟ್ರಗಳ ನಡುವಿನ ಸಂಶಯ ಮೊದಲಾದ ಕಾರಣಗಳು ಜಾಗತಿಕ ಸಮಾಜವು ದೃಢ ಗೊಳ್ಳಲು ಆಸ್ಪದಕೊಟ್ಟಿಲ್ಲ. ರಾಷ್ಟ್ರೀಯ ಸಮಾಜವೇ ಇಂದು ಪ್ರಬಲ ಘಟಕವಾಗಿದೆ. ಭಾಷೆ, ಸಂಸ್ಕೃತಿ, ಐತಿಹಾಸಿಕ ಹಿನ್ನೆಲೆ, ಆರ್ಥಿಕ ವ್ಯವಸ್ಥೆ, ಪ್ರದೇಶಮೊದಲಾದ ಸಂಗತಿಗಳ ಏಕ ರೂಪತೆಯ ಪರಿಣಾಮವಾಗಿ ರಾಷ್ಟ್ರೀಯ ಸಮಾಜವು ದೃಢವಾಗಿದೆ. ರಾಷ್ಟ್ರೀಯ ಸಮಾಜವನ್ನು ಹೆಚ್ಚು ದೃಢ ಪಡಿಸಲು ರಾಷ್ಟ್ರೀಯ ರಾಜ್ಯಗಳು ತಲೆಯೆತ್ತಿವೆ.

೨. ರಾಜ್ಯ

ಒಂದು ನಿಶ್ಚಿತ ಪ್ರದೇಶ, ಜನರು, ಶಾಸನ ಪದ್ಧತಿ ಮತ್ತು ಸಾರ್ವ ಭೌಮತ್ವವುಳ್ಳ ಸಂಸ್ಥೆಗೆ ರಾಜ್ಯವೆನ್ನುತ್ತಾರೆ. ರಾಜಕೀಯ ಸಾರ್ವಭೌಮತ್ವ ವೆಂದರೆ ಸಮಾಜ ರಚನೆಯಿಂದ ಒಡಮೂಡಿದ ಶ್ರೇಷ್ಠಶಕ್ತಿ. ಸಮಾ ಜದ ಹಿನ್ನೆಲೆಯಲ್ಲಿರುವ ನ್ಯಾಯಾನ್ಯಾಯದ ವಿಚಾರಗಳು, ಸಾಂಪ್ರದಾಯ ಗಳು, ಸ್ವಾಮಿತ್ವ ಆಜ್ಞಾಧಾರಕತ್ವದ ಕಲ್ಪನೆಗಳು, ಆಯಾ ಸಂಸ್ಥೆಗಳ ಬಲಾ ಬಲಗಳು, ಆರ್ಥಿಕ ವ್ಯವಸ್ಥೆಯ ಕಟ್ಟಳೆಗಳು, ವೈಯಕ್ತಿತ ಕಲಹಗಳು, ಪರ ಸ್ಪರ ಸಹಕಾರದ ಭಾವನೆಗಳು ಮೊದಲಾದವುಗಳ ಸಂಘರ್ಷಣೆಯಿಂದ ಸಾರ್ವಭೌಮತ್ವವು ತನ್ನ ಸಾಮರ್ಥ್ಯ ಪಡೆಯುತ್ತದೆ. ಈ ಸಾಮರ್ಥ್ಯದ ಬಲದಿಂದಲೇ ರಾಜ್ಯವು ಎಲ್ಲ ನಾಗರಿಕರು ಮತ್ತು ಸಂಸ್ಥೆಗಳ ಮೇಲೆ ಪ್ರಭುತ್ವ ಪಡೆದಿರುತ್ತದೆ.

ರಾಜ್ಯವು ಸಮಾಜದ ಒಂದು ಸಂಸ್ಥೆ. ಆದರೆ ಅದು ಸಮಾಜದ ಶ್ರೇಷ್ಠ ಸಂಸ್ಥೆ. ರಾಷ್ಟ್ರದೊಳಗಿನ ಎಲ್ಲ ಸಂಸ್ಥೆಗಳು ಮತ್ತು ಜನರು ರಾಜ್ಯಕ್ಕೆ ಅಧೀನವಾಗಿರುತ್ತಾರೆ. ರಾಜ್ಯದ ಕಕ್ಷದಲ್ಲಿ ಬರುವವರೆಲ್ಲರೂ ಆ ರಾಜ್ಯದ ಸದಸ್ಯರಾಗುತ್ತಾರೆ; ಅಂದರೆ ಅದರ ನಾಗರಿಕರಾಗುತ್ತಾರೆ. ಅವರು ರಾಜ್ಯದ

ಶಾಸನಗಳಿಂದ ಹೊರಗುಳಿದು ಸ್ವತಂತ್ರವಾಗಿ ಜೀವಿಸಲಾರರು. ಇತರ ಸಂಘಸಂಸ್ಥೆಗಳಲ್ಲಿ ಜನರು ಸೇರಬಹುದು ಇಲ್ಲವೆ ಬಿಡಬಹುದು. ಅವುಗಳ ಸದಸ್ಯತ್ವವು ರಾಜ್ಯದ ಸದಸ್ಯತ್ವದಂತೆ ಅನಿವಾರ್ಯವಿರುವುದಿಲ್ಲ. ಇದೇ ರಾಜಕೀಯ ಪ್ರಭುತ್ವದ ವೈಶಿಷ್ಟ್ಯ.

ಮೊದಮೊದಲು ರಾಜ್ಯಗಳು ಬಣಗಳ ರಕ್ಷಣೆಗಾಗಿ ತಲೆಯೆತ್ತಿದವು. ಬರಬರುತ್ತ ಅವು ಪ್ರಾದೇಶಿಕ ಸಂಸ್ಥೆಗಳಾದವು. ಮೌರ್ಯ ಚಂದ್ರಗುಪ್ತನ ಮಗಧ ಸಾಮ್ರಾಜ್ಯವು ಸ್ಥಾಪಿತವಾಗುವ ಮುಂಚೆ ಹಿಂದುಸ್ಥಾನದಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳಿದ್ದವು. ಆಗ ರಾಜ್ಯವು ಕೇವಲ ರಕ್ಷಣೆ ಮತ್ತು ಕರಗಳನ್ನೆತ್ತುವ ಎರಡೇ ಕಾರ್ಯಗಳಲ್ಲಿ ಬಹುತರವಾಗಿ ನಿರತವಾಗಿತ್ತು. ಅಶೋಕನ ಕಾಲದಲ್ಲಿ ರಾಜ್ಯವು ಕೆರೆಭಾವಿ ಕಟ್ಟಿಸುವುದು, ಗುಡಿಗುಂಡಾರ ಕಟ್ಟಿಸುವುದು, ಅನ್ನ ಛತ್ರಗಳನ್ನಿಡಿಸುವುದು, ರಸ್ತೆಮಾಡಿಸುವುದು, ನೀತಿಯನ್ನು ಬೋಧಿಸುವುದು ಮೊದಲಾದ ಜನಹಿತ ಕಾರ್ಯಗಳನ್ನು ಕೈಕೊಂಡಿತು. ಆಗ ಸಹ ರಾಜ್ಯವು ಸಾಮಾನ್ಯವಾಗಿ ಹೊಸ ಶಾಸನಗಳನ್ನು ಮಾಡುತ್ತಿರಲಿಲ್ಲ. ಸಮಾಜದಲ್ಲಿ ರೂಢವಾಗಿರುವ ನೀತಿ ನಿಯಮಗಳೇ ರಾಜ್ಯದ ಶಾಸನಗಳಾಗಿದ್ದವು. ರಾಜ್ಯವು ಅವುಗಳನ್ನೇ ಅನುಸರಿಸುತ್ತಿತ್ತು. ಅದು ಜನರಿಗೆ ರೂಢಿಯಲ್ಲಿರುವ ಸಾಮಾಜಿಕ ನೀತಿ ನಿಯಮಗಳ ಪ್ರಕಾರ ನ್ಯಾಯ ಕೊಡುತ್ತಿತ್ತು. ಸಾಮಾಜಿಕ ನಿಯಮಗಳನ್ನು ಬದಲಿಸುವಷ್ಟು ಅದು ಆಗ ಬಲಿಷ್ಠವಾಗಿರಲಿಲ್ಲ. ಮುಂದೆ ರಾಜ್ಯದ ಸೈನ್ಯಬಲ ಮತ್ತು ಸಂಘಟನೆಯು ಹೆಚ್ಚಿತು. ಅದರ ಅಧಿಕಾರವು ಯಥಾರ್ಥವೆಂಬ ಭಾವನೆಯು ಜನಸಾಮಾನ್ಯರಲ್ಲಿ ಬೇರೂರಿತು. ವಾಹನ ಸೌಕರ್ಯಗಳು ಉತ್ತಮಗೊಂಡವು. ಜನರ ಪರಸ್ಪರ ಸಂಪರ್ಕ ಹೆಚ್ಚಿತು. ಜನ ಜೀವನದಲ್ಲಿ ವೈವಿಧ್ಯತೆ ಹೆಚ್ಚಿತು. ಆಗ ಅಂತರಿಕ ಸುವ್ಯವಸ್ಥೆಯ ಸಮಸ್ಯೆ ಹಿರಿದಾಯಿತು. ಪರಕೀಯ ದಾಳಿಯ ಭೀತಿ ಬಲಿಯಿತು. ಆದುದರಿಂದ ರಾಜ್ಯವು ಬಲಿಷ್ಠವಾಗುತ್ತ ಹೋಯಿತು.

ಅದು ತನ್ನ ಆಧಿಕಾರ ಬಲದಿಂದ ಹೊಸ ಹೊಸ ಶಾಸನಗಳನ್ನು ಮಾಡತೊಡಗಿತು. ಇಂದಂತೂ ಮನುಷ್ಯನ ಸಕಲ ವ್ಯಾಪಾರಗಳಲ್ಲಿ ನಿಯಂತ್ರಣ ಹಾಕಹತ್ತಿದೆ. ಇದಲ್ಲದೆ ಆದು ಸಮಾಜದ ಹಲವು ಉತ್ಪಾದಕ ಸಂಸ್ಥೆಗಳನ್ನು ಕೈಯಲ್ಲಿ ತೆಗೆದುಕೊಂಡಿದೆ. ವೈಜ್ಞಾನಿಕ ಸಂಶೋಧನೆಯ ಕಾರ್ಯದಲ್ಲಿ

ತೊಡಗಿದೆ. ಸಮಾಜದ ಸಬಲ ಮತ್ತು ದುರ್ಬಲ ಸಂಸ್ಥೆಗಳ ನಡುವೆ ಮಧ್ಯ ಸ್ತಿಕೆ ವಹಿಸಹತ್ತಿದೆ. ಆದುದರಿಂದ ರಾಜ್ಯವು ಕೇವಲ ಪಾಶವಿ ಶಕ್ತಿಯ ಸಂಸ್ಥೆಯಾಗಿರದೆ, ಅದು ಜನರ ಕಲ್ಯಾಣಕ್ಕಾಗಿ ಇರುವ ಅವಶ್ಯಕ ಸಂಸ್ಥೆ ಯಾಗಿದೆ.

## ೩. ಸಮಾಜ ಮತ್ತು ರಾಜ್ಯಗಳ ನಡುವಿನ ಅಂತರ

ರಾಜ್ಯದ ಚಟುವಟಿಕೆಗಳೆಲ್ಲ ಇಡೀ ಸಮಾಜಕ್ಕೆ ವ್ಯಾಪಿಸಿರುವುದರಿಂದ ರಾಜ್ಯವೆಂದರೂ ಒಂದೇ ಸಮಾಜವೆಂದರೂ ಒಂದೇ ಎಂದು ಕೆಲವರು ತಿಳಿ ಯುತ್ತಾರೆ. ಈ ತಿಳುವಳಿಕೆ ತಪ್ಪು. ಸಮಾಜವು ರಾಜ್ಯಕ್ಕಿಂತಲೂ ಹೆಚ್ಚು ವಿಶಾಲವಾದದ್ದು. ರಾಜ್ಯವು ತೃಪ್ತಿಪಡಿಸದೆ ಇದ್ದ ಮನುಷ್ಯನ ಅನೇಕ ಬೇಡಿ ಕೆಗಳನ್ನು ಸಮಾಜವು ತೃಪ್ತಿಪಡಿಸುತ್ತದೆ. ಕೌಟುಂಬಿಕ ಜೀವನದ ಬಗೆ ಯನ್ನು ಬಹುತರವಾಗಿ ಸಮಾಜವೇ ನಿರ್ಧರಿಸುತ್ತದೆ. ವಿವಾಹ ಸಂಬಂಧಗಳ ಆಚರಣೆಗಳನ್ನೂ ಬಹುತರವಾಗಿ ಸಮಾಜವೇ ನಿರ್ಧರಿಸುತ್ತದೆ. ವಿವಾಹ ಹೇಗೆ ಗೊತ್ತುಮಾಡಬೇಕು, ಯಾರನ್ನು ಆಮಂತ್ರಿಸಬೇಕು, ಯಾರ ನೇತೃತ್ವ ದಲ್ಲಿ ಸಮಾರಂಭವು ನಡೆಯಬೇಕು, ವಧೂವರರಿಗೆ ಹೇಗೆ ಸನ್ಮಾನಿಸಬೇಕು, ಮೆರವಣಿಗೆ ಯಾವಾಗ ತೆಗೆಯಬೇಕು, ಆಮಂತ್ರಿತರನ್ನು ಹೇಗೆ ಬೀಳ್ಕೊಡ ಬೇಕು, ವಿವಾಹಿತರು ಮುಂದೆ ಹೇಗೆ ವ್ಯವಹರಿಸಬೇಕು ಎಂದು ಮೊದಲಾದ ಎಲ್ಲ ವಿಷಯಗಳನ್ನೂ ಸಮಾಜವೇ ನಿಶ್ಚಿತಪಡಿಸುತ್ತದೆ. ರಾಜ್ಯವು ಕೇವಲ ಜನರವಿತ್ತ ಜೀವಿತ ಗೌರವಗಳಿಗೆ ಧಕ್ಕೆಯಾಗದಂತೆ ವಿವಾಹ ಪದ್ಧತಿಯಿರ ಬೇಕೆಂದು ಮಾತ್ರ ವಿಧಿಸುತ್ತದೆ. ಇದಕ್ಕಿಂತಲೂ ಹೆಚ್ಚಿನ ಆಸ್ಥೆಯನ್ನು ಅದು ತೋರಿಸುವುದಿಲ್ಲ; ತೋರಿಸುವುದು ಸಾಧ್ಯವೂ ಇಲ್ಲ. ಮನುಷ್ಯನ ನಿಕಟ ವೈಯಕ್ತಿಕ ವಿಷಯಗಳಲ್ಲಿ ರಾಜಕೀಯ ಶಾಸನದ ಬಲಕ್ಕಿಂತಲೂ ಸಮಾ ಜದ ತಿರಸ್ಕಾರದ ಭಯವೇ ಹೆಚ್ಚುಪರಿಣಾಮಕಾರಿಯಾಗಿರುತ್ತದೆ. ಆದು ದರಿಂದ ಶಾರೀರಿಕ ಸಂಸ್ಥೆಗಳು, ಕಲಾವಿದರ ಸಂಸ್ಥೆಗಳು, ವೈಜ್ಞಾನಿಕ ಸಂಸ್ಥೆ ಗಳು, ಸಾಂಸ್ಕೃತಿಕ ಸಂಸ್ಥೆಗಳು, ಧಾರ್ಮಿಕ ಸಂಸ್ಥೆಗಳು, ಸಾಹಿತ್ಯ ಸಂಸ್ಥೆ ಗಳು, ಸರಕಾರೀ ಸಂಸ್ಥೆಗಳು, ಪರೋಪಕಾರಿ ಸಂಸ್ಥೆಗಳು ಮೊದಲಾದವುಗಳ ಮೇಲೆ ರಾಜ್ಯವು ಕೇವಲ ಬಾಹ್ಯ ನಿರ್ಬಂಧನೆಗಳನ್ನು ಮಾತ್ರ ಹಾಕುತ್ತದೆ. ಆ ಸಂಸ್ಥೆಗಳು ಹೆಚ್ಚಾಗಿ ಸಮಾಜದ ನೀತಿ ನಿಯಮಗಳಿಗನುಗುಣವಾಗಿ

ತಮ್ಮ ಆಂತರಿಕ ಜೀವನವನ್ನು ಸಾಗಿಸುತ್ತವೆ. ಹೀಗೆ ವ್ಯಕ್ತಿಗಳ ವಿಷಯ ವಲ್ಲಿ ಮತ್ತು ಸಂಸ್ಥೆಗಳ ವಿಷಯದಲ್ಲಿ ರಾಜ್ಯವು ಸಮಾಜದಷ್ಟು ವಿಸ್ತೃತ ವಾಗಿಲ್ಲ.

ಬಾಹ್ಯ ನಿಯಮಗಳಿಂದ ತಡೆಯಬಲ್ಲ ವಿಷಯಗಳಲ್ಲಿ ಮಾತ್ರ ರಾಜ್ಯವು ಕೈಹಾಕುತ್ತದೆ. ಆದರೆ ಸಮಾಜವು ಬಾಹ್ಯನಿಯಮಗಳಿಂದ ತಡೆಯಲಶಕ್ಯ ವಾದ ವಿಷಯಗಳಲ್ಲಿಯೂ ಸಹ ನೈತಿಕ ಕಟ್ಟಳೆಗಳನ್ನು ಮಾಡುತ್ತದೆ. " ಸತ್ಯನುಡಿಯಿರಿ, ದಾನ ಧರ್ಮ ಮಾಡಿರಿ" ಎಂಬ ನೀತಿಯ ಮಾತುಗಳು ಸಮಾಜದ ಕಟ್ಟಳೆಗಳು; ಆದರೆ ರಾಜಕೀಯ ಶಾಸನಗಳಲ್ಲ. ಸ್ನಾನಮಾಡು ವುದು, ಜಪ ತಪ ಮಾಡುವುದು, ವಸ್ತ್ರಧರಿಸುವುದು, ಅತಿಥಿ ಸತ್ಕಾರ ಮಾಡು ವುದು ಮೊದಲಾದ ಸಣ್ಣ ಪುಟ್ಟ ವೈಯಕ್ತಿಕ ವಿಷಯಗಳ ಬಗ್ಗೆಯೂ ಸಮಾಜವು ಆಸ್ಥೆವಹಿಸುತ್ತದೆ. ಆದರೆ ಈ ವಿಷಯಗಳ ಬಗ್ಗೆ ರಾಜ್ಯವು ಮೌನವಾಗಿರುತ್ತದೆ. ದೇವರಿದ್ದಾನೆಯೋ, ಮೂರ್ತಿ ಪೂಜೆ ತಪ್ಪೋ ಒಪ್ಪೋ, ಪಾಪ ಪುಣ್ಯಗಳೆಂದರೇನು, ಸ್ವರ್ಗ ನರಕಗಳೆಂದರೇನು, ಪೂಜೆ ಪುನಸ್ಕಾರಗಳು ಹೇಗಿರಬೇಕು. ಮೊದಲಾದ ವೈಯಕ್ತಿಕ ನಂಬುಗೆಯ ವಿಷಯಗಳಲ್ಲಿ ರಾಜ್ಯವು ತಟಸ್ಥವಾಗಿದ್ದರೂ ಸಮಾಜವು ಅವುಗಳ ಬಗ್ಗೆ ತೀಕ್ಷ್ಣ ಆಸ್ಥೆಯನ್ನು ಪ್ರಕಟಪಡಿಸುತ್ತದೆ. ಜನರ ಆಟ ನೋಟಗಳ ಬಗ್ಗೆಯೂ ಹೀಗೆಯೇ ಇರುತ್ತದೆ. ಮನುಷ್ಯನಾದರೂ ಸಾಮಾಜಿಕ ವಿಷಯಗಳಲ್ಲಿ ತೋರ್ಪಡಿಸುವಷ್ಟು ಆಸ್ಥೆಯನ್ನು ರಾಜಕೀಯ ವಿಷಯಗಳ ಬಗ್ಗೆ ತೋರ್ಪ ಡಿಸುವುದಿಲ್ಲ.

ರಾಜಕೀಯ ಶಾಸನಗಳನ್ನು ಮುರಿದರೆ ಒಂದಿಲ್ಲೊಂದು ಬಗೆಯ ದೈಹಿಕ ದಂಡನೆಗೆ ಮನುಷ್ಯನು ಗುರಿಯಾಗಲೇಬೇಕು. ಆದರೆ ಸಾಮಾ ಜಿಕ ನಿಯಮಗಳನ್ನು ಮುರಿದರೆ ಹಲವು ಸಲ ಮನುಷ್ಯನು ದೈಹಿಕ ದಂಡನೆ ಅನುಭವಿಸುವ ಪ್ರಸಂಗವೊದಗಲಿಕ್ಕಿಲ್ಲ; ಸಾಮಾಜಿಕ ನಿಯಮಗ ಳನ್ನು ಅವನು ಸಮಾಜದ ತಿರಸ್ಕಾರದ ಅಂಜಿಕೆಯಿಂದ ಇಲ್ಲವೆ ಅದರಿಂದ ತನಗೆ ದೊರೆಯಬಹುದಾದ ಕೀರ್ತಿಯ ದೆಸೆಯಿಂದ ಪಾಲಿಸುತ್ತಾನೆ. ಈ ಬಗೆಯ ಸಂಗತಿಗಳು ರಾಜ್ಯ ಮತ್ತು ಸಮಾಜಗಳಲ್ಲಿರುವ ವ್ಯತ್ಯಾಸ ವನ್ನು ತೋರಿಸುತ್ತದೆ.

## ೪. ರಾಜ್ಯ ಮತ್ತು ಸಮಾಜ ಒಂದಾಗಿಸುವ ಪ್ರಯತ್ನಗಳು

ರಾಜ್ಯದ ಕಕ್ಷದಲ್ಲಿ ಸಮಾಜವನ್ನು ಅಡಗಿಸಲು ಮಾಡಿದ ಪ್ರಯತ್ನದ ಐತಿಹಾಸಿಕ ನಿದರ್ಶನಗಳೂ ಉಂಟು. ಮಧ್ಯಯುಗದ ಪೋಪನ ರೋಮ ಸಾಮ್ರಾಜ್ಯವು ಇಂತಹ ನಿದರ್ಶನವಾಗಿದೆ. ಆಗ ಪೋಪನ ರೋಮ ರಾಜ್ಯವು ಕೇವಲ ಶಾಸನ ವಿಧಿಸುವ ಕಾರ್ಯದಿಂದ ತೃಪ್ತವಾಗಿರಲಿಲ್ಲ. ಜನರ ಪಾಪ ಪುಣ್ಯದ ವಿಷಯದಲ್ಲಿಯೂ, ಸ್ವರ್ಗ ನರಕಗಳಿಗೆ ಜನರನ್ನು ತಳ್ಳುವ ಕಾರ್ಯದಲ್ಲಿಯೂ, ದೆವ್ವ ಬಿಡಿಸುವ ಕೆಲಸದಲ್ಲಿಯೂ, ಪ್ರಾಯಶ್ಚಿತ್ತ ಕೊಡುವುದರಲ್ಲಿಯೂ ಅದು ತೊಡಗಿದ್ದಿತು. ಪೋಪನ ಮಾತನ್ನು ವಿರೋಧಿಸುವವನು ಪಾಪಿಯೆಂದು ರಾಜ್ಯವು ನಿರ್ಣಯಿಸುತ್ತಿತ್ತು. ಆಗ ರಾಜ್ಯ ಮತ್ತು ಸಮಾಜಗಳ ನಡುವಿನ ವ್ಯತ್ಯಾಸ ಕಡಿಮೆಯಾಗಿತ್ತು. ಅದೇ ಪ್ರಕಾರ ನಿನ್ನೆ ಮೊನ್ನೆಯ ಹಿಟ್ಲರನ ನಾಝೀ ರಾಜ್ಯದಲ್ಲಿ ರಾಜ್ಯ ಮತ್ತು ಸಮಾಜಗಳ ನಡುವಿನ ವ್ಯತ್ಯಾಸ ಅಳಿಸುವ ಪ್ರಯತ್ನ ನಡೆಯಿತು. ಹಿಟ್ಲರನ ವಿರೋಧಿಯನ್ನು ಜರ್ಮನ್ ಜನಾಂಗದ ವೈರಿಯೆಂದು ದಂಡಿಸಲಾಯಿತು. ಕಲೆ, ಸಂಸ್ಕೃತಿ, ವಿಜ್ಞಾನ, ಭಾಷೆ, ಇತಿಹಾಸ, ಸಾಹಿತ್ಯ ಮೊದಲಾದ ವಿಷಯಗಳೂ ನಾಝೀ ಪಕ್ಷದ ಅಭಿಪ್ರಾಯದ ಮೇರೆಗೆ ರೂಪುಗೊಳ್ಳುವಂತಾಗಿತ್ತು. ಇಂದಿನ ರಸಿಯಾದಲ್ಲಿ ಇಂತಹ ಮತ್ತೊಂದು ನಿದರ್ಶನವನ್ನು ಕಾಣಬಹುದು. ಅಲ್ಲಿ ಸಂಗೀತಕಲೆ, ಚಲಚಿತ್ರಪ್ರಪಂಚ, ಬಾಲ್ಯಜಿವನ, ತರುಣಸಮಾಜ, ಶಾರೀರಕ ಚಟುವಟಿಕೆ, ಗ್ರಂಥ ಕರ್ತರ ವಿಮರ್ಶೆ, ಜೀವನಶಾಸ್ತ್ರ ಸಂಶೋಧಕರ ಸಿದ್ಧಾಂತ ಮೊದಲಾದ ವಿಷಯಗಳಲ್ಲಿಯೂ ರಾಜ್ಯವು ವ್ಯಕ್ತಿಗಳಿಗೆ ತನ್ನದೇ ಆದ ಒಂದು ತತ್ವವನ್ನು ಅಂಗೀಕರಿಸುವಂತೆ ಮಾಡುತ್ತದೆ. ಜನರು ಲೆನಿನ್ ಸ್ಟಾಲಿನ್ನರು ಅರ್ಥ ಮಾಡಿದ ರೀತಿಯಲ್ಲೇ ಮಾರ್ಕ್ಸವಾದವನ್ನು ನಂಬಬೇಕೆಂದು ಆ ರಾಜ್ಯವು ಒತ್ತಾಯ ಪಡಿಸುತ್ತದೆ. ಹಾಗೆ ನಂಬದೆ ಇದ್ದ ವ್ಯಕ್ತಿಯನ್ನು ಸಮಾಜ ವಿರೋಧಿಯೆಂದು ದಂಡಿಸುತ್ತದೆ. ಹೀಗೆ ಎಲ್ಲ ಸರ್ವಾಧಿಕಾರಿತ್ವದ ರಾಜ್ಯಗಳಲ್ಲಿಯೂ ರಾಜ್ಯವನ್ನು ಸಮಾಜದಷ್ಟೇ ವಿಸ್ತೃತವಾಗಿಸುವ ಪ್ರಯತ್ನಗಳು ನಡೆದು ಹೋಗಿವೆ, ಮತ್ತು ನಡೆಯುತ್ತಿವೆ.

ಆಧುನಿಕ ರಾಜ್ಯಗಳು ಅತ್ಯಂತ ಬಲಿಷ್ಠವಾಗಿವೆ. ರಾಷ್ಟ್ರದ ಶೈಕ್ಷಣಿಕ ಕೇಂದ್ರಗಳು, ವೈಜ್ಞಾನಿಕ ಸಂಶೋಧನಾಲಯಗಳು, ಸುದ್ದಿ ವಿತರಣದ ಸಂಸ್ಥೆ

ಗಳು ಮೊದಲಾದುವು ಸಾಮಾನ್ಯವಾಗಿ ರಾಜ್ಯದ ಆಧೀನವಾಗಿರುತ್ತವೆ. ಅವುಗಳ ಸಹಾಯದಿಂದ ಅದು ಜನರ ಮಾನಸಿಕ ಬುದ್ಧಿಭಾವನೆಗಳನ್ನು ಸಹ ರೂಪಿಸಲು ಪ್ರಯತ್ನಿಸಬಹುದು. ಆದರೂ ಮನುಷ್ಯನ ಸ್ವತಂತ್ರ ಪ್ರವೃತ್ತಿಯು ಇಂತಹ ಪ್ರಯತ್ನಗಳನ್ನು ಪ್ರತಿಭಟಿಸಲು ಸಮರ್ಥವಿದೆ. ಮನುಷ್ಯನ ವೈಯಕ್ತಿಕ ನೀತಿ ಮತ್ತು ಬೌದ್ಧಿಕ ಚಟುವಟಿಕೆಗಳನ್ನು ನಿಯಂತ್ರಿಸಲೆತ್ನಿಸಿದ ಯಾವ ರಾಜ್ಯವೂ ಯಶಸ್ವಿಯಾಗಿಲ್ಲ. ಸಮಾಜ ಮತ್ತು ರಾಜ್ಯಗಳ ನಡುವಿನ ವ್ಯತ್ಯಾಸ ಮನುಷ್ಯನ ಸ್ವಾತಂತ್ರ್ಯಾಪೇಕ್ಷೆ ಇರುವ ವರೆಗೂ ಅಳಿಸಿ ಹೋಗಲಾರದೆಂದು ಹೇಳಬಹುದು.

೫. ಸರಕಾರ.

ಸರಕಾರವು ರಾಜ್ಯದ ಸಾರ್ವಭೌಮತ್ವವನ್ನು ಪ್ರಕಟಪಡಿಸುವ ಯಂತ್ರ. ರಾಜ್ಯದ ಸೇವೆಯಲ್ಲಿರುವ ಅನೇಕಾನೇಕ ಸಾರ್ವಜನಿಕ ಸೇವಕರ ಸಂಘಟನೆಯ ಮುಖಾಂತರವೇ ರಾಜ್ಯದ ಅಧಿಕಾರವು ಜನರಿಗೆ ಗೋಚರವಾಗುತ್ತದೆ. ಸಿಪಾಹಿಯಿಂದ ಮೊದಲ್ಗೊಂಡು ಅಧ್ಯಕ್ಷನ ವರೆಗೆ ಎಲ್ಲ ಸಾರ್ವಜನಿಕ ಸೇವಕರೂ ತಮ್ಮ ತಮ್ಮ ಸ್ಥಾನ ಮಾನಗಳಿಗೆ ಉಚಿತವಾದ ಅಧಿಕಾರವನ್ನು ಜನರ ಮೇಲೆ ನಡೆಯಿಸುತ್ತಾರೆ. ಸರಕಾರದಲ್ಲಿ ಇವರೆಲ್ಲರೂ ಸಮಾವೇಶವಾಗಿದ್ದಾರೆ. ಆದರೆ ಕೆಲವು ಸಲ ಕೇವಲ ರಾಜ್ಯದ ಮುಖ್ಯ ಕಾರ್ಯನಿರ್ವಾಹಕ ಮಂಡಲವನ್ನು ಸರಕಾರವೆಂದು ಕರೆಯುವುದುಂಟು, ಹೀಗೆ ಟೋರಿ ಸರಕಾರ, ಕೂಲಿಕಾರ ಸರಕಾರ, ಕಾಂಗ್ರೆಸ್ಸ ಸರಕಾರ, ಕಮ್ಯೂನಿಷ್ಟ ಸರಕಾರಗಳೆಂದು ಕರೆಯುವಾಗ, ಜನರು ಸರಕಾರವೆಂದರೆ ರಾಜ್ಯದ ಮುಖ್ಯ ಕಾರ್ಯನಿರ್ವಾಹಕ ಮಂಡಳವೆಂದೇ ತಿಳಿದಿರುತ್ತಾರೆ. ಈ ತಿಳವಳಿಕೆ ತಪ್ಪಲ್ಲ, ರೂಢಿಯಲ್ಲಿ ಸರಕಾರ ಎಂಬ ಶಬ್ದವನ್ನು ಎರಡೂ ಅರ್ಥಗಳಲ್ಲಿ ಉಪಯೋಗಿಸುತ್ತಾರೆ. ಇಲ್ಲಿ ಮಾತ್ರ ಅದನ್ನು ವಿಶಾಲಾರ್ಥದಲ್ಲಿಯೇ ಬಳಸಲಾಗಿದೆ. ಸರಕಾರವೆಂದರೆ ರಾಜಕೀಯ ಪ್ರಭುತ್ವವನ್ನು ನಿರ್ವಹಿಸುತ್ತಿರುವ ಸಾರ್ವಜನಿಕ ಸೇವಕರ ಸಂಘಟನೆಯೆಂದೇ ಇಲ್ಲಿ ಅರ್ಥ ಮಾಡಿಕೊಳ್ಳಬೇಕು.

ರಾಜ್ಯವು ಶಾಶ್ವತ ಸಂಸ್ಥೆ. ಸರಕಾರೀ ಅಧಿಕಾರಿಗಳು ಯಾವ ತತ್ವಗಳ ಮೇಲೆ ಕಾರ್ಯ ನಿರ್ವಹಿಸಬೇಕು, ಯಾವ ರೀತಿಯಿಂದ ಸಂಘಟಿಕರಾಗಬೇಕು, ಯಾವ ಗುರಿಯನ್ನು ಸಾಧಿಸಬೇಕು ಎಂಬುದನ್ನು ರಾಜ್ಯದ ಹಿನ್ನೆಲೆ

ಯಲ್ಲಿರುವ ಶಾಶ್ವತ ವಿಚಾರ, ಸಾಂಪ್ರದಾಯ ಮತ್ತು ಬಲಗಳೇ ನಿರ್ಧರಿಸುತ್ತವೆ. ಆಯಾ ರಾಜ್ಯಗಳ ಶಾಸನಗಳಿಗೆ ಅನುಗುಣವಾಗಿ ಆಯಾ ಸರಕಾರಗಳು ವರ್ತಿಸುತ್ತವೆ.

ಸಮಾಜವು ಅರಾಜಕ ಸ್ಥಿತಿಯಲ್ಲಿ ಬದುಕಲಾರದು. ಮನುಷ್ಯನು ಸಾದಾ ಜೀವಿಯಾಗಿದ್ದಾಗ ರಾಜ್ಯವಿಲ್ಲದೆ ಬದುಕು ಸಾಗಬಹುದಾಗಿತ್ತು. ಆದರೆ ಇಂದು ಅದು ಅಶಕ್ಯ. ಒಂದಿಲ್ಲೊಂದು ಬಗೆಯ ರಾಜ್ಯವು ಅಸ್ತಿತ್ವದಲ್ಲಿರಲೇಬೇಕು. ಸರಕಾರವು ಅದರ ಸಂಘಟನೆ. ಸಮಾಜದಲ್ಲಿ ಆಯಾ ಸಂಸ್ಥೆಗಳ ಬಲಾಬಲಗಳು ಮೇಲೆ ಕೆಳಗಾಗದಂತೆ ಸರಕಾರಗಳೂ ಬದಲಾಗುತ್ತವೆ. ಸೈನಿಕ ಶಕ್ತಿ, ಧಾರ್ಮಿಕ ಶ್ರದ್ಧೆ, ಸಾಂಪ್ರದಾಯ, ಆರ್ಥಿಕಬಲ, ಇಲ್ಲವೆ ವಿಚಾರಕ್ರಾಂತಿ ಮೊದಲಾದ ಕಾರಣಗಳ ಬಲದಿಂದ ಒಂದು ಪಂಗಡವು ಸಮಾಜದಲ್ಲಿ ಗಣ್ಯಸ್ಥಾನ ಪಡೆದಿದ್ದರೆ, ಅದೇ ಪಂಗಡವು ರಾಜ್ಯದಲ್ಲಿ ಸರಕಾರವನ್ನು ರಚಿಸುತ್ತದೆ ಹೀಗೆ ಸರಕಾರವನ್ನು ರಚಿಸಿದ ಪಂಗಡವು ಬಹುತರವಾಗಿ ಅಧಿಕಾರವನ್ನು ತನ್ನ ಹಿತದ ದೃಷ್ಟಿಯಿಂದ ಉಪಯೋಗಿಸಿಕೊಳ್ಳುತ್ತದೆ. ಆದರೆ ಈ ಅಧಿಕಾರ ಬಜಾವಣೆಯು ಜನರ ಹಿತಕ್ಕಾಗಿಯೇ ಇದೆಯೆಂದು ಅದು ಯಾವಾಗಲೂ ಸಾರುತ್ತಿರುತ್ತದೆ. ಆದರೂ ಅದರ ಅಧಿಕಾರದಿಂದ ಹಾನಿಗೊಳಗಾದವರು ಅದರ ವಿರೋಧಿಗಳಾಗಬಹುದು. ಹೀಗೆ ಬೆಳೆದು ನಿಂತ ವಿರೋಧಿ ಪಂಗಡವು ಒಂದಿಲ್ಲೊಂದು ದಿನ ಇಂದಿನ ಸರಕಾರವನ್ನುರುಳಿಸಿ ತನ್ನ ಸರಕಾರವನ್ನು ರಚಿಸಬಹುದು. ಕೌರವರ ಬದಲು ಪಾಂಡವರು ಬರಬಹುದು; ನವನಂದರ ಬದಲು ಮೌರ್ಯರು ಬರಬಹುದು; ಸರದಾರರ ಬದಲು ಸಾಹುಕಾರರು ಬರಬಹುದು; ಉದಾರವಾದಿಗಳ ಬದಲು ಸಮಾಜವಾದಿಗಳು ಬರಬಹುದು; ಹೀಗೆ ರಾಜ್ಯದಲ್ಲಿ ಸರಕಾರಗಳು ಬದಲಾಗುತ್ತ ಬಂದಿವೆ; ಆದರೆ ರಾಜ್ಯಭಾರವು ಮಾತ್ರ ಎಲ್ಲಿಯೂ ನಿಂತಿಲ್ಲ.

ಹಿಂದಿನ ಕಾಲದಲ್ಲಿ ರಕ್ತಪಾತವಾಗಿ ಸರಕಾರಗಳು ಬದಲಾಗುತ್ತಿದ್ದವು. ಇಂದಿಗೂ ಹಲವು ಹಿಂದುಳಿದ ರಾಜ್ಯಗಳಲ್ಲಿ ಸರಕಾರಗಳು ಬದಲಾಗುವಾಗ ತಲೆಗಳು ಉರುಳುವುದುಂಟು. ಇದಕ್ಕೆ ದಕ್ಷಿಣ ಅಮೇರಿಕೆಯ ರಾಜ್ಯಗಳೇ ತಕ್ಕ ನಿದರ್ಶನಗಳಾಗಿವೆ. ಈಚೆಗೆ ಪ್ರಗತಿಪರ ಲೋಕಸತ್ತಾತ್ಮಕ ರಾಜ್ಯಗಳು ಸರಕಾರಗಳನ್ನು ತಲೆಗಳ ಎಣಿಕೆಯ ಮೇಲೆ ಶಾಂತಯುತವಾಗಿ ಬದಲು ಮಾಡುವ ವಿಧಾನವನ್ನು ಅನುಸರಿಸಹತ್ತಿವೆ. ೧೯೪೫ರಲ್ಲಿ ಇಂಗ್ಲಂಡದ

ಕೂಲಿಕಾರ ಪಕ್ಷವು ಕಾನ್ಸರ್ವೇಟಿವ್ಹ ಪಕ್ಷವನ್ನು ಮಹಾಚುನಾವಣೆಯಲ್ಲಿ ಸೋಲಿಸಿ ತನ್ನ ಸರಕಾರವನ್ನು ರಚಿಸಿದುದು ಇತಿಹಾಸ ಪ್ರಸಿದ್ಧವಿದೆ.

ರಾಜ್ಯ ಮತ್ತು ಸರಕಾರ ಇವುಗಳ ನಡುವೆ ಇನ್ನೊಂದು ಮಹತ್ವದ ಅಂತರವಿದೆ. ಸರಕಾರವು ಕೇವಲ ಸಾರ್ವಜನಿಕ ಸೇವಕರ ಸಂಘಟನೆ, ಅದು ಎಲ್ಲ ನಾಗರಿಕರ ಮೇಲೆ ಶಾಸನ ಬದ್ಧ ರೀತಿಯಲ್ಲಿ ಅಧಿಕಾರ ಮಾಡುವ ಯಂತ್ರ. ಅದರಲ್ಲಿ ನಾಗರಿಕರು ಸಮಾವೇಶವಾಗುವದಿಲ್ಲ. ಆದರೆ ರಾಜ್ಯ ದಲ್ಲಿ ಸಾರ್ವಜನಿಕ ಸೇವಕರೂ ಮತ್ತು ನಾಗರಿಕರೂ ಸಮಾವೇಶವಾಗು ತ್ತಾರೆ. ಹಿಂದುಸ್ತಾನದ ರಾಜ್ಯವೆಂದು ಹೇಳಿದಾಗ ಹಿಂದುಸ್ತಾನದ ಸರ ಕಾರ ಮತ್ತು ಹಿಂದುಸ್ತಾನದ ನಾಗರಿಕರೆಲ್ಲರೂ ಆ ಮಾತಿನಲ್ಲಿ ಅಡಕವಾ ಗುತ್ತಾರೆ. ಆದರೆ ಹಿಂದುಸ್ತಾನದ ಸರಕಾರವೆಂದು ಹೇಳಿದಾಗ ಕೇವಲ ಹಿಂದುಸ್ತಾನದ ಸಾರ್ವಜನಿಕ ಸೇವಕರಷ್ಟೇ ಎಂದು ತಿಳಿಯಬೇಕು. ಇದೇ ರಾಜ್ಯ ಮತ್ತು ಸರಕಾರಗಳ ನಡುವಿನ ಮುಖ್ಯ ವ್ಯತ್ಯಾಸ.

ಸರಕಾರದ ರಚನೆ ಅದರ ಅಧಿಕಾರದ ಪರಿಮಿತಿ ಮತ್ತು ನಾಗರಿಕರ ಹಕ್ಕು ಬಾಧ್ಯತೆಗಳನ್ನು ನಿರ್ದೇಶಿಸುವ ರಾಜಕೀಯ ತತ್ವಗಳೂ ಸಾಂಪ್ರದಾ ಯಗಳೂ ಪ್ರತಿಯೊಂದು ರಾಜ್ಯದಲ್ಲಿ ಒಪ್ಪಿತವಾಗಿರುತ್ತವೆ, ಇಲ್ಲವೆ ಆಚರ ಣೆಯಲ್ಲಿರುತ್ತವೆ. ಹೀಗೆ ಒಪ್ಪಿತವಾದ ಇಲ್ಲವೆ ಆಚರಣೆಯಲ್ಲಿರುವ ರಾಜಕೀಯ ತತ್ವ ಮತ್ತು ಸಾಂಪ್ರದಾಯಗಳಿಗೆ ರಾಜ್ಯಘಟನೆ ಇಲ್ಲವೆ ಸಂವಿಧಾನವೆನ್ನು ತ್ತಾರೆ. ಸರಕಾರವು ಈ ಮೂಲ ಭೂತ ರಾಜಕೀಯ ತತ್ವಗಳಿಗನುಗುಣ ವಾಗಿ ವರ್ತಿಸಬೇಕಾಗುತ್ತದೆ. ನಿಜವಾಗಿ ನೋಡಿದರೆ, ಈ ಮೂಲ ಭೂತ ತತ್ವಗಳು ಸಮಾಜದಲ್ಲಿ ಒಂದಿಲ್ಲೊಂದು ಬಗೆಯಿಂದ ಗಣ್ಯಸ್ಥಾನ ಪಡೆದ ಪಂಗಡದ ಹಿತ ಸಂಬಂಧಗಳನ್ನು ರಕ್ಷಿಸುವಂಥವಾಗಿರುತ್ತವೆ. ಆ ಪಂಗಡದ ಪ್ರಾಬಲ್ಯವಿರುವ ವರೆಗೆ ಈ ತತ್ವಗಳಿಗೆ ಅನುಗುಣವಾಗಿ ವರ್ತಿಸುವ ಸರಕಾರ ಮಾತ್ರ ಅಸ್ತಿತ್ವದಲ್ಲಿರಬಲ್ಲದು. ಒಂದು ವೇಳೆ ಸರಕಾರವು ರಾಜ್ಯಘಟನೆ ಮೀರಿ ವರ್ತಿಸ ಹೋದರೆ ಪ್ರಬಲ ವಿರೋಧ ಉಂಟಾಗಿ ತನ್ನ ಅಧಿಕಾರ ಕಳೆದುಕೊಳ್ಳಬಹುದು. ಒಂದು ವೇಳೆ ಇಂದಿನ ರಾಜ್ಯಘಟನೆ ಮುರಿದ ಸರ ಕಾರವು ವಿರೋಧವನ್ನು ಹತ್ತಿಕ್ಕಿ ಹೊಸ ರಾಜಕೀಯ ತತ್ವಗಳನ್ನು ತಂದರೆ ಆಗ ರಾಜಕೀಯ ಕ್ರಾಂತಿಯಾಯಿತೆಂದು ತಿಳಿಯಬೇಕು. ರಾಜಕೀಯ ಕ್ರಾಂತಿಯೆಂದರೆ ರಾಜ್ಯದ ಮೂಲಭೂತ ತತ್ವಗಳ ಮತ್ತು ಸಾಂಪ್ರದಾಯ

ಗಳ ಅಮೂಲಾಗ್ರ ಬದಲಾವಣೆ. ಯಾವುದೇ ಒಂದು ರಾಜ್ಯಘಟನೆ ಅಸ್ತಿತ್ವ ದಲ್ಲಿರುವ ವರೆಗೆ ಸರಕಾರದ ಸ್ವರೂಪ, ಮೂಲೋದ್ದೇಶಗಳು, ಸಾಂಪ್ರದಾಯ ಗಳು ಬದಲಾಗುವುದಿಲ್ಲ ಒಂದೇ ಬಗೆಯ ರಾಜ್ಯಘಟನೆಗೆ ಅನುಗುಣವಾಗಿ ವರ್ತಿಸುವ ಅನೇಕ ಸರಕಾರಗಳು ಒಂದರ ಹಿಂದೊಂದು ಅಸ್ತಿತ್ವದಲ್ಲಿ ಬರುತ್ತ ಹೋಗಬಹುದು

೬ ಸರಕಾರದ ಅಂಗಗಳು

ಸರಕಾರವನ್ನು ಶಾಸನಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗ ಳೆಂದು ವಿಭಜಿಸುವ ರೂಢಿಯುಂಟು. ಹೀಗೆ ಬೇರೆ ಬೇರೆ ಅಂಗಗಳಲ್ಲಿ ಸರ ಕಾರವನ್ನು ವಿಂಗಡಿಸುವುದರಿಂದ ರಾಜ್ಯದಾಡಳಿತೆಯು ನ್ಯಾಯ ಸಮ್ಮತವಾ ಗುವುದೆಂಬ ತಿಳುವಳಿಕೆಯಿದೆ. ಹಿಂದಿನ ಕಾಲದಲ್ಲಿ ಶಾಸನ ನಿರ್ಮಾಣ, ಕಾರ್ಯ ನಿರ್ವಹಣೆ ಮತ್ತು ನ್ಯಾಯದಾನ ಮಾಡುವ ಕಾರ್ಯಗಳು ಒಂದೆ ಡೆಯಲ್ಲಿ ಕೇಂದ್ರಿಕೃತವಾಗಿದ್ದವು. ಅಶೋಕ, ಸಮುದ್ರಗುಪ್ತ, ಕನಿಷ್ಕ, ಹರ್ಷ, ಅಕಬರ, ಶಿವಾಜಿ ಮೊದಲಾದವರು ಶಾಸನಗಳನ್ನೂ ಮಾಡುತ್ತಿ ದ್ದರು, ನ್ಯಾಯದಾನವನ್ನೂ ಮಾಡುತ್ತಿದ್ದರು; ಇದಲ್ಲದೆ ಆಡಳಿತವನ್ನೂ ಸಾಗಿಸುತ್ತಿದ್ದರು. ಆಗ ಸರಕಾರದ ಚಟುವಟಿಕೆಗಳು ಬೇರ್ಪಡಿಸಲ್ಪಟ್ಟಿರಲಿಲ್ಲ. ಹೀಗೆ ಸರಕಾರದ ಎಲ್ಲ ಅಧಿಕಾರಗಳೂ ಒಂದೆಡೆ ಕೇಂದ್ರೀಕೃತವಾದರೆ ಅಧಿಕಾರದಲ್ಲಿರುವ ವ್ಯಕ್ತಿಗಳು ಸರ್ವಾಧಿಕಾರಿಗಳಾಗಬಹುದು. ತಮ ಗಿಂತಲೂ ಹೆಚ್ಚಿನ ಇಲ್ಲವೆ ಸರಿಗಟ್ಟುವ ಒಂದು ಸಂಸ್ಥೆಯೂ ರಾಜ್ಯದಲ್ಲಿ ಲ್ಲವಾದರೆ ಅಧಿಕಾರದಲ್ಲಿರುವ ವ್ಯಕ್ತಿಗಳಿಗೆ ಅಧಿಕಾರ ಮದವೇರಬಹುದು. ಅವರ ಆಡಳಿತೆಯು ದರ್ಪದಿಂದ ಜನರ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಬರಬ ಹುದು. ಈ ಭಯವನ್ನು ಕಡಿಮೆ ಮಾಡುವ ಉದ್ದೇಶದಿಂದ ಆಧುನಿಕ ಪ್ರಗ ತಿಪರ ರಾಜ್ಯಗಳಲ್ಲಿ ಸರಕಾರದ ಕಾರ್ಯಗಳನ್ನು ಶಾಸನಾಂಗ, ಕಾರ್ಯಾಂಗ, ಮತ್ತು ನ್ಯಾಯಾಂಗಗಳಲ್ಲಿ ಹಂಚಲಾಗಿದೆ. ಈ ಮೂರು ಅಂಗಗಳು ಸಮಾನಸ್ಕಂಧವೆಂದು ಗಣಿಸಲಾಗುತ್ತದೆ. ಆದರೂ ಇಂದಿನ ರಾಜ್ಯದಾಡ ಳಿತೆಯ ವೈವಿಧ್ಯತೆ, ವಿಶಾಲತೆ ಮತ್ತು ತೀಕ್ಷ್ಣತೆಗಳು ಕಾರ್ಯಾಂಗಕ್ಕೆ ಶಾಸನಾಂಗ, ನ್ಯಾಯಾಂಗಗಳಿಗಿಂತಲೂ ಹೆಚ್ಚು ಮಹತ್ವದ ಸ್ಥಾನಕೊಟ್ಟಿವೆ.

ಸರಕಾರದ ಕಾರ್ಯಗಳನ್ನು ಹೀಗೆ ಬೇರೆ ಬೇರೆ ಅಂಗಗಳಲ್ಲಿ ಹಂಚು ವುದರಿಂದ ಶ್ರಮ ವಿಭಜನೆಯಿಂದೊದಗುವ ಲಾಭವೂ ದೊರೆಯುತ್ತದೆ.

ಕೇವಲ ಕಾಯ್ದೆ ಮಾಡುವ ಕಾರ್ಯದಲ್ಲಿ ತೊಡಗಿದ ಶಾಸನಾಂಗವು ತನ್ನ ಕಾರ್ಯದಲ್ಲಿ ಅನುಭವವನ್ನೂ ಚಾತುರ್ಯವನ್ನೂ ಸಂಪಾದಿಸಬಲ್ಲದು. ಜನಾಭಿಪ್ರಾಯವರಿತು ಸಾಧಕ ಬಾಧಕಗಳನ್ನು ಅರಿತು ಕೂಲಂಕಷವಾಗಿ ಚರ್ಚಿಸಿ, ಶಾಸನದ ರೂಪ ರೇಷೆಗಳು ಜನಪ್ರಿಯವಾಗುವಂತೆ ಮಾಡುವ ಜಾಣ್ಮೆಯನ್ನು ಅದು ಪಡೆಯಬಲ್ಲುದು. ಇದೇ ರೀತಿ ಶಾಸನಾಂಗ ನ್ಯಾಯಾಂಗ ಗಳಿಗೆ ಹೊಣೆಯಾಗಿ ನಡೆದು ಜನರ ಪ್ರೀತಿಗಳಿಸುವ ಜಾಣ್ಮೆಯನ್ನು ಕಾರ್ಯಾಂಗವು ಸಂಪಾದಿಸಬಲ್ಲದು. ನ್ಯಾಯಾಂಗವು ಕಾಯ್ದೆಯ ಅರ್ಥ ಹಚ್ಚುವ ಕಾರ್ಯದಲ್ಲಿ ನಿಷ್ಣಾತವಾಗಬಲ್ಲದು. ಇದಲ್ಲದೆ ನ್ಯಾಯಾಂಗವು ಕಾರ್ಯಾಂಗ ಶಾಸನಾಂಗಗಳಿಗೆ ಸಮಾನಸ್ಕಂಧವಾಗಿರುವುದರಿಂದ ನಿರ್ಭಯ ದಿಂದ ತೀರ್ಪುಕೊಡಬಲ್ಲದು. ಇವರಿಂದ ಸರಕಾರ ಮತ್ತು ನಾಗರಿಕರ ನಡು ವಿನ ತಂಟೆಗಳಲ್ಲಿ ಪಕ್ಷಪಾತವಾಗುವ ಸಂಭವ ಕಡಮೆಯಾಗಬಲ್ಲದು. ಹೀಗೆ ಕಾರ್ಯವಿಭಜನೆಯಿಂದ ಸರಕಾರದ ಆಡಳಿತೆಯು ನ್ಯಾಯಸಮ್ಮತವಾಗುವು ದಲ್ಲದೆ ಅನುಭವ, ಹೊಣೆ, ದಕ್ಷತೆ ಮತ್ತು ಜಾಣ್ಮೆಯುಳ್ಳದ್ದಾಗುವುದು.

ಸರಕಾರದ ಕಾರ್ಯಗಳು ಮೂಲತಃ ಭಿನ್ನವಾಗಿರುವುದಿಲ್ಲ. ಆದರೆ ಯಾವುದೊಂದು ವಿಷಯದ ಬಗ್ಗೆ ಆಯಾ ಅಂಗಗಳು ಅನುಸರಿಸುವ ರೀತಿ ಯಿಂದ ಆ ವಿಷಯದ ಸ್ವರೂಪ ಬದಲಾಗುತ್ತದೆ. ಇಲ್ಲಿ ಆಕಸ್ಮಿಕ ದುರ್ಘ ಟನೆಗೀಡಾದ ಕೂಲಿಕಾರನಿಗೆ ಪರಿಹಾರವೊದಗಿಸುವ ವಿಷಯವನ್ನು ನಿದರ್ಶನ ಕ್ಕಾಗಿ ತೆಗೆದುಕೊಳ್ಳಬಹುದು. ಕೂಲಿಕಾರನ ಪರಿಹಾರವನ್ನು ಶಾಸನಾಂಗವು ಗೊತ್ತುಪಡಿಸಿದರೆ ಅದು ಕಾಯ್ದೆಯೆನಿಸುವುದು; ಕಾರ್ಯಾಂಗವು ಗೊತ್ತು ಪಡಿಸಿದರೆ ಅದು ಆಡಳಿತದ ನಿರ್ಣಯವೆನಿಸುವುದು; ನ್ಯಾಯಾಂಗವು ಗೊತ್ತು ಪಡಿಸಿದರೆ ತೀರ್ಪುಯೆನಿಸುವದು. ಹೀಗೆ ಮೂರು ಅಂಗಗಳೂ ಗೊತ್ತು ಪಡಿಸುವ ವಿಷಯವು ಒಂದೇಯಾಗಿದೆ. ಆದರೆ ಆ ವಿಷಯದ ಬಗ್ಗೆ ಇತ್ತ ನಿರ್ಣಯಗಳ ಅಧಿಕಾರದ ಪರಿಮಿತಿಯು ಬದಲಾಗುತ್ತದೆ. ಶಾಸನಾಂಗವು ರಾಜ್ಯಘಟನೆಯ ಪರಿಮಿತಿಯೊಳಗೆ ಬೇಕಾದ ನಿರ್ಣಯ ಕೊಡಬಲ್ಲದು. ಅದು ಕಾಯ್ದೆಯ ರೂಪದಲ್ಲಿ ಹೊರಬೀಳುತ್ತದೆ. ಅದು ಕಾರ್ಯಾಂಗ, ನ್ಯಾಯಾಂಗ, ಮತ್ತು ನಾಗರಿಕರೆಲ್ಲರಿಗೂ ಬಂಧನಕಾರಿಯಾಗಿರುತ್ತದೆ. ಕಾರ್ಯಾಂಗವು ಶಾಸನದ ಪರಿಮಿತಿಯೊಳಗೆ ಬೇಕಾದ ಆಜ್ಞೆ ಹೊರಡಿಸ ಬಹುದು. ಆದರೆ ಆ ಆಜ್ಞೆಯು ಶಾಸನಾಂಗವನ್ನಾಗಲಿ ಇಲ್ಲವೆ ನ್ಯಾಯಾಂಗ

ವನ್ನಾಗಲಿ ನಿರ್ಬಂಧಿಸಲಾರದು. ನ್ಯಾಯಾಂಗವು ರಾಜ್ಯಘಟನೆ ಮತ್ತು ಶಾಸನಗಳೆರಡರ ಶಬ್ದಾರ್ಥವನ್ನೇ ಅನುಸರಿಸಿ ತನ್ನ ತೀರ್ಪು ಕೊಡಬಲ್ಲದು. ಶಬ್ದಾರ್ಥವು ಸಂದಿಗ್ಧವಾಗಿದ್ದಾಗ ಮಾತ್ರ ಅದು ತನ್ನ ವಿಚಾರ ಸರಣಿಗೆ ಸಮ್ಮತವಾದ ನಿರ್ಣಯ ಕೊಡಲು ಸ್ವತಂತ್ರವಿರುತ್ತದೆ. ಹಾಗೆ ಮಾಡುವಾಗಲೂ ಅದು ಕಾಯ್ದೆಯ ಉದ್ದೇಶದಂತೆಯೇ ಅರ್ಥಮಾಡುತ್ತಿದೆಯೆಂದು ಸಾರುತ್ತದೆ.

ಅದರ ನಿರ್ಣಯದ ಪರಿಮಿತಿ ಸಂಕುಚಿತವಾಗಿರುತ್ತದೆ. ಹೀಗೆ ಸರಕಾರದ ಅಂಗಗಳು ಕೈಕೊಳ್ಳುವ ಕಾರ್ಯ ಮೂಲತಃ ಒಂದೇಯಾಗಿದ್ದರೂ ಆಯಾ ಅಂಗಗಳು ಆ ಕಾರ್ಯ ಮಾಡುವ ರೀತಿಯಿಂದ ಅದರ ಪರಿಮಿತಿಯು ವಿಸ್ತೃತವೂ ಇಲ್ಲವೆ ಸಂಕುಚಿತವೂ ಆಗುತ್ತದೆ.

ಇನ್ನು ಮೇಲೆ ಲೋಕಸತ್ತಾತ್ಮಕ ರಾಜ್ಯಗಳಲ್ಲಿ ಆಯಾ ಅಂಗಗಳು ಹೇಗೆ ರಚಿಸಲ್ಪಡುತ್ತವೆ ಮತ್ತು ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ವಿವರಿಸುವುದು ಅಗತ್ಯ.

**೭. ಶಾಸನಾಂಗದ ರಚನೆ.**

ಜನರ ಅಭಿಪ್ರಾಯದಂತೆ ರಾಜ್ಯದಾಡಳಿತೆಯು ನಡೆಯಬೇಕೆಂಬುದು ಲೋಕಸತ್ತಾತ್ಮಕ ರಾಜ್ಯ ಪದ್ಧತಿಯ ತಿರುಳು. ಜನರ ಅಭಿಪ್ರಾಯ ಪ್ರಕಟಪಡಿಸಲು ಜನರಿಂದ ಆರಿಸಲ್ಪಟ್ಟ ಪ್ರತಿನಿಧಿಗಳಿಂದ ಕೂಡಿದ ಶಾಸನ ಸಭೆಗಳು ಇಂದು ಎಲ್ಲ ಲೋಕಸತ್ತಾತ್ಮಕ ರಾಜ್ಯಗಳಲ್ಲಿ ನಿರ್ಮಿತವಾಗಿವೆ. ಪ್ರಾಚೀನ ಕಾಲದ ಗಣರಾಜ್ಯಗಳ ಕೇಂದ್ರ ಸಮಿತಿಗಳಲ್ಲಿ ರಾಜ್ಯದ ಎಲ್ಲ ಗಣ್ಯ ಜನರೂ ಭಾಗವಹಿಸಬಲ್ಲವರಾಗಿದ್ದರು. ಯೋಧೇಯ ಗಣರಾಜ್ಯದ ಸಮಿತಿಯಲ್ಲಿ ೭,೭೦೦ ರಾಜನ್ಯರಿದ್ದರೆಂದು ತಿಳಿದುಬಂದಿದೆ. ಅಂದಿನ ಗಣರಾಜ್ಯಗಳು ಚಿಕ್ಕವಾಗಿದ್ದುದರಿಂದ ಅದು ಸಾಧ್ಯವಿತ್ತು. ಹಿಂದುಸ್ತಾನ ಅಮೇರಿಕೆಗಳಂತಹ ಇಂದಿನ ವಿಸ್ತ್ರುತ ಗಣ ರಾಜ್ಯಗಳಲ್ಲಿ ಎಲ್ಲ ಜನರೂ ಒಟ್ಟಿಗೆ, ಸೇರಿ ಕಾಯ್ದೆ ಮಾಡುವುದಾಗಲೀ ಅಭಿಪ್ರಾಯ ವ್ಯಕ್ತ ಪಡಿಸುವುದಾಗಲಿ ಅಶಕ್ಯ. ಆದುದರಿಂದ ಜನರ ಪರವಾಗಿ ಅಭಿಪ್ರಾಯ ವ್ಯಕ್ತ ಪಡಿಸಲು ಜನರಿಂದ ಆರಿಸಲ್ಪಟ್ಟ ಪ್ರತಿನಿಧಿಗಳು ಅರ್ಹರೆಂಬ ಭಾವನೆಯ ಮೇಲೆ ಇಂದಿನ ಶಾಸನ ಸಭೆಗಳು ಏರ್ಪಟ್ಟಿವೆ. ಜನರ ಅಭಿಪ್ರಾಯವನ್ನು ಸಮರ್ಪಕವಾಗಿ ವ್ಯಕ್ತಪಡಿಸುವ ಪ್ರತಿನಿಧಿಗಳೇ ಆಯ್ಕೆ ಹೊಂದುವಂತೆ ಮಾಡಲು ವಿವಿಧ ಚುನಾವಣೆ ಪದ ತಿಗಳು ತಲೆಯೆತಿ ವೆ.

ಚುನಾವಣೆ ಪದ್ಧತಿಯು ಮೊಟ್ಟಮೊದಲು ಇಂಗ್ಲಂಡದಲ್ಲಿ ನಿಶ್ಚಿತ ಸ್ವರೂಪಕ್ಕೆ ಬಂದಿತು. ಮುಂದೆ ೧೭೮೯ರಲ್ಲಿ ಆದ ಫ್ರೆಂಚ ಮಹಾಕ್ರಾಂತಿಯ ನಂತರ ಅದು ಸಾರ್ವತ್ರಿಕವಾಯಿತು. ಮೊದಮೊದಲು ಭೂಮಿಯ ಒಡೆಯರು ಮಾತ್ರ ಪ್ರತಿನಿಧಿಗಳನ್ನು ಆರಿಸುತ್ತಿದ್ದರು. ಬರಬರುತ್ತ ಇತರ ಆಸ್ತಿಯ ಒಡೆಯರು ಪ್ರತಿನಿಧಿಗಳನ್ನು ಆರಿಸಹತ್ತಿದರು. ಆದರೆ ಈಗ ವಯಸ್ಸಿಗೆ ಬಂದ ಎಲ್ಲ ಜನರೂ ಪ್ರತಿನಿಧಿಗಳನ್ನು ಆರಿಸುವ ಅಧಿಕಾರ ಪಡೆದಿದ್ದಾರೆ. ಈ ಅಧಿಕಾರಕ್ಕೆ "ಮತದಾನದ ಹಕ್ಕು" ಎಂದು ಕರೆಯುತ್ತಾರೆ.

ರಾಜ್ಯವು ಸಕಲ ನಾಗರಿಕರ ಹಿತದ ಸಲುವಾಗಿರುವ ಸಂಸ್ಥೆಯೆನಿಸಬೇಕಾದರೆ ಎಲ್ಲ ನಾಗರಿಕರಿಗೂ ಸಮ ಮತದಾನ ಹಕ್ಕು ಇರುವದು ವಿಹಿತ. ರಾಜ್ಯದ ಹಿತಾಹಿತಗಳನ್ನು ಕೇವಲ ಆಸ್ತಿಯುಳ್ಳವರು, ಶಿಕ್ಷಣ ಪಡೆದವರು ಇಲ್ಲವೆ ವಿಶಿಷ್ಟ ವರ್ಗದವರು ಮಾತ್ರ ತಿಳಿದವರಾಗಿರುತ್ತಾರೆ. ಎಂದು ನಂಬುವದು ಕಷ್ಟ. ಶಾಸನಸಭೆಗಳಿಗೆ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಅಧಿಕಾರವು ಆಸ್ತಿಪಾಸ್ತಿಯುಳ್ಳ ಒಂದು ವಿಶಿಷ್ಟ ವರ್ಗಕ್ಕಿದ್ದರೆ ಅದು ತನ್ನ ಅಧಿಕಾರವನ್ನು ಎಲ್ಲ ಜನರ ಹಿತದೃಷ್ಟಿಯಿಂದ ಉಪಯೋಗಿಸದೆ ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸುವ ಅಂಜಿಕೆಯಿದೆ. ಕೇವಲ ಶಿಕ್ಷಣ ಹೊಂದಿದವರಿಗೆ ಮತದಾನ ಹಕ್ಕು ಇದ್ದರೆ ಅವರು ತಮ್ಮ ಸ್ವಾರ್ಥ ಸಾಧಿಸಲು ಅಶಿಕ್ಷಿತರ ಅಹಿತ ಬಗೆಯುವ ಭಯವೂ ಇದೆ. ಆಸ್ತಿಪಾಸ್ತಿಯಿಲ್ಲದವರೂ, ಅಶಿಕ್ಷಿತರೂ, ಸ್ತ್ರೀಯರೂ ಸಹ ರಾಜ್ಯದಾಡಳಿತೆಯು ಸುಗಮವಾಗಿರಬೇಕೆಂದು ಬಯಸುತ್ತಾರೆ. ಅವರು ತಮ್ಮ ಬೇಕು ಬೇಡಗಳನ್ನು ಅಸ್ಪಷ್ಟವಾಗಿಯಾದರೂ ತಿಳಿದುಕೊಂಡಿರುತ್ತಾರೆ. ರಾಜ್ಯವು ಒಂದು ವಿಶಿಷ್ಟ ವರ್ಗದ ಸೊತ್ತಲ್ಲ. ಯಾವುದೇ ನೆವದಿಂದ ನಾಗರಿಕನಿಗೆ ಮತದಾನ ಹಕ್ಕನ್ನು ನಿರಾಕರಿಸಿದರೆ ಮನುಷ್ಯನ ಸ್ವಾಭಿಮಾನವನ್ನೂ ಸ್ವತಂತ್ರ ವ್ಯಕ್ತಿತ್ವವನ್ನೂ ಅಲ್ಲಗಳೆದಂತಾಗುತ್ತದೆ. ಮತದಾನ ಹಕ್ಕು ನಾಗರಿಕನಿಗಿರುವ ಪವಿತ್ರ ಹಕ್ಕುಗಳಲ್ಲಿ ಒಂದಾಗಿದೆ.

ಒಂದು ದೇಶದ ಮತದಾರರಲ್ಲಿ ಅನೇಕ ಪ್ರಾದೇಶಿಕ ಗುಂಪುಗಳನ್ನು ಮಾಡುತ್ತಾರೆ. ಮತದಾರರ ಗುಂಪಿನ ಒಂದು ಮತದಾರ ಕ್ಷೇತ್ರದಿಂದ

ಒಬ್ಬ ಪ್ರತಿನಿಧಿಯನ್ನೇ ಆಯ್ಕೆ ಮಾಡುತ್ತಿದ್ದರೆ ಏಕ ಪ್ರತಿನಿಧಿ ಮತದಾರ ಕ್ಷೇತ್ರವೆನ್ನುತ್ತಾರೆ.

ಬ್ರಿಟಿಷರ ಆಳಿಕೆಯ ಕಾಲದಲ್ಲಿ ಹಿಂದುಸ್ತಾನದಲ್ಲಿ ಉದ್ದಿಮೆ, ವ್ಯವಸಾಯ, ಜಾತಿ, ಪಂಥ, ವರ್ಗಗಳಿಗನುಗುಣವಾದ ಪ್ರತ್ಯೇಕ ಮತದಾರ ಕ್ಷೇತ್ರಗಳಿದ್ದವು. ವಿಶ್ವವಿದ್ಯಾಲಯಗಳು, ಉದ್ದಿಮೆಗಾರರ ಸಂಘಗಳು, ಆ್ಯಂಗ್ಲೋ ಇಂಡಿಯನ್ನರು, ಕ್ರೈಸ್ತರು, ಮುಸಲ್ಮಾನರು, ಶೀಖರು, ಹರಿಜನರು, ಕೂಲಿಕಾರರು ಮೊದಲಾದವರು ತಮ್ಮ ತಮ್ಮ ಪ್ರತ್ಯೇಕ ಮತದಾರ ಕ್ಷೇತ್ರಗಳಿಂದ ಪ್ರತಿನಿಧಿಗಳನ್ನು ಆರಿಸಿ ಕಳಿಸುತ್ತಿದ್ದರು. ಇಂತಹ ಮತದಾರ ಕ್ಷೇತ್ರಗಳು ರಾಷ್ಟ್ರದ ಐಕ್ಯತೆಯ ದೃಷ್ಟಿಯಿಂದ ಅನಿಷ್ಟಕಾರಕ. ಶಾಸನ ಸಭೆಗಳು ದೇಶದ ಎಲ್ಲ ಬಗೆಯ ಹಿತಸಂಬಂಧ ಮತ್ತು ಅಭಿಪ್ರಾಯಗಳ ಸಂಕಲನ ಮಾತ್ರವಲ್ಲ. ಅದು ರಾಜ್ಯದ ಎಲ್ಲ ನಾಗರಿಕರ ಸಾಮೂಹಿಕ ಹಿತರಕ್ಷಕ ಸಂಸ್ಥೆ. ಹಲವಾರು ಸಂಘ, ಸಂಸ್ಥೆ, ಜಾತಿ, ಪಂಥಗಳ ಪ್ರತಿನಿಧಿಗಳು ರಾಷ್ಟ್ರದ ಸಾಮೂಹಿಕ ಹಿತವನ್ನು ಲಕ್ಷಿಸದೆ ತಮ್ಮ ವಿಶಿಷ್ಟ ಹಿತವನ್ನೇ ಮುಂಪೆ ಮಾಡಿದರೆ ಎಲ್ಲರಿಗೂ ಹಿತಕಾರಿಯಾದ ಉತ್ತಮ ಶಾಸನಗಳು ಹೊರಬೀಳಲಾರವು. ಆದುದರಿಂದ ಪ್ರಗತಿಪರ ರಾಜ್ಯಗಳು ಪ್ರತ್ಯೇಕ ಮತದಾರ ಕ್ಷೇತ್ರಗಳನ್ನು ನಿರ್ಮಿಸುವದಿಲ್ಲ. ಇಂದಿನ ಹಿಂದುಸ್ತಾನ ರಾಜ್ಯ ಘಟನೆಯು ಪ್ರತ್ಯೇಕ ಮತದಾರ ಕ್ಷೇತ್ರಗಳನ್ನು ತೆಗೆದುಹಾಕಿದೆ.

ಈಗ ಪ್ರಾದೇಶಿಕ ಮತದಾರ ಕ್ಷೇತ್ರಗಳೇ ಹೆಚ್ಚು ಪ್ರಚಲಿತವಿದೆ. ಇಂತಹ ಪ್ರತಿಯೊಂದು ಮತದಾರ ಕ್ಷೇತ್ರದಲ್ಲಿ ನಾನಾ ಬಗೆಯ ಜನರು ವಾಸವಾಗಿರುತ್ತಾರೆ. ಒಂದು ಸ್ಥಳದಲ್ಲಿ ಕೂಲಿಕಾರರು ಬಹು ಸಂಖ್ಯಾತರಿರಬಹುದು, ಇನ್ನೊಂದು ಸ್ಥಳದಲ್ಲಿ ಒಕ್ಕಲಿಗರು ಹೆಚ್ಚಾಗಿರಬಹುದು; ಒಂದು ಸ್ಥಳದಲ್ಲಿ ಪಟ್ಟಣಿಗರೂ ವಿದ್ಯಾವಂತರೂ ಹೆಚ್ಚಾಗಿರಬಹುದು; ಇನ್ನೊಂದು ಸ್ಥಳದಲ್ಲಿ ಹಳ್ಳಿಗರೂ ಅವಿದ್ಯಾವಂತರೂ ಹೆಚ್ಚಾಗಿರಬಹುದು; ಒಂದು ಸ್ಥಳದಲ್ಲಿ ಸಾಹುಕಾರರು ಹೆಚ್ಚಾಗಿ ವಾಸಿಸುತ್ತಿರಬಹುದು; ಇನ್ನೊಂದು ಸ್ಥಳದಲ್ಲಿ ಬಡವರು ಹೆಚ್ಚಾಗಿ ವಾಸಿಸುತ್ತಿರಬಹುದು. ಆದರೆ ಯಾವುದೊಂದು ಸ್ಥಳದಲ್ಲಿ ಒಂದೇ ಬಗೆಯ ಜನರು ಇದ್ದುದು ಕಂಡು ಬರುವುದಿಲ್ಲ. ಆದುದರಿಂದ ಶಾಸನ ಸಭೆಯ ಪ್ರತಿನಿಧಿಯನ್ನಾರಿಸುವಾಗ ಸ್ಥಳಿಕ ವಾತಾವರಣವನ್ನು ಅಲ

ಕ್ಷಿಸದೆ ಇದ್ದರೂ ರಾಷ್ಟ್ರದ ಸಾಮಾನ್ಯ ಹಿತವನ್ನು ಕೆಲಮಟ್ಟಿಗೆ ಲಕ್ಷಿಸಬಹುದು. ಚುನಾವಣೆಯ ಪ್ರಚಾರದಲ್ಲಿ ಉಮೇದವಾರರು ಎಲ್ಲ ಜನರನ್ನೂ ಸಂದರ್ಶಿಸಿ ಮತ ಕೇಳಬೇಕಾಗವುದರಿಂದ ಜಾತಿ ಪಂಥಗಳ ಪ್ರತ್ಯೇಕತೆಯ ತೀಕ್ಷ್ಣ ತೆಯು ಕೆಲಮಟ್ಟಿಗಾದರೂ ಕಡಮೆಯಾಗಬಲ್ಲುದು. ಆದುದರಿಂದ ಪ್ರಾದೇಶಿಕ ಮತದಾರ ಕ್ಷೇತ್ರಗಳು ರಾಷ್ಟ್ರಹಿತಕ್ಕೆ ಹೆಚ್ಚು ಅನುಕೂಲವಾಗಿವೆ.

ವಯಸ್ಕ ಮತದಾರರ ಯಾದಿಯನ್ನು ಸಿದ್ಧಪಡಿಸುವಹೊಣೆ ಸರಕಾರದ್ದು. ಅದನ್ನು ಪ್ರಾಮಾಣಿಕತೆಯಿಂದ ಸಿದ್ಧಪಡಿಸಬೇಕಾಗುತ್ತದೆ. ಅನ್ಯದೇಶಿಯರು, ಹುಚ್ಚರು, ದಿವಾಳಿಯಾದವರು, ಬಾಲಕರು, ಚುನಾವಣೆಯ ಅಪರಾಧವೆಸಗಿದವರು ಮೊದಲಾದವರು ಮತದಾರರಾಗಲಾರರು. ಮತದಾರರ ಕಚ್ಚಾಯಾದಿಯನ್ನು ಸಕಾಲದಲ್ಲಿ ಸಾರ್ವಜನಿಕರ ಅವಗಾಹನೆಗೆ ತರಲಾಗುತ್ತದೆ. ಮುಂದೆ ತಿದ್ದುಪಡೆಗಳಾದ ಮೇಲೆ ಅಧಿಕೃತ ಮತದಾರ ಯಾದಿಯು ತಯ್ಯಾರಿಸಲ್ಪಡುತ್ತದೆ.

ಶಾಸನಸಭೆಗೆ ಪ್ರತಿನಿಧಿಯಾಗಿ ಆಯ್ಕೆಹೊಂದ ಬಯಸುವವರು ಆಯಾ ಕ್ಷೇತ್ರದ ಚುನಾವಣೆಯ ಅಧಿಕಾರಿಗೆ ತಮ್ಮ ಉಮೇದವಾರಿಕೆಯ ಪತ್ರ ಸಲ್ಲಿಸುತ್ತಾರೆ. ಉಮೇದವಾರರು ಮತದಾರರಾಗಿರಬೇಕು. ಅವರು ಸರಕಾರದ ಸೇವಕರಾಗಿರಕೂಡದು; ಇಲ್ಲವೆ ಸರಕಾರದ ಸಂಗಡ ಗುತ್ತಿಗೆಯ ವ್ಯವಹಾರ ನಡೆಯಿಸುವವರಾಗಕೂಡದು. ಅರ್ಹತೆಯುಳ್ಳ ಉಮೇದವಾರರಿಗೆ ಚುನಾವಣೆ ಸ್ಪರ್ಧಿಸಲು ಅನುಮತಿ ದೊರೆಯುವುದು.

ಮತದಾನವು ಗುಪ್ತರೀತಿಯಿಂದ ನಡೆಯುತ್ತದೆ. ಒಂದು ವೇಳೆ ಅದು ಬಹಿರಂಗವಾಗಿ ನಡೆದರೆ ಮತದಾರರು ಆಯಾ ಪಕ್ಷದವರ ವಿರೋಧ ಕಟ್ಟಿಕೊಳ್ಳುವ ಅಂಜಿಕೆಯಿರುತ್ತದೆ. ಗುಪ್ತ ಮತದಾನ ಪದ್ಧತಿಯಲ್ಲಿ ಇಂಥ ಮತದಾರನು ಇಂಥವರಿಗೇ ಮತದಾನ ಮಾಡಿದ್ದಾನೆಂದು ಯಾರಿಗೂ ತಿಳಿಯುವುದೇ ಇಲ್ಲ.

ಪ್ರತಿಯೊಂದು ಕ್ಷೇತ್ರದಲ್ಲಿ ಮತದಾರರು ಮತದಾನ ಮಾಡಲು ಅನುಕೂಲವಾಗುವಂತೆ ಹಲವಾರು ಮತಗಟ್ಟೆಗಳನ್ನು ಏರ್ಪಡಿಸುತ್ತಾರೆ. ಪ್ರತಿಯೊಂದು ಮತಗಟ್ಟೆಯಲ್ಲಿಯೂ ಒಬ್ಬ ಮೇಲ್ವಿಚಾರಕ ಅಧಿಕಾರಿ ಇರುತ್ತಾನೆ. ಮತದಾನ ಮುಗಿದ ಕೂಡಲೆ ಮತ ಹಾಕಿದ ಪೆಟ್ಟಿಗೆಗಳನ್ನು ಅವನು ಸುರ

ಕ್ಷಿತವಾಗಿ ಚುನಾವಣೆಯ ಅಧಿಕಾರಿ ಕಡೆಗೆ ಮುಟ್ಟಿಸುತ್ತಾನೆ. ಅಲ್ಲಿ ಉಮೇದ ವಾರರ ಸಮಕ್ಷಮ ಮತಗಳ ಎಣಿಕೆಯಾಗಿ ಹೆಚ್ಚು ಮತ ದೊರಕಿಸಿದ ಉಮೇದವಾರನು ಶಾಸನಸಭೆಯ ಪ್ರತಿನಿಧಿಯಾಗಿ ಆಯ್ಕೆ ಹೊಂದಿದನೆಂದು ಚುನಾವಣೆಯ ಅಧಿಕಾರಿಯು ಸಾರುತ್ತಾನೆ. ಹೀಗೆ ಶಾಸನಸಭೆಗೆ ದೇಶದ ಎಲ್ಲ ಮತದಾರ ಕ್ಷೇತ್ರಗಳಿಂದಲೂ ಪ್ರತಿನಿಧಿಗಳ ಆಯ್ಕೆ ನಡೆಯುತ್ತದೆ. ಸಾರ್ವತ್ರಿಕ ಚುನಾವಣೆಯು ಬಹುತರವಾಗಿ ನಾಲ್ಕು ಇಲ್ಲವೆ ಐದು ವರ್ಷಗಳಿಗೊಮ್ಮೆ ಏಕಕಾಲಕ್ಕೆ ನಡೆಯುತ್ತದೆ. ಚುನಾವಣೆಯನ್ನು ನಿಷ್ಪಕ್ಷಪಾತ ದಿಂದಲೂ ದಕ್ಷತೆಯಿಂದಲೂ ನಡೆಯಿಸುವ ಹೊಣೆ ಸರಕಾರದ ಆಡಳಿತಗಾರರ ಮೇಲಿರುತ್ತದೆ. ಜನರೂ ಅವರ ಸಂಗಡ ಸಹಕರಿಸಬೇಕಾಗುತ್ತದೆ. ಆಂದರೆ ಮಾತ್ರ ಚುನಾವಣೆಯು ಸುಸೂತ್ರ ಜರುಗಿ ಜನಪ್ರಿಯ ಶಾಸನ ಸಭೆಯು ರಚಿಸಲ್ಪಡಬಹುದು.

**೮. ಶಾಸನಾಂಗದಲ್ಲಿ ರಾಜಕೀಯ ಪಕ್ಷಗಳ ಪಾತ್ರ.**

ಸಾಮಾನ್ಯವಾಗಿ ಉಮೇದವಾರರು ರಾಜಕೀಯ ಪಕ್ಷಗಳ ಪರವಾಗಿ ಚುನಾವಣೆ ಸ್ಪರ್ಧಿಸುತ್ತಾರೆ. ಕೆಲವರು ಸ್ವತಂತ್ರವಾಗಿಯೂ ನಿಲ್ಲುತ್ತಾರೆ. ಆದರೆ ಸ್ವತಂತ್ರ ಹುರಿಯಾಳುಗಳು ಚುನಾವಣೆಯಲ್ಲಿ ಯಶಸ್ವಿಯಾಗುವ ಸಂಭವ ಕಡಮೆಯಾಗಹತ್ತಿದೆ. ರಾಜಕೀಯ ಪಕ್ಷಗಳ ಬೆಂಬಲವಿರುವ ಹುರಿಯಾಳುಗಳೇ ಹೆಚ್ಚಾಗಿ ಆಯ್ಕೆ ಹೊಂದುತ್ತಾರೆ. ಇದಕ್ಕೆ ಕಾರಣವಿದೆ.

ಇದು ಶ್ರಮ ವಿಭಜನೆಯ ತತ್ವದ ಮೇಲೆ ಕಟ್ಟಲ್ಪಟ್ಟ ಸಂಘಟನೆಯ ಯುಗ. ಜನರು ಬಹುತರವಾಗಿ ತಮ್ಮ ಉದ್ಯೋಗ, ವ್ಯವಸಾಯ, ಅಭಿರುಚಿಗಳಲ್ಲಿ ಆಸಕ್ತರಾಗಿರುತ್ತಾರೆ. ರಾಜಕಾರಣದಲ್ಲಿ ಅವರು ಅಷ್ಟೊಂದು ಆಸಕ್ತಿವುಳ್ಳವರಾಗಿರುವುದಿಲ್ಲ. ಚುನಾವಣೆಯ ಸಮಯದಲ್ಲಿ ಅವರ ಮನವೊಲಿಸಿ ಮತಗಟ್ಟೆಗೆ ಹೋಗಿ ಮತದಾನ ಮಾಡುವಂತೆ ಮಾಡುವುದು ಬಹಳ ಪ್ರಯಾಸದ ಕಾರ್ಯ. ಇದಲ್ಲದೆ ಚುನಾವಣೆಯಾದನಂತರ ಮುಂದಿನ ಚುನಾವಣೆ ಬರುವ ವರೆಗೆ ರಾಜ್ಯದಾಡಳಿತೆಯು ಸರಿಯಾದ ದಿಶೆಯಲ್ಲಿ ಸಾಗಿದೆಯೋ ಹೇಗೆ ಎಂಬುದನ್ನು ಜನರಿಗೆ ತಿಳಿಸುತ್ತ ಹೋಗುವುದು ಸಹ ಬಹಳ ಪ್ರಯಾಸದ ಕಾರ್ಯ. ಈ ಕಾರ್ಯವನ್ನು ಒಬ್ಬ ಸ್ವತಂತ್ರ ವ್ಯಕ್ತಿಯು ಬಿಟ್ಟುಬಿಡದೆ ಮಾಡುತ್ತ ಹೋಗುವುದು ದುಸ್ತರ. ಆದುದರಿಂದ

ರಾಜಕಾರಣವೇ ತಮ್ಮ ಉದ್ಯೋಗವೆಂದು ತಿಳಿದ ಅನೇಕ ನಾಗರಿಕರು ಸಂಘಟಿತರಾಗಿ ಈ ಕಾರ್ಯದಲ್ಲಿ ತತ್ಪರರಾಗಬೇಕಾಗುತ್ತದೆ. ಆಯಾ ಮತದಾರ ಕ್ಷೇತ್ರಗಳಲ್ಲಿ ಪ್ರತ್ಯೇಕ ಸಂಘಟನೆಗಳು ಮಾಡುವ ಪ್ರಯತ್ನವೂ ನಿಷ್ಫಲ. ಏಕೆಂದರೆ, ವಿವಿಧ ಸ್ಥಳಿಕ ಗೊತ್ತುಗುರಿಗಳನ್ನಿಟ್ಟುಕೊಂಡು ಆರಿಸಿ ಬಂದ ಪ್ರತಿನಿಧಿಗಳ ಅಭಿಪ್ರಾಯಕ್ಕೆ ಬಹುಮತ ದೊರೆಯುವುದು ಕಠಿಣ. ಶಾಸನ ಸಭೆಗಳು ಬಹುಮತ ತತ್ವದಮೇಲೆ ಕಾರ್ಯ ಮಾಡುತ್ತವೆ. ಯಾವುದೊಂದು ಸಮಸ್ಯೆಯ ಬಗ್ಗೆ ಶಾಸನ ಸಭೆಯ ಪ್ರತಿನಿಧಿಗಳಲ್ಲಿ ಬಹುಸಂಖ್ಯಾತರು ಯಾವ ಯಾವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆಯೋ ಅದರಂತೆ ನಿರ್ಣಯವಾಗುತ್ತದೆ. ಅಂದಮೇಲೆ ಕೆಲವು ರಾಜಕೀಯ ಗೊತ್ತುಗುರಿಗಳ ಬಗ್ಗೆ ಒಮ್ಮತವುಳ್ಳ ಪ್ರತಿನಿಧಿಗಳು ಶಾಸನ ಸಭೆಯಲ್ಲಿ ಬಹುಸಂಖ್ಯಾತರಾಗಿದ್ದರೆ ಮಾತ್ರ ರಾಜ್ಯದಾಡಳಿತೆಯು ಒಂದು ನಿಶ್ಚಿತ ದಿಶೆಯಲ್ಲಿ ಸಾಗುತ್ತದೆ. ಆದುದರಿಂದ ಶಾಸನ ಸಭೆಯಲ್ಲಿ ಬಹುಮತ ಪಡೆಯುವ ಉದ್ದೇಶದಿಂದ ಆಯಾ ಮತದಾರ ಕ್ಷೇತ್ರಗಳ ರಾಜಕಾರಣಿಗಳ ಸಂಘಗಳು ಒಂದುಗೂಡಬೇಕಾಗುತ್ತದೆ. ಹೀಗೆ ದೇಶದಾದ್ಯಂತ ಕಾರ್ಯ ಮಾಡುವ ರಾಜಕೀಯ ಪಕ್ಷಗಳು ಅವಶ್ಯವಿರುತ್ತವೆ.

ಒಂದು ವಿಶಿಷ್ಟ ರಾಜಕೀಯ ಕಾರ್ಯಕ್ರಮವನ್ನು ಆಚರಣೆಯಲ್ಲಿ ತರುವ ಉದ್ದೇಶದಿಂದ ರಾಜ ಸೂತ್ರಗಳನ್ನು ದೊರಕಿಸಲು ಒಮ್ಮತದಿಂದ ಪ್ರಯತ್ನಿಸುವ ನಾಗರಿಕರ ಸಂಸ್ಥೆಗೆ ರಾಜಕೀಯ ಪಕ್ಷವೆಂದು ಕರೆಯುತ್ತಾರೆ. ಹಿಂಸಾತ್ಮಕ ಕ್ರಾಂತಿಯಿಂದ ರಾಜಸೂತ್ರಗಳನ್ನು ದೊರಕಿಸ ಬಯಸುವ ರಾಜಕೀಯ ಪಕ್ಷಗಳೂ ಇರುತ್ತವೆ. ಶಾಸನ ಸಭೆಯ ಬಹುಮತದ ಬೆಂಬಲದ ಮೂಲಕ ರಾಜಸೂತ್ರಗಳನ್ನು ದೊರಕಿಸುವ ರಾಜಕೀಯ ಪಕ್ಷಗಳೂ ಇರುತ್ತವೆ. ಲೋಕಸತ್ತಾತ್ಮಕ ರಾಜ್ಯದ ಸುರಕ್ಷತೆಯ ದೃಷ್ಟಿಯಿಂದ ದೇಶದಲ್ಲಿ ಘಟನಾಬದ್ಧವಾಗಿ ಕಾರ್ಯ ಮಾಡುವ ರಾಜಕೀಯ ಪಕ್ಷಗಳಿರುವುದು ಉತ್ತಮ.

ರಾಷ್ಟ್ರದಲ್ಲಿ ವಿವಿಧ ಹಿತ ಸಂಬಂಧಗಳಿರುತ್ತವೆ. ಆಯಾ ಹಿತ ಸಂಬಂಧಗಳಿಗೆ ಒಪ್ಪಿತವಾದ ಹಲವಾರು ರಾಜಕೀಯ ಕಾರ್ಯಕ್ರಮಗಳು ರೂಪುಗೊಳ್ಳುತ್ತವೆ. ಅವುಗಳಲ್ಲಿ ಏಕ ರೂಪತೆಯನ್ನು ಬಯಸುವುದು ಅವ್ಯವ

ಹಾರ್ಯ್. ಉದ್ದಿಮೆದಾರರು ಇಟ್ಟುಕೊಂಡ ಕಾರ್ಯಕ್ರಮವು ಕೂಲಿಕಾರರಿಗೆ ಸರಿಬರಲಿಕ್ಕಿಲ್ಲ; ಜಮೀನುದಾರರು ಇಟ್ಟುಕೊಂಡ ಕಾರ್ಯಕ್ರಮವು ಒಕ್ಕಲಿಗರಿಗೆ ಸರಿಬರಲಿಕ್ಕಿಲ್ಲ; ಬಿಳಿಯರು ಇಟ್ಟುಕೊಂಡ ಕಾರ್ಯಕ್ರಮವು ಕಪ್ಪು ಜನಾಂಗದವರಿಗೆ ಸರಿಬರಲಿಕ್ಕಿಲ್ಲ. ಆದುದರಿಂದ ವಿವಿಧ ಹಿತ ಸಂಬಂಧಗಳುಳ್ಳ ನಾಗರಿಕರು ವಿವಿಧ ರಾಜಕೀಯ ಪಕ್ಷಗಳನ್ನು ಕಟ್ಟಿಕೊಳ್ಳುವುದುಂಟು. ಹೀಗೆ ಬೇರೆ ಬೇರೆ ರಾಜಕೀಯ ಕಾರ್ಯಕ್ರಮಗಳುಳ್ಳ ರಾಜಕೀಯ ಪಕ್ಷಗಳಿಗೆಲ್ಲ ಚುನಾವಣೆಯಲ್ಲಿ ಸ್ಪರ್ಧಿಸಲು ಸ್ವಾತಂತ್ರ್ಯವಿರಬೇಕು.

ಹಿಂದಕ್ಕೆ ವಿರೋಧಿ ಸಂಗಡಗಳ ಭಿನ್ನಾಭಿಪ್ರಾಯಗಳು ರಣರಂಗದ ಜಯಾಪಜಯಗಳಿಂದ ತೀರ್ಮಾನಿಸಲ್ಪಡುತ್ತಿದ್ದವು. ಇಂದು ಅವು ಜನರ ಮತಗಳಮೇಲೆ ತೀರ್ಮಾನಿಸಲ್ಪಡುತ್ತವೆ. ಯುದ್ಧವು ಮನುಷ್ಯನ ಅನಾಗರಿಕತೆಯ ಗುರುತಾದರೆ ಚುನಾವಣೆಯು ನಾಗರಿಕತೆಯ ಗುರುತು. ಚುನಾವಣೆಗಳಲ್ಲಿ ಸ್ಪರ್ಧಿಸುವ ಎಲ್ಲ ಪಕ್ಷಗಳೂ ರಾಜ್ಯಘಟನೆಯ ಮೂಲಭೂತ ತತ್ವಗಳನ್ನು ಮನ್ನಿಸುವ ವರೆಗೆ ಯುದ್ಧದ ಭಯವಿಲ್ಲ. ಆದರೆ ಆರ್ಥಿಕ ಸ್ಥಿತಿಯು ಹದಗೆಟ್ಟ ರಾಷ್ಟ್ರಗಳಲ್ಲಿ, ಅಂಧಃಶ್ರದ್ಧೆಯಲ್ಲಿ ನುಳುಗಿದ ರಾಷ್ಟ್ರಗಳಲ್ಲಿ, ಭಿನ್ನಾಭಿಪ್ರಾಯ ಸಹಿಸುವ ಸಂಸ್ಕೃತಿಯು ಬೆಳೆಯದೆ ಇದ್ದ ರಾಷ್ಟ್ರಗಳಲ್ಲಿ ಸರ್ವಾಧಿಕಾರಿ ಮನೋವೃತ್ತಿಯ ಕ್ರಾಂತಿಕಾರಕ ಪಕ್ಷಗಳು ಹುಟ್ಟಿಕೊಂಡು ಚುನಾವಣೆಯ ಪದ್ಧತಿಯನ್ನು ಅಪಹಾಸ್ಯಕ್ಕೀಡುಮಾಡಿದ ನಿದರ್ಶನಗಳೂ ಉಂಟು.

ಸೋವ್ಹಿಯಟ್ ರಶಿಯಾದ ಚುನಾವಣೆ ಪದ್ಧತಿಯ ನಿದರ್ಶನವನ್ನು ಇಲ್ಲಿ ತೆಗೆದುಕೊಳ್ಳಬಹುದು. ಅಲ್ಲಿ ನಾಗರಿಕರು ತಮ್ಮ ಇಚ್ಛೆಗೆ ಬಂದಂತೆ ಚುನಾವಣೆಗೆ ನಿಲ್ಲಲು ಬರುವದಿಲ್ಲ. ಸ್ಥಳಿಕ ಕಮ್ಯುನಿಸ್ಟ ಪಕ್ಷವಾಗಲೀ, ಇಲ್ಲವೆ ಒಂದಿಲ್ಲೊಂದು ಸಾಮಾಜಿಕ ಸಂಸ್ಥೆಯಾಗಲೀ ಉಮೇದವಾರರನ್ನು ಸೂಚಿಸಬಹುದು. ಅಲ್ಲಿಯ ಪ್ರತಿಯೊಂದು ಸಾಮಾಜಿಕ ಸಂಸ್ಥೆಯಲ್ಲಿಯೂ ಕಮ್ಯೂನಿಸ್ಟ ಪಕ್ಷದ ಕೈವಾಡವಿದ್ದೇ ಇರುತ್ತದೆ. ಆದುದರಿಂದ ಉಮೇದವಾರರನ್ನು ಕಮ್ಯೂನಿಸ್ಟರ ಸಮ್ಮತಿಯಿಂದಲೇ ಸೂಚಿಸಲಾಗುತ್ತಿದೆ. ಇಂತಹ ಸೂಚನೆಗಳು ಚುನಾವಣೆಯ ಅಧಿಕಾರಿ ಮಂಡಳಕ್ಕೆ ಕಳಿಸಲಾಗುತ್ತವೆ.

ಸೂಚನೆಗಳ ಸಂಗಡ ಆಯಾ ಸಂಸ್ಥೆಗಳು ಉಮೇದವಾರರ ಪೂರ್ವಾಪರ ಇತಿಹಾಸವನ್ನೂ ಸಹ ತಿಳಿಸಬೇಕಾಗುತ್ತದೆ. ಚುನಾವಣೆಯ ಮಂಡಳಗಳು ಆಯಾ ಉಮೇದವಾರರನ್ನು ಬರಮಾಡಿಕೊಂಡು ಒಂದು ಮತದಾರ ಕ್ಷೇತ್ರಕ್ಕೆ ಒಬ್ಬನೇ ಉಮೇದವಾರನಿರುವಂತೆ ಒಡಂಬಡಿಕೆಯನ್ನು ಮಾಡಿಸುತ್ತವೆ. ಮುಂದೆ ಚುನಾವಣೆಯ ಕಾಲಕ್ಕೆ ಮತ ಪತ್ರದ ಮೇಲೆ ಒಬ್ಬ ಉಮೇದವಾರನ ಹೆಸರೇ ಇರುತ್ತದೆ. ಮತದಾರರು ತಮಗೆ ಆ ಉಮೇದವಾರನು ಬೇಡಾಗಿದ್ದರೆ ಅವನ ಹೆಸರಿನ ಮೇಲೆ ಗೆರೆಯೆಳೆದು ಅಸಮ್ಮತಿ ವ್ಯಕ್ತ ಮಾಡಬಹುದು. ಆದರೆ ಹೀಗಾಗುವ ಸಂಭವ ಕಡಮೆ. ಏಕೆಂದರೆ ಚುನಾವಣೆ ನಡೆಯುವ ಪೂರ್ವದಲ್ಲಿ ಕಮ್ಯೂನಿಷ್ಟ ಪಕ್ಷದ ಕಾರ್ಯಕರ್ತರೂ ಇತರ ಸಂಘ-ಸಂಸ್ಥೆಗಳೂ, ವರ್ತಮಾನಪತ್ರಗಳೂ, ಆಕಾಶವಾಣಿಯ ಸುದ್ದಿಗಳೂ, ಹಗಲಿರುಳು ಒಬ್ಬನೇ ಒಬ್ಬ ಉಮೇದವಾರನ ಗುಣಗಾನ ಮಾಡುತ್ತಿರುತ್ತವೆ. ಅದನ್ನು ವಿರೋಧಿಸುವವರಿಗೆ ಆಸ್ಪದವೇ ಇರುವದಿಲ್ಲ. ಆದುದರಿಂದ ಉಮೇದವಾರನ ವೈಯಕ್ತಿಕ ವಿರೋಧಿಗಳ ಹೊರತು ಇತರ ಯಾವ ನಾಗರಿಕರಿಗೂ ಉಮೇದವಾರನು ಬೇಡವೆನ್ನುವ ವಿಚಾರ ಬರುವದೇ ಇಲ್ಲ. ಹೀಗೆ ಪ್ರಚಾರ ಬಲದಿಂದ ಜನಪ್ರಿಯನಾದ ಉಮೇದವಾರನನ್ನು ಆಯ್ಕೆ ಮಾಡಲು ಜನರು ಮತಗಟ್ಟೆಗಳಿಗೆ ಹೋಗಿ ಮತದಾನ ಮಾಡಿದರೆ ಅವರು ಲೆನಿನ್ ಸ್ಟ್ಯಾಲಿನ್‌ರು ನಿರ್ಮಾಣ ಮಾಡಿದ ಮಹಾನ್ ರಾಷ್ಟ್ರಕ್ಕೆ ತಮ್ಮ ಸೇವೆ ಸಲ್ಲಿಸಿದಂತಾಗುತ್ತದೆಂದು ಅವರನ್ನು ಹುರಿದುಂಬಿಸಲಾಗುತ್ತದೆ. ೧೯೪೭ರಲ್ಲಾದ ರಶಿಯಾದ ಚುನಾವಣೆಯಲ್ಲಿ ಸುಮಾರು ನೂರಕ್ಕೆ ೯೯.೭ ರಷ್ಟು ಜನರು ಮತದಾನ ಮಾಡಿದರೆಂದು ವರದಿಯಾಗಿದೆ. ಇಲ್ಲಿ ಮತದಾನ ಮಾಡಿದ ನಾಗರಿಕರ ಸಂಖ್ಯೆಗಿಂತಲೂ ಉಮೇದವಾರರನ್ನು ಸೂಚಿಸುವ ಪದ್ಧತಿಯೇ ಹೆಚ್ಚು ಮಹತ್ವದ್ದಾಗಿದೆ. ಕಮ್ಯುನಿಷ್ಟ ಪಕ್ಷದ ಸಮ್ಮತಿ ಪಡೆಯದ ಒಬ್ಬನೂ ಸಹ ಶಾಸನಸಭೆಗೆ ಆಯ್ಕೆ ಹೊಂದಲಾರನು. ಅಂದ ಮೇಲೆ ರಶಿಯಾದ ನಾಗರಿಕರಿಗೆ ಮತದಾನ ಹಕ್ಕು ಇದ್ದರೂ ವಿವಿಧ ರಾಜಕೀಯ ಪಕ್ಷಗಳನ್ನು ಕಟ್ಟಿಕೊಳ್ಳುವ ಹಕ್ಕು ಇರದ್ದರಿಂದ ಅವರ ರಾಜಕೀಯ ಸ್ವಾತಂತ್ರ್ಯ ಅಪರಿಪೂರ್ಣವಾಗಿದೆಯನ್ನಬಹುದಲ್ಲವೇ?

ವಿವಿಧ ರಾಜಕೀಯ ಪಕ್ಷಗಳಿರುವುದು ನಾಗರಿಕರ ಸ್ವಾತಂತ್ರ್ಯದ ದೃಷ್ಟಿಯಿಂದ ಅವಶ್ಯವೆಂದು ಹಲವು ರಾಜಕೀಯ ತಜ್ಞರ ಮತ. ಒಂದು ಪಕ್ಷದವರು ಮುಂದೆ ಮಾಡುವ ಕಾರ್ಯಕ್ರಮ ಮತ್ತು ವಾದಗಳನ್ನು ಪ್ರತಿ ಪಕ್ಷದವರು ನಿರ್ಭಯದಿಂದ ಟೀಕಿಸುತ್ತಿದ್ದರೆ ನಾಗರಿಕರು ದೇಶದ ಎದುರಿಗಿರುವ ಸಮಸ್ಯೆಗಳನ್ನು ಸರಿಯಾಗಿ ತಿಳಿದುಕೊಳ್ಳಲು ಆಸ್ಪದವಾಗುತ್ತದೆ. ನಾಗರಿಕರು ವಂಚಕರ ಅಪಪ್ರಚಾರಕ್ಕೆ ಕೆಲ ಕಾಲದ ವರೆಗೆ ಬಲಿ ಬೀಳುವ ಸಂಭವವಿರುವುದಾದರೂ, ಬರಬರುತ್ತ ಅವರು ರಾಜಕೀಯ ಪ್ರಜ್ಞೆಯುಳ್ಳವರಾಗಬಹುದು. ಪ್ರತಿಪಕ್ಷವಿದ್ದರೆ ಅಧಿಕಾರರೂಢವಾದ ಪಕ್ಷವು ಬಹು ಜಾಗರೂಕತೆಯಿಂದ ಅಧಿಕಾರ ನಡೆಯಿಸಬೇಕಾಗುತ್ತದೆ. ಅದು ಚುನಾವಣೆಯ ಸಮಯಕ್ಕೆ ಕೊಟ್ಟ ವಚನಗಳನ್ನು ಕಾರ್ಯರೂಪಕ್ಕೆ ತರಲು ಯತ್ನಿಸಬೇಕಾಗುತ್ತದೆ. ಇಲ್ಲವಾದರೆ ಮುಂದಿನ ಚುನಾವಣೆಯಲ್ಲಿ ಅಪಜಯ ಹೊಂದುವ ಸಂಭವವಿರುತ್ತದೆ. ಎಲ್ಲ ರಾಜಕೀಯ ಪಕ್ಷಗಳೂ ಕಳೆದ ಚುನಾವಣೆಯ ದೃಷ್ಟಿಯಿಂದ ಕಾರ್ಯಮಾಡದೆ ಬರುವ ಚುನಾವಣೆಯ ದೃಷ್ಟಿಯಿಂದ ಕಾರ್ಯತತ್ಪರವಾಗಿರುತ್ತವೆ. ಹೀಗೆ ಸದಾ ಜನತಾ ಬೆಂಬಲವನ್ನು ಯಾಚಿಸುವ ರಾಜಕೀಯ ಪಕ್ಷಗಳಿರುವುದರಿಂದ ನಾಗರಿಕರಿಗೆ ತಮ್ಮ ಬೇಕು ಬೇಡಗಳ ದೃಷ್ಟಿಯಿಂದ ಸಮಯೋಚಿತವಾಗಿ ಆಯಾ ಪಕ್ಷಗಳನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯವಿರುತ್ತದೆ. ಲೋಕಸತ್ತಾತ್ಮಕ ರಾಜ್ಯ ಪದ್ಧತಿಯು ಅವರಿಗೆ ದೇಣಿಗೆಯಿದು.

ರಾಜಕೀಯ ಪಕ್ಷಗಳು ನಾಗರಿಕರ ರಾಜಕೀಯ ಅಸಹಾಯಕತೆಯನ್ನು ಹೋಗಲಾಡಿಸುತ್ತವೆ. ದೊಡ್ಡ ಕಾರಖಾನೆಗಳಲ್ಲಿ ದುಡಿಯುವ, ದೊಡ್ಡ ಪಟ್ಟಣಗಳಲ್ಲಿ ವಾಸಿಸುವ ಮತ್ತು ದೂರ ದೂರದ ಹಳ್ಳಿಗಳಲ್ಲಿ ಜೀವಿಸುವ ಜನರು ಒಂದಿಲ್ಲೊಂದು ಬಗೆಯ ಸಂಘಟಿತ ಸಂಸ್ಥೆಯ ಸಹಾಯವಿಲ್ಲದೆ ದಿನವಹಿ ಉದ್ಭವಿಸುವ ರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ಯಾವಾಗಲೂ ಸಯುಕ್ತ ಮತವನ್ನು ವ್ಯಕ್ತಪಡಿಸಲಾರರು. ಆಯಾ ಪಕ್ಷಗಳ ಸಭೆ, ಸಮಿತಿ, ವರ್ತಮಾನ ಪತ್ರ, ಕಾರ್ಯಕ್ರಮ ಅಧಿವೇಶನ, ಜನಾಭಿಪ್ರಾಯ ಸಂಶೋಧಕ ಸಮಿತಿ, ಶಿಷ್ಟಮಂಡಲ ಮೊದಲಾದವುಗಳ ಸಹಾಯದಿಂದ ನಾಗರಿಕರು ತಮ್ಮ ಅಭಿಪ್ರಾಯಗಳನ್ನೂ ರೂಪಿಸಿಕೊಳ್ಳಬಲ್ಲರು. ಹೀಗೆ ರೂಪುಗೊಂಡ ಜನರ ಅಭಿಪ್ರಾಯ ತಿಳಿದುಕೊಂಡು ರಾಜಕೀಯ ಪಕ್ಷಗಳು ಶಾಸನ ಸಭೆಗಳ

ಕಾರ್ಯ ಕಲಾಪಗಳನ್ನು ನಡೆಯಿಸುತ್ತವೆ. ಆಗರಾಜ್ಯದ ವ್ಯವಹಾರದಲ್ಲಿ ತಮ್ಮ ನಿತ್ಯದ ಅಭಿಪ್ರಾಯಕ್ಕೂ ಬೆಲೆಯಿದೆಯೆಂಬ ವಿಶ್ವಾಸವು ಜನರಿಗೆ ಉಂಟಾಗುತ್ತದೆ. ನಾಲ್ಕೈದು ವರ್ಷಗಳಿಗೊಮ್ಮೆ ಮತದಾನ ಮಾಡುವ ಹಕ್ಕಿಗಿಂತಲೂ ಸ್ವಾಭಿಮಾನ ಮತ್ತು ವಿಶ್ವಾಸಗಳನ್ನು ಹೆಚ್ಚಿಸುವ ಈ ಸಂಗತಿಯು ಹೆಚ್ಚು ಮಹತ್ವದ್ದೆಂದು ಹೇಳಬಹುದು

ರಾಜಕೀಯ ಪಕ್ಷಗಳು ಶಾಸನ ಸಭೆಯ ಕಾರ್ಯಕಲಾಪಗಳಿಗೆ ಒಂದು ನಿಶ್ಚಿತ ಗುರಿಯನ್ನು ಗೊತ್ತುಪಡಿಸುತ್ತವೆ. ಅಧಿಕಾರ ರೂಢವಾದ ಪಕ್ಷದ ಕಾರ್ಯಕ್ರಮವೇ ಕಾಯ್ದೆ ಮತ್ತು ಧೋರಣೆಗಳ ತಳಹದಿಯಾಗುವುದು. ಪಾನಪ್ರತಿಬಂಧ, ಹರಿಜನೋದ್ಧಾರ, ಜಮೀನ್ದಾರಿ ನಿರ್ಮೂಲನೆ ಮೊದಲಾದ ಕಾರ್ಯಕ್ರಮವನ್ನಿಟ್ಟುಕೊಂಡ ರಾಜಕೀಯ ಪಕ್ಷವು ಅಧಿಕಾರ ರೂಢವಾದರೆ, ಶಾಸನ ಸಭೆಯಲ್ಲಿ ಆ ಬಗೆಯ ಕಾಯ್ದೆಗಳು ಮಾಡಲ್ಪಡಬಹುದೆಂದು ಸುಲಭವಾಗಿ ನಂಬಬಹುದು. ಇದೇ ಬಗೆಯಾಗಿ ಉದ್ದಿಮೆಗಳ ರಾಷ್ಟ್ರೀಕರಣ, ಕೂಲಿಕಾರರ ಜೀವನ ಮಟ್ಟದ ಹೆಚ್ಚಳ, ನೀರಾವರಿಯ ಪ್ರದೇಶದ ವಿಸ್ತಾರ ಮೊದಲಾದ ಕಾರ್ಯಕ್ರಮವನ್ನಿಟ್ಟುಕೊಂಡ ಪಕ್ಷವು ಅಧಿಕಾರದಲ್ಲಿ ಬಂದರೆ ಆ ಸಂಬಂಧದ ಕಾಯ್ದೆಗಳು ಶಾಸನ ಸಭೆಯ ಎದುರಿಗೆ ಬರುವುದು ಸಹಜ. ಹೀಗೆ ರಾಜಕೀಯ ಪಕ್ಷಗಳು ರಾಜಕಾರಣಕ್ಕೆ ನಾಯಕತ್ವವನ್ನು ಒದಗಿಸುತ್ತವೆ. ಪಕ್ಷಗಳು ಶಾಸನ ಸಭೆಯ ಒಳಗೂ ಹೊರಗೂ ಶಿಸ್ತು ಬದ್ಧವಾಗಿ ಕಾರ್ಯಮಾಡುತ್ತವೆ. ಪಕ್ಷದ ಕಾರ್ಯಕ್ರಮವನ್ನು ಒಪ್ಪಿ ಪಕ್ಷದ ಸಮ್ಮತಿಯಿಂದ ನಿರ್ಮಿತವಾದ ಕೇಂದ್ರ ಸಮಿತಿಯ ಆದೇಶದಂತೆ ವರ್ತಿಸುವವರು ಮಾತ್ರ ಪಕ್ಷದಲ್ಲಿ ಉಳಿಯಬಲ್ಲರು. ಪಕ್ಷದ ಕಾರ್ಯಕ್ರಮ ಇಲ್ಲವೆ ಆದೇಶಗಳನ್ನು ವಿರೋಧಿಸುವವರು ಪಕ್ಷದಿಂದ ಹೊರಬೀಳಬೇಕಾಗುತ್ತದೆ. ಪಕ್ಷವು ವ್ಯಕ್ತಿಯ ವ್ಯಂಗತನಕ್ಕಿಂತಲೂ ತನ್ನ ಐಕ್ಯತೆಗೆ ಹೆಚ್ಚು ಬೆಲೆ ಕೊಡುತ್ತದೆ. ಹೀಗೆ ಶಿಸ್ತುಬದ್ಧವಾಗಿ ಆಚರಿಸುವ ರಾಜಕೀಯ ಪಕ್ಷದ ಪ್ರತಿನಿಧಿಗಳು ಶಾಸನ ಸಭೆಯಲ್ಲಿ ಬಹುಮತ ದೊರಕಿಸಿದರೆ ಬಹುತರವಾಗಿ ಆ ಪಕ್ಷದ ನಾಯಕರು ರಾಜ್ಯದಾಡಳಿತೆಯ ಮೇಲ್ವಿಚಾರಕರಾಗುವರು. ಶಾಸನ ಸಭೆಯೊಳಗಿನ ತಮ್ಮ ಪಕ್ಷದ ಬೆಂಬಲದಿಂದ ನಾಯಕರು ಆಡಳಿತೆಗೆ ಬೇಕಾದ ಚೇತನವನ್ನು ದಯಪಾಲಿಸುವರು.

## ೯. ರಾಜಕೀಯ ಪಕ್ಷಗಳ ಲೋಪದೋಷಗಳು

ಇದುವರೆಗೆ ಶಾಸನ ಸಭೆಗಳ ಚುನಾವಣೆ, ಗೊತ್ತುಗುರಿ ಮತ್ತು ನಾಯಕತ್ವ ಮೊದಲಾದ ವಿಷಯಗಳಲ್ಲಿ ರಾಜಕೀಯ ಪಕ್ಷಗಳು ವಹಿಸುವ ಪಾತ್ರದ ಒಳ್ಳೆಯ ಅಂಶಗಳನ್ನೇ ಬಹುತರವಾಗಿ ವಿವರಿಸಲಾಗಿದೆ. ಅವುಗಳ ಲೋಪದೋಷಗಳನ್ನೂ ಕೆಲಮಟ್ಟಿಗೆ ತಿಳಿದಿರುವುದು ಲೇಸು. ಅಂದರೆ ಲೋಕ ಸತ್ತಾತ್ಮಕ ರಾಜ್ಯ ಪದ್ಧತಿಯ ಇತಿಮಿತಿಗಳು ಗೋಚರವಾಗುತ್ತವೆ ಜರ್ಮನಿ, ಜಪಾನ, ಇಟಲಿ ಮೊದಲಾದ ಔದ್ಯೋಗೀಕರಣಹೊಂದಿದ ಮತ್ತು ಸಾರ್ವತ್ರಿಕ ಶಿಕ್ಷಣವೇರ್ಪಟ್ಟ ಅಧುನಿಕ ರಾಷ್ಟ್ರಗಳಲ್ಲಿಯೂ ಸಹ ಲೋಕ ಸತ್ತಾತ್ಮಕ ಪದ್ಧತಿಯು ಕುಸಿದು ಬಿದ್ದು ಸರ್ವಾಧಿಕಾರಿತ್ವಗಳು ತಲೆಯೆತ್ತಿದ ಸಂಗತಿಯು ಪ್ರಖ್ಯಾತವಿದೆ. ಲೋಕ ಸತ್ತಾತ್ಮಕ ಚುನಾವಣಿ ಪದ್ಧತಿಯು ಯಶಸ್ವಿಯಾಗಲು ಅನೇಕ ಅನುಕೂಲ ಸಂಗತಿಗಳು ಅವಶ್ಯ. ಜನರು ಸುಶಿಕ್ಷಿತರಾಗಿದ್ದರೆ ಒಳ್ಳೆಯದು, ಆದರೆ ವಿವೇಕಿಗಳಾಗಿದ್ದರೆ ಅದಕ್ಕಿಂತಲೂ ಹೆಚ್ಚು ಒಳ್ಳೆಯದು. ನಿತ್ಯ ಜೀವನದಲ್ಲಿ ಹಿಂಸೆಯನ್ನು ಜನರು ದ್ವೇಷಿಸುತ್ತಿರಬೇಕು. ಅವರು ಅಧಿಕಾರ ಬಲದ ಪೂಜಕರಾಗಕೂಡದು. ಅದಕ್ಕೆ ಬದಲಾಗಿ ಅವರು ಅಧಿಕಾರದ ದರ್ಪವನ್ನು ತಿರಸ್ಕರಿಸುತ್ತಿರಬೇಕು. ಸಮಾಜದಲ್ಲಿ ಸಮತೆಯ ಆಚರಣೆಯಿರಬೇಕು ಜನರಲ್ಲಿ ಭಿನ್ನಾಭಿಪ್ರಾಯ ಸಹಿಸುವ ಸಂಸ್ಕೃತಿಯಿರಬೇಕು. ಇದಲ್ಲದೆ ಜನರ ಆರ್ಥಿಕ ಸ್ಥಿತಿ ಚನ್ನಾಗಿರಬೇಕು. ರಾಜಕೀಯ ಪಕ್ಷಗಳು ಅಧಿಕಾರದಲ್ಲಿದ್ದಾಗ ಹೊಣೆಯರಿತು ಕಾರ್ಯಮಾಡಬೇಕಲ್ಲದೇ ಅಲ್ಪ ಸಂಖ್ಯಾತರ ಹಕ್ಕು ಬಾಧ್ಯತೆಗಳನ್ನು ಮನ್ನಿಸುತ್ತಿರಬೇಕು. ಸದ್ಯ ಎಲ್ಲ ದೇಶಗಳಲ್ಲಿ ಈ ಬಗೆಯ ಅನಕೂಲ ಸಂಗತಿಗಳು ಇವೆಯೆಂದು ಹೇಳಲು ಬರುವುದಿಲ್ಲ. ಅಮೇರಿಕೆಯಂತಹ ಮುಂದುವರಿದ ದೇಶದಲ್ಲಿಯೂ ಸಹ ನಿಗ್ರೋ ಜನರು ಮತದಾನ ಮಾಡಲು ಸ್ವತಂತ್ರರಿಲ್ಲ. ದಕ್ಷಿಣ ಆಫ್ರಿಕೆಯಲ್ಲಂತೂ ವರ್ಣ ದ್ವೇಷದ ನಿಮಿತ್ಯ ಕಪ್ಪು ಜನಾಂಗದವರು ಬಿಳಿಯರನ್ನೇ ಆರಿಸಿ ಕಳಿಸಬೇಕಾಗುತ್ತದೆ. ದೇಶದ ಉದ್ದಿಮೆಗಳು, ಸುದ್ದಿ ಸಂಸ್ಥೆಗಳು, ವರ್ತಮಾನ ಪತ್ರಗಳು, ಆಕಾಶವಾಣಿಕೇಂದ್ರಗಳು, ಶಿಕ್ಷಣ ಸಂಸ್ಥೆಗಳು, ಚಲಚ್ಚಿತ್ರಗಳು, ಸಿನೇಮಾ ಮಂದಿರಗಳು ಮೊದಲಾದವುಗಳೆಲ್ಲ ಸಿರಿವಂತರ ಸೊತ್ತಾಗಿರುವ ದೇಶಗಳಲ್ಲಿ ಸಿರಿವಂತರ ಹಿತ ಸಂಬಂಧಗಳನ್ನು ರಕ್ಷಿಸಲು ಪಣತೊಟ್ಟ ರಾಜಕೀಯ ಪಕ್ಷಗಳಿಗೆ ಮಾತ್ರ ಎಡೆಯಿದೆ. ಅಲ್ಲಿ ಬಡವರ ಹಿತಚಿಂತನ ಮಾಡುವ

ಪಕ್ಷಗಳು ಚುನಾವಣೆ ಸ್ಪರ್ಧಿಸಲು ಹಣವಿಲ್ಲದೆ ಹುಟ್ಟಿದಾಗಲೇ ಸಾಯಬೇ ಕಾಗುತ್ತದೆ. ಜರ್ಮನ್ನರಂಥಹ ಯುದ್ಧಾಸಕ್ತ ಜನಾಂಗವು ರಾಷ್ಟ್ರದ ಸೈನಿಕ ಶಕ್ತಿಯನ್ನು ಪ್ರದರ್ಶಿಸುವ ಮಬ್ಬಿನಿಂದ ಚುನಾವಣೆ ಪದ್ಧತಿಯನ್ನೇ ಬುಡ ಮೇಲು ಮಾಡಬಹುದು. ಫ್ರೆಂಚರಂಥಹ ವಿವಿಧಮನೋವೃತ್ತಿಯ ಜನಾಂಗವು ಹಲವು ಪಕ್ಷಗಳ ಪ್ರತಿನಿಧಿಗಳನ್ನು ಶಾಸನ ಸಭೆಗೆ ಆಯ್ಕೆಮಾಡಿ ಸರಕಾರ ರಚನೆಯ ಕಾರ್ಯವನ್ನೇ ಕಠಿಣಮಾಡಿಬಿಡಬಹುದು. ಚುನಾವಣೆಯಲ್ಲಿ ಬಹುಮತ ದೊರಕಿಸಿ ರಾಜ್ಯಸೂತ್ರಗಳನ್ನು ಹಿಡಿದುಕೊಳ್ಳುವ ಹೆಬ್ಬಯಕೆ ಯಿಂದ ಪ್ರೇರಿತವಾದ ರಾಜಕೀಯ ಪಕ್ಷಗಳು ತಮ್ಮ ಪ್ರಚಾರ ಕಾರ್ಯದಲ್ಲಿ ಮನಃಪೂರ್ವಕವಾಗಿ ಜನರ ಅಂಧಃಶ್ರದ್ಧೆ, ಜಾತಿಪಂಥಗಳ ವೈಮನಸ್ಸು, ಪ್ರಾದೇಶಿಕ ದುರಭಿಮಾನ, ನಾಯಕನ ವೈಯಕ್ತಿಕ ಮೇಲ್ಮೆ, ಕಾಲ್ಪನಿಕ ಗಂಡಾಂತರ, ದುಡ್ಡಿನ ಸಾಮರ್ಥ್ಯ ಮೊದಲಾದವುಗಳ ದುರುಪಯೋಗದಿಂದ ಜನರನ್ನು ವಂಚಿಸಿ ಸ್ವಾರ್ಥಸಾಧಿಸಿಕೊಳ್ಳಬಹುದು.

ಚುನಾವಣೆಯಲ್ಲಿ ಇವೆಲ್ಲವೂ ಅನಿವಾರ್ಯವೆಂದು ಯಾರೂ ತಿಳಿಯ ಕೂಡದು. ಇಂಗ್ಲಂಡವು ತನ್ನ ೫೦೦ ವರ್ಷಗಳ ಇತಿಹಾಸದಲ್ಲಿ ಈ ಎಲ್ಲ ಸಮಸ್ಯೆಗಳನ್ನು ಎದುರಿಸಿ ಇಂದು ಬಹುಮಟ್ಟಿಗೆ ಅವುಗಳ ತೀಕ್ಷ್ಣತೆಯನ್ನು ತಗ್ಗಿಸಿದೆ. ಲೋಕಸತ್ತಾತ್ಮಕ ಚುನಾವಣೆ ಪದ್ಧತಿ ಮತ್ತು ರಾಜಕೀಯ ಪಕ್ಷಗಳು ಕ್ರಮೇಣ ಯಶಸ್ವಿಯಾಗಬಲ್ಲವು. ಅಲ್ಲಿಯ ವರೆಗೆ ಜನರಲ್ಲಿ ಸಹನೆ ಯೊಂದಿರಬೇಕು.

## ೧೦. ಶಾಸನ ಸಭೆಗಳ ಸಭಾಸದರು

ಶಾಸನ ಸಭೆಗಳ ಪ್ರತಿನಿಧಿಗಳು ಜನತಾ ಪ್ರತಿನಿಧಿಗಳೆಂದು ಹೇಳುವ ರೂಢಿಯಿದೆ. ಒಂದು ದೃಷ್ಟಿಯಿಂದ ಇದು ನಿಜ. ಜನರು ಮತದಾನಮಾಡಿ ಅವರನ್ನು ಬಹುಮತದಿಂದ ಆರಿಸುತ್ತಾರೆ. ಆದುದರಿಂದ ತೋರಿಕೆಗೆ ಅವರು ಜನತಾ ಪ್ರತಿನಿಧಿಗಳೆಂದು ಭಾಸವಾಗುತ್ತಾರೆ. ಆದರೆ ವಸ್ತುಸ್ಥಿ ತಿಯು ಹೀಗಿಲ್ಲ. ನಿಜವಾಗಿ ಅವರು ರಾಜಕೀಯ ಪಕ್ಷಗಳ ಪ್ರತಿನಿಧಿ ಗಳು. ಅವರು ರಾಜಕೀಯ ಪಕ್ಷದಿಂದ ಚುನಾವಣೆಗೆ ನಿಲ್ಲಿಸಲ್ಪಡುತ್ತಾರೆ. ರಾಜಕೀಯ ಪಕ್ಷದ ಕಾರ್ಯಕ್ರಮ, ಪಕ್ಷದ ನಾಯಕರ ಮೇಲಿನ ವಿಶ್ವಾಸ ಪಕ್ಷದ ರಾಜಕೀಯ ಆಚರಣೆ, ಪಕ್ಷದ ಪ್ರಚಾರ ಕಾರ್ಯ ಮೊದಲಾದವುಗಳ

ಬಲದಿಂದ ಚುನಾವಣೆಗೆ ನಿಂತ ಉಮೇದವಾರರು ಆರಿಸಿ ಬರುತ್ತಾರೆ. ಹೀಗೆ ಪಕ್ಷದ ಬೆಂಬಲದಿಂದ ಸದಸ್ಯರಾದವರು ಶಾಸನ ಸಭೆಗಳಲ್ಲಿ ಪಕ್ಷದ ಆದೇಶದಂತೆ ಕಾರ್ಯ ಮಾಡಬೇಕಾಗುತ್ತದೆ.

ಶಾಸನ ಸಭೆಯ ಸದಸ್ಯರು ಪಕ್ಷದ ಹಿತದ ಸಲುವಾಗಿ ಪಕ್ಷದ ಆದೇಶ ದಂತೆ ನಡೆಯುತ್ತಾರೆಂಬುದನ್ನು ಅನೇಕ ನಿದರ್ಶನಗಳಿಂದ ತೋರಿಸಿಕೊಡಬ ಹುದು. ಕೆಲವು ಸಲ ಪಕ್ಷದ ಒಬ್ಬ ಗಣ್ಯ ವಕ್ತಿಗೆ ಸ್ಥಳಮಾಡಿಕೊಡಲು ಸದಸ್ಯರು ತಮ್ಮ ಶಾಸನ ಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸುತ್ತಾರೆ. ಇನ್ನು ಕೆಲವು ಸಲ ಪಕ್ಷದ ಶಿಸ್ತು ಭಂಗ ಮಾಡಿದುದಕ್ಕಾಗಿ ಸದಸ್ಯರು ತಮ್ಮ ಶಾಸನ ಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ಕೊಡುತ್ತಾರೆ. ಇಂತಹ ಪ್ರಸಂಗಗಳಲ್ಲಿ ಆರಿಸಿ ಕಳಿಸಿದ ಜನರ ಅಭಿಪ್ರಾಯವೇನಿದೆ ಎಂಬುದನ್ನು ತಿಳಿದುಕೊಳ್ಳಲು ಎಲ್ಲಿಯೂ ಪ್ರಯತ್ನಿಸಲಾಗಿಲ್ಲ. ಅಂದಮೇಲೆ ಸದಸ್ಯರು ನೇರವಾಗಿ ಜನಸಾಮಾನ್ಯರಿಗೆ ಹೊಣೆಯಾಗಿರದೆ ಸಾಮಾನ್ಯವಾಗಿ ತಮ್ಮ ತಮ್ಮ ಪಕ್ಷಗಳಿಗೆ ಹೊಣೆಯಾಗಿರುತ್ತಾರೆಂದು ಹೇಳಿದರೆ ತಪ್ಪಾಗದು. ಶಾಸನ ಸಭೆಗಳಲ್ಲಿ ಜನತಾ ಪ್ರತಿನಿಧಿಗಳಿರುತ್ತಾರೆಂದು ಹೇಳುವುದಕ್ಕಿಂತಲೂ ರಾಜ ಕೀಯ ಪಕ್ಷಗಳಿವೆಯೆಂದು ಹೇಳುವುದು ಇಂದು ಹೆಚ್ಚು ಸಮರ್ಪಕವಾಗಿದೆ. ಶಾಸನ ಸಭೆಯ ಕಾರ್ಯಕಲಾಪಗಳನ್ನು ಅಭ್ಯಸಿಸುವಾಗ ಈ ಸಂಗತಿಯನ್ನು ಧ್ಯಾನದಲ್ಲಿಡಬೇಕು.

ಜನಸಾಮಾನ್ಯರ ಬೇಕುಬೇಡಗಳನ್ನರಿತು, ಸಾಧ್ಯವಿದ್ದ ಮಟ್ಟಿಗೆ ಅವು ಗಳನ್ನು ಆಡಳಿತೆಯ ಮುಖಾಂತರ ತೃಪ್ತಿಪಡಿಸಲು ಪ್ರಯತ್ನಿಸುವವರೇ ರಾಜಕಾರಣಿಗಳು. ಶಾಸನ ಸಭೆಯ ಸದಸ್ಯರು ಜನರ ಬೇಡಿಕೆಗಳಿಗೆ ಕಾಯ್ದೆಯ ಸ್ವರೂಪ ಕೊಟ್ಟು ಆಡಳಿತದ ಮುಖಾಂತರ ಅವು ಕಾರ್ಯಗತ ವಾಗುವಂತೆ ಯತ್ನಿಸುತ್ತಾರೆ. ಆದುದರಿಂದ ಅವರು ರಾಜಕಾರಣಿಗಳೆಂದೆನಿ ಸುತ್ತಾರೆ. ಅವರು ಪಕ್ಷದ ಶಿಸ್ತನ್ನು ಪಾಲಿಸುತ್ತಿದ್ದರೂ ಅವರ ವ್ಯಕ್ತಿತ್ವಕ್ಕೆ ಬೆಲೆಯಿದೆ. ಸಭಾಸದರು ಮೇಧಾವಿಗಳೂ, ನೀತಿವಂತರೂ, ಕಾರ್ಯಧುರೀ ಣರೂ, ಹಸನ್ಮುಖಿಗಳೂ ಆಗಿದ್ದರೆ ಒಳ್ಳೆಯದು. ಅವರು ತಿಳಿಗೇಡಿಗಳೂ ಅನೀತಿವಂತರೂ, ಆಲಸಿಗಳೂ, ಉಗ್ರಮೂರ್ತಿಗಳೂ ಆಗಿದ್ದರೆ ಶಾಸನ ಸಭೆಯು ಸರಿಯಾಗಿ ಕಾರ್ಯ ಮಾಡಲಾರದು. ಯಾವುದೊಂದು ದೇಶದ

ಶಾಸನ ಸಭೆಯ ಸದಸ್ಯರು ಆ ದೇಶದ ಜನತೆಯ ಬೌದ್ಧಿಕ ಮತ್ತು ನೈತಿಕ ಮಟ್ಟವನ್ನೇ ಪ್ರಕಟಪಡಿಸುತ್ತಾರೆ.

ಸಭಾಸದರು ತತ್ವಜ್ಞಾನಿಗಳಾಗಿರಬೇಕಾಗಿಲ್ಲ. ಅವರು ಪಂಡಿತರಾಗಿ ರದಿದ್ದರೂ ಹಾನಿಯಿಲ್ಲ. ತತ್ವಜ್ಞಾನಿಗಳಾಗಲು ಇಲ್ಲವೆ ಪಂಡಿತರಾಗಲು ಪ್ರಶಾಂತ ಜೀವನ ಅಗತ್ಯ. ಅದು ರಾಜಕಾರಣಿಗೆ ಅಸಾಧ್ಯ. ಅವನು ಅನೇಕ ಬಗೆಯ ಜನರ ಸಂಗಡ ಹಗಲಿರುಳೂ ಮಾತುಕತೆಗಳಲ್ಲಿ ಹೊತ್ತುಗ ಳೆಯಬೇಕಾಗುತ್ತದೆ. ಅವನು ಶಾಸನ ಸಭೆಯಲ್ಲಿ ನಿತ್ಯ ಎದುರಿಸಬೇಕಾದ ಸಮಸ್ಯೆಗಳಿಗೂ ಕೊನೆ ಮೊದಲಿಲ್ಲ. ಕ್ಷಣ ಕ್ಷಣಕ್ಕೆ ಪರಿಸ್ಥಿತಿಯು ಬದಲಾ ಗುತ್ತ ನಡೆದಿರುವ ಈ ಕಾಲದಲ್ಲಿ ಆ ಸಮಸ್ಯೆಗಳಿಗೆ ಪರಿಹಾರವನ್ನು ತಕ್ಷಣ ಒದಗಿಸಬೇಕಾಗುತ್ತದೆ. ಎಲ್ಲ ಸಮಸ್ಯೆಗಳಿಗೆ ತಕ್ಷಣ ಉಪಾಯಗಳನ್ನು ಕಂಡುಹಿಡಿಯಬಲ್ಲ ಪಾಂಡಿತ್ಯ ಯಾವ ಮನುಷ್ಯನಿಗೂ ಸಾಧ್ಯವಿಲ್ಲ. ಅಂದ ಮೇಲೆ ಬಿಡುವಿಲ್ಲದೆ ಜನರ ಸಂಪರ್ಕದಲ್ಲಿ ತೊಡಗಿದ ರಾಜಕಾರಣಿಯು ಅಂಥ ಪಂಡಿತನಾಗಿರಬೇಕೆಂದು ಇಚ್ಛಿಸುವುದು ಅವ್ಯವಹಾರ್ಯ. ಅವನು ದೇಶದ ತತ್ವಜ್ಞಾನಿಗಳು, ಪಂಡಿತರು, ಯಂತ್ರಜ್ಞರು, ಮತ್ತು ಆಡಳಿತೆಗಾರರು ಒದ ಗಿಸುವ ಸಮಸ್ಯೆ ಪರಿಹಾರೋಪಾಯಗಳು ಜನರಿಗೆ ಎಷ್ಟರಮಟ್ಟಿಗೆ ಒಪ್ಪಿತ ವಾಗಬಹುದೆಂಬುದನ್ನು ಊಹಿಸಬಲ್ಲವನಾಗಿದ್ದರೆ ಸಾಕು. ಮನುಷ್ಯ ಸ್ವಭಾ ವವನ್ನು ಬಲ್ಲ ವ್ಯವಹಾರ ಕುಶಲನು ಮಾತ್ರ ಇಂತಹ ಊಹೆಯನ್ನು ಸರಿ ಯಾಗಿ ಮಾಡಬಲ್ಲನು. ಶಾಸನ ಸಭೆಯ ಸದಸ್ಯರೆಲ್ಲರೂ ಇಂತಹ ವ್ಯವ ಹಾರ ಕುಶಲರಾಗಿದ್ದರೆ ಉತ್ತಮ. ಆದರೆ ಕನಿಷ್ಠ ಪಕ್ಷಕ್ಕೆ ಆಯಾ ಪಕ್ಷಗಳ ನಾಯಕರಾದರೂ ಮನುಷ್ಯ ಸ್ವಭಾವವನ್ನು ಅರಿತವರಾಗಿರಬೇಕಾದುದು ಅತ್ಯವಸ್ಯ. ರಾಜಕೀಯ ಪಕ್ಷಗಳ ನಾಯಕರಾಗಿರುವವರು ಬಹುತರವಾಗಿ ಈ ವಿಷಯದಲ್ಲಿ ನಿಷ್ಣಾತರಾಗಿರುತ್ತಾರೆಂದು ಹೇಳಬಹುದು.

### ೧೧. ಶಾಸನಸಭೆಯ ಕಾರ್ಯಕಲಾಪಗಳು

ಚುನಾವಣೆ ನಂತರ ಶಾಸನ ಸಭೆಯು ಮೊಟ್ಟಮೊದಲು ಸೇರಿದಾಗ ಸಭಾಧ್ಯಕ್ಷನ ಆಯ್ಕೆ ನಡೆಯುವುದು. ಸಭಾಧ್ಯಕ್ಷನಾದವನು ತನ್ನ ಪಕ್ಷಪಂಗ ಡಗಳನ್ನು ಬಿಡಬೇಕಾಗುತ್ತದೆ. ಅವನು ಸಭೆಯ ಗೌರವ, ಸಭಾಸದರ ಹಕ್ಕು ಬಾಧ್ಯತೆಗಳು ಸಭೆಯ ಪರಂಪರೆಗಳು ಮೊದಲಾದವುಗಳನ್ನು ಕಾಪಾ

ಡುವ ವ್ಯಕ್ತಿಯೆಂದು ಗಣಿಸಲ್ಪಡುತ್ತಾನೆ. ಆಮೇಲೆ ಆಯಾ ಪಕ್ಷಗಳ ಸದಸ್ಯರು ಪ್ರತ್ಯೇಕ ಸಭೆಗೂಡಿ ತಮ್ಮ ತಮ್ಮ ನಾಯಕರನ್ನು ಆರಿಸುತ್ತಾರೆ. ಆಯಾ ಪಕ್ಷದ ನಾಯಕರು ಸಭಾಧ್ಯಕ್ಷನಿಗೆ ತಮ್ಮ ತಮ್ಮ ಪಕ್ಷದ ಬಗ್ಗೆ ವಿವರಗಳನ್ನು ಒಪ್ಪಿಸುತ್ತಾರೆ. ಸಭಾಧ್ಯಕ್ಷನು ಆಯಾ ಪಕ್ಷಗಳಿಗೆ ಸಭೆಯಲ್ಲಿ ಸ್ಥಾನ ಹಂಚುತ್ತಾನೆ. ರಾಷ್ಟ್ರದ ಪರಂಪರೆಗಳನ್ನೂ ಪುರಸ್ಕರಿಸುವ ಪಕ್ಷಗಳಿಗೆ ಶಾಸನ ಸಭೆಯಲ್ಲಿ ಸಭಾಧ್ಯಕ್ಷನ ಬಲಗಡೆಯ ಸ್ಥಾನವನ್ನೂ, ಸದ್ಯದ ಸ್ಥಿತಿಗತಿಗಳಲ್ಲಿ ತೀವ್ರ ಬದಲಾವಣೆಯನ್ನು ಬಯಸುವ ಪಕ್ಷಗಳಿಗೆ ಎಡಗಡೆಯ ಸ್ಥಾನವನ್ನೂ ಕೊಡುವ ರೂಢಿಯಿದೆ. ಈ ರೂಢಿಯ ಮೇಲಿಂದ ಬಲಪಕ್ಷ ಮತ್ತು ಎಡಪಕ್ಷಗಳೆಂಬ ಹೆಸರು ಬಂದಿವೆ.

ಈಗ ಎಲ್ಲ ದೇಶಗಳಲ್ಲಿ ಬಹುತರವಾಗಿ ಎರಡು ಮನೆಗಳ ಶಾಸನ ಸಭೆಗಳಿವೆ. ಪ್ರತ್ಯಕ್ಷ ಆಯ್ಕೆಯಿಂದ ಕೆಳಮನೆಯು ಸಾಮಾನ್ಯವಾಗಿ ರಚಿಸಲ್ಪಡುತ್ತದೆ. ಆದರೆ ಮೇಲ್ಮನೆಯ ರಚನೆಯು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಬಗೆಯದಾಗಿದ. ಇಂಗ್ಲಂಡದ ಮೇಲ್ಮನೆಯಲ್ಲಿ ಆನುವಂಶಿಕ ಸಭಾಸದರು ಇಲ್ಲವೆ ಅರಸನಿಂದ ನಾಮಕರಣ ಹೊಂದಿದ ಅಜೀವ ಸಭಾಸದರು ಇರುತ್ತಾರೆ. ಫ್ರಾನ್ಸದ ಮೇಲ್ಮನೆಯು ಅಪ್ರತ್ಯಕ್ಷ ಚುನಾವಣೆಯಿಂದ ಆರಿಸಲ್ಪಟ್ಟ ಸಭಾಸದರಿಂದ ಕೂಡಿರುತ್ತದೆ. ಹಿಂದುಸ್ತಾನದ ಮೇಲ್ಮನೆಯೂ ಇದೇ ಬಗೆಯದಾಗಿದೆ. ಅಮೇರಿಕೆ ಮತ್ತು ಸೋವ್ಹಿಯಟ್ ರಸಿಯಾಗಳ ಮೇಲ್ಮನೆಗಳಿಗೆ ಪ್ರತಿಯೊಂದು ಘಟಕ ರಾಜ್ಯದಿಂದ ನೇರವಾಗಿ ಜನರು ಸದಸ್ಯರನ್ನು ಆರಿಸುತ್ತಾರೆ. ಹೀಗೆ ಜನರಿಂದ ನೇರವಾಗಿ ಆರಿಸಲ್ಪಟ್ಟ ಮೇಲ್ಮನೆಗಳು ಜನರ ಸಂಪರ್ಕವಿಲ್ಲದ ಮೇಲ್ಮನೆಗಳಿಗಿಂತಲೂ ಹೆಚ್ಚು ಬಲಿಷ್ಠವಾಗಿವೆ. ಕೆಳಮನೆ ಮತ್ತು ಮೇಲ್ಮನೆಗಳ ಬಲಾಬಲಗಳು ಆಯಾ ದೇಶದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬಲಾಬಲಗಳ ಸಮತೋಲನದ ಮೇಲೆ ಅವಲಂಬಿಸಿವೆ.

"ಕೆಳಮನೆಯ ಅಭಿಪ್ರಾಯಕ್ಕೆ ಒಪ್ಪುವ ಮೇಲ್ಮನೆ ಅನವಶ್ಯಕ; ಕೆಳಮನೆಯ ಅಭಿಪ್ರಾಯ ವಿರೋಧಿಸುವ ಮೇಲ್ಮನೆ ವಿಘಾತಕ"— ಎಂದು ಒಬ್ಬರು ಹೇಳಿದ್ದಾರೆ. ಆದರೆ ದೇಶದ ಸನಾತನಿಗಳು ಮತ್ತು ಸಿರಿವಂತರು- ತಮ್ಮ ಹಿತ ರಕ್ಷಣೆಗಾಗಿ ಮೇಲ್ಮನೆಗಳಿರಬೇಕೆಂದು ಬಯಸುತ್ತಾರೆ.

ಸಂಯುಕ್ತ ರಾಜ್ಯಗಳಲ್ಲಿ ಆಯಾ ರಾಜ್ಯಘಟಕಗಳು ತಮ್ಮ ಹಿತರಕ್ಷಣೆ ಗೋಸುಗ ಮೇಲ್ಮನೆಗಳಿರಬೇಕೆಂದು ಬಯಸುತ್ತವೆ. ಭಿನ್ನಾಭಿಪ್ರಾಯಗಳ ಅಸಹಿಷ್ಣುತೆಯ ಪರಿಣಾಮವಾಗಿ ದೋಷಯುಕ್ತ ಕಾಯ್ದೆಗಳು ಕೆಳಮನೆ ಯಿಂದ ಹೊರಬೀಳಲು ಆಸ್ಪದ ಕೊಡುವ ಚರ್ಚೆಯ ನಿಯಮಾವಳಿಗಳು ಇರುವಲ್ಲಿ ದೇಶದ ಅನುಭವಿಕ ವ್ಯಕ್ತಿಗಳಿಂದ ಕೂಡಿದ ಮೇಲ್ಮನೆಗಳು ಅವಶ್ಯ.

ಕಾಯ್ದೆ ಮಾಡುವುದು, ಆಡಳಿತೆಗೆ ಹಣವೊದಗಿಸುವುದು, ಕಾರ್ಯಾಂಗವನ್ನು ನಿಯಂತ್ರಿಸುವುದು, ಶಾಂತಿಯ ಒಡಂಬಡಿಕೆ ಮಾಡಿ ಕೊಳ್ಳುವುದು ಇಲ್ಲವೆ ಯುದ್ಧ ಸಾರುವುದು ಮೊದಲಾದವು ಶಾಸನಾಂಗದ ಮುಖ್ಯ ಕಾರ್ಯಗಳು. ಸಭೆಯ ನಿಯಮಾವಳಿಗೆ ಅನುಸರಿಸಿ ಚರ್ಚೆ, ಅವಿಶ್ವಾಸ ಠರಾವು, ಸಭೆ ಮುಂದೂಡುವ ಠರಾವು, ಪಗಾರ ಕಡಿತದ ಸೂಚನೆ, ಪ್ರಶ್ನೋತ್ತರಗಳು, ತಪಾಸಣೆಯ ಸಮಿತಿಗಳು ಮೊದಲಾದ ವಿಧಾ ನಗಳಿಂದ ಶಾಸನಾಂಗವು ಈ ಕಾರ್ಯಗಳನ್ನು ಮಾಡುತ್ತದೆ. ಇವುಗಳನ್ನು ಸ್ವಲ್ಪ ವಿಶದವಾಗಿ ವಿವೇಚಿಸುವುದು ಅವಶ್ಯ.

ಬಹುತರವಾಗಿ ವಿಧೇಯಕಗಳು ಶಾಸನ ಸಭೆಯ ಕೆಳಮನೆಯಲ್ಲಿ ಮೊದಲು ಮಂಡಿಸಲ್ಪಡುತ್ತವೆ. ವಿಧೇಯಕ ವೆಂದರೆ ಮುಂದೆ ಆಗತಕ್ಕ ಕಾಯ್ದೆಯ ಕರಡು ಮಂಡಿಸಲ್ಪಟ್ಟ ವಿಧೇಯಕದ ತತ್ವವು ಸಾಧಕವಾ ಗಿದೆಯೋ ಬಾಧಕವಾಗಿದೆಯೋ ಎಂಬುದರ ಬಗ್ಗೆ ಮಾತ್ರ ಮೊದಲು ಚರ್ಚೆ ನಡೆಯುತ್ತದೆ. ವಿಧೇಯಕದ ತತ್ವಕ್ಕೆ ಸಭೆಯ ಒಪ್ಪಿಗೆ ದೊರೆಯದಿದ್ದರೆ ಅದರ ಪ್ರಗತಿಯು ಅಲ್ಲಿಗೆ ನಿಲ್ಲುತ್ತದೆ. ಒಂದು ವೇಳೆ ಅದಕ್ಕೆ ಒಪ್ಪಿಗೆ ದೊರೆತರೆ ಅದನ್ನು ಶಾಸನ ಸಭೆಯ ತಜ್ಞಸಮಿತಿಗೆ ಒಪ್ಪಿಸಲಾಗುತ್ತದೆ. ತಜ್ಞ ಸಮಿತಿಯಲ್ಲಿ ಶಾಸನ ಸಭೆಯ ಎಲ್ಲ ಪಕ್ಷಗಳ ಪ್ರತಿನಿಧಿಗಳು ಅವರ ವರ ಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ಸ್ಥಾನ ಪಡೆಯುತ್ತಾರೆ. ಈ ಸಮಿತಿಯಲ್ಲಿ ೧೦–೧೫ ಜನರು ಮಾತ್ರ ಇರುವುದುಂಟು. ಆದುದರಿಂದ ಇವರು ವಿಧೇಯಕವನ್ನು ಕೂಲಂಕಷವಾಗಿ ವಿವೇಚಿಸಿ, ಅದರಲ್ಲಿರುವ ಲೋಪದೋಷಗಳನ್ನು ತಿದ್ದಿ, ಕೊನೆಗೆ ಶಾಸನ ಸಭೆಗೆ ತಮ್ಮ ವರದಿಯ ನ್ನೊಪ್ಪಿಸುತ್ತಾರೆ. ಆ ಮೇಲೆ ಶಾಸನ ಸಭೆಯಲ್ಲಿ ಆ ವಿಧೇಯಕದ ಬಗ್ಗೆ

ಕಲಮುವಾರ ದೀರ್ಘ ಚರ್ಚೆಯು ಪ್ರಾರಂಭವಾಗುತ್ತದೆ. ಇದಕ್ಕೆ ದ್ವಿತೀಯ ವಾಚನವೆನ್ನುತ್ತಾರೆ. ಈ ಚರ್ಚೆಯು ಮುಗಿದು ಶಾಸನ ಸಭೆಯ ಒಪ್ಪಿಗೆಯು ದೊರೆತರೆ ಪುನಃ ಆ ವಿಧೇಯಕವು ಕರಡು ಸರಿಪಡಿಸುವ ಸಮಿತಿಗೆ ಒಪ್ಪಿಸಲ್ಪಡುತ್ತದೆ. ಈ ಸಮಿತಿಯು ವಿಧೇಯಕದಲ್ಲಿ ಮಹತ್ವದ ಬದಲಾವಣೆ ಮಾಡಲಾರದು. ಹೀಗೆ ಸಿದ್ಧವಾದ ಕೊನೆಯ ಕರಡಿನ ಬಗ್ಗೆ ಸಾಮಾನ್ಯ ಚರ್ಚೆಯಾಗಿ ಕೆಳಮನೆಯಲ್ಲಿ ಮೂರನೆ ಸಲ ಒಪ್ಪಿಗೆ ದೊರೆತರೆ, ಅದು ಮೇಲ್ಮನೆಗೆ ಕಳಿಸಲ್ಪಡುತ್ತದೆ. ಮೇಲ್ಮನೆಯು ಸಹ ಇದೇ ಬಗೆಯಾದ ರೀತಿಯನ್ನನುಸರಿಸಿ ಅದಕ್ಕೆ ಒಪ್ಪಿಗೆಯಿತ್ತರೆ, ಮುಂದೆ ರಾಜ್ಯದ ಅಧಿಪತಿಯು ಆ ವಿಧೇಯಕಕ್ಕೆ ಅಂಕಿತ ಹಾಕಿದರೆ ಅದು ಕಾಯ್ದೆಯಾಗುತ್ತದೆ.

ಕೆಳಮನೆ ಮತ್ತು ಮೇಲ್ಮನೆಗಳಲ್ಲಿ ವಿಧೇಯಕದ ಬಗ್ಗೆ ಭಿನ್ನಾಭಿಪ್ರಾಯವಾದರೆ ಅದನ್ನು ಬಗೆಹರಿಸುವ ಅನೇಕ ರೀತಿಗಳಿವೆ. ಕೆಳಮನೆ ಮತ್ತು ಮೇಲ್ಮನೆಗಳು ಸಮ ಅಧಿಕಾರವುಳ್ಳವುಗಳಾಗಿದ್ದರೆ ಅವು ತಮ್ಮ ತಮ್ಮೊಳಗೆ ಒಂದು ಒಡಂಬಡಿಕೆಗೆ ಬರಬಹುದು. ಇಲ್ಲವೆ ವಿಧೇಯಕದ ಪ್ರಗತಿಯು ಅಲ್ಲಿಗೆ ನಿಲ್ಲಬಹುದು. ಒಮ್ಮೊಮ್ಮೆ ಎರಡೂ ಮನೆಗಳ ಸಂಯುಕ್ತ ಸಭೆ ಸೇರಿ ಬಿಕ್ಕಟ್ಟನ್ನು ಪರಿಹರಿಸಬಹುದು. ತಿವ್ರ ತಮ್ಮ ಜನಾಭಿಪ್ರಾಯವು ಒಂದಿಲ್ಲೊಂದು ಮನೆಯ ಸಮ್ಮತಿಯನ್ನು ಅನಿವಾರ್ಯವಾಗಿ ಮಾಡಬಹುದು. ಕೆಳ ಮನೆಯು ಪ್ರಾಧಾನ್ಯವಾದ ರಾಜ್ಯಗಳಲ್ಲಿ ಮೇಲ್ಮನೆಯು ವಿಧೇಯಕವನ್ನು ಸ್ವಲ್ಪ ಸಮಯ ಮುಂದೂಡಬಹುದು. ಆದರೆ ಕೊನೆಯಲ್ಲಿ ಕೆಳಮನೆಯ ಅಭಿಪ್ರಾಯವೇ ಯಶಸ್ವಿಯಾಗುವುದು.

ಅಮೇರಿಕೆಯ ಸಂಯುಕ್ತ ಸಂಸ್ಥಾನ ಮತ್ತು ಹಿಂದುಸ್ತಾನಗಳ ಅಧ್ಯಕ್ಷರು ಎರಡೂ ಮನೆಗಳು ಒಪ್ಪಿಗೆ ಕೊಟ್ಟು ಕಳಿಸಿದ ವಿಧೇಯಕವನ್ನು ಪುನರ್ವಿವೇಚನೆಗಾಗಿ ಮರಳಿ ಶಾಸನ ಸಭೆಗೆ ಕಳಿಸಿಕೊಡಬಹುದು. ಆದರೆ ಶಾಸನ ಸಭೆಯು ಎರಡನೆ ಸಲವೂ ವಿಧೇಯಕ್ಕೆ ಒಪ್ಪಿಗೆಯನ್ನಿತ್ತರೆ ಅದಕ್ಕೆ ಅವರು ಅಂಕಿತಹಾಕಲೇಬೇಕು. ಆಗ ಅದು ಕಾಯ್ದೆಯಾಗುತ್ತದೆ.

ಕಾಯ್ದೆ ಮಾಡುವ ಈ ರೀತಿಯು ವಿಧೇಯಕದ ತತ್ವ, ಅದರಿಂದ ಸಮಾಜದ ಮೇಲಾಗುವ ಪರಿಣಾಮ, ಶಬ್ದ ಜೋಡಣೆಯ ಬಿಗುವು ಮೊದಲಾದವುಗಳನ್ನು ಕೂಲಂಕಷವಾಗಿ ವಿವೇಚಿಸಲು ಆಸ್ಪದವೀಯುತ್ತದೆ. ಇದ

ಲ್ಲದೆ ವಿಧೇಯಕವು ಶಾಸನ ಸಭೆಯ ಮುಂದಿರುವ ಸುದೀರ್ಘ ಸಮಯದಲ್ಲಿ ದೇಶದಾದ್ಯಂತ ಅದರ ಚರ್ಚೆಯಾಗಿ ರಾಜಕಾರಣಿಗಳಿಗೆ ಅದರ ಬಗ್ಗೆ ಜನಾಭಿಪ್ರಾಯ ಏನಿದೆಯೆಂಬುದನ್ನು ತಿಳಿಯಲು ಆಸ್ಪದವಾಗುತ್ತದೆ. ಇದು ಲೋಕಸತ್ತಾತ್ಮಕ ಶಾಸನ ಸಭೆಯು ಕಾರ್ಯ ಮಾಡುವ ರೀತಿಯ ಮೇಲ್ಮೆ.

ಹಣಕಾಸಿನ ವಿಧೇಯಕವನ್ನು ಮಂಜೂರ ಮಾಡುವ ರೀತಿ ಮತ್ತು ಸಾಮಾನ್ಯ ವಿಧೇಯಕಗಳನ್ನು ಮಂಜೂರ ಮಾಡುವ ರೀತಿಗಳಗಲ್ಲಿ ವ್ಯತ್ಯಾಸ ವಿದೆ. ಹಣಕಾಸಿನ ವಿಧೇಯಕವನ್ನು ಮೊದಲು ಕೆಳಮನೆಯಲ್ಲಿಯೇ ಮಂಡಿಸಲಾಗುತ್ತದೆ. ಬಹುತರವಾಗಿ ಎಲ್ಲ ದೇಶಗಳಲ್ಲಿ ಹಣಕಾಸಿನ ವಿಷಯದ ಬಗ್ಗೆ ಮೇಲ್ಮನೆಗಿಂತಲೂ ಕೆಳಮನೆಗೆ ಹೆಚ್ಚು ಅಧಿಕಾರವಿರುತ್ತದೆ. ಈ ಅಧಿಕಾರದ ಬಲದಿಂದಲೇ ಕೆಳಮನೆಗಳು ತಮ್ಮ ಗೌರವದ ಸ್ಥಾನ ಪಡೆದಿವೆ.

ಬರುವ ವರ್ಷದ ಆದಾಯ ಮತ್ತು ವೆಚ್ಚಗಳ ಅಂದಾಜು ಪತ್ರಿಕೆಯು ಪ್ರತಿ ವರ್ಷದ ಮೊದಲಿಗೆ ಕೆಳಮನೆಯಲ್ಲಿ ಮಂಡಿಸಲ್ಪಡುತ್ತದೆ. ಸರಕಾರದ ವೆಚ್ಚದಲ್ಲಿ ಸಾರ್ವಜನಿಕ ಸೇವಕರ ಪಗಾರ, ಸರಕಾರಕ್ಕೆ ಬೇಕಾಗುವ ಸಾಮಗ್ರಿಗಳ ವೆಚ್ಚ, ಲೋಕೋಪಯೋಗಿ ಸಂಸ್ಥೆಗಳಿಗೆ ಸಲ್ಲಿಸುವ ಸಹಾಯಧನ ಮೊದಲಾದವು ಮಹತ್ವದ ಅಂಶಗಳಾಗಿರುತ್ತದೆ. ಅಂದಾಜು ಪತ್ರಿಕೆಯ ಮೇಲೆ ಮೊದಲು ಸಾಮಾನ್ಯ ಚರ್ಚೆ ನಡೆಯುತ್ತದೆ. ಆಗ ಸಭಾಸದರು ಕೇವಲ ಹಣಕಾಸಿಗೆ ಸಂಬಂಧಪಟ್ಟ ವಿಷಯಗಳನ್ನಷ್ಟೇ ಚರ್ಚಿಸದೆ,ಸರಕಾರದ ಧೋರಣೆಯ ಎಲ್ಲ ಸಾಧಕ–ಬಾಧಕಗಳನ್ನೂ ಚರ್ಚಿಸಬಹುದು. ಈ ಚರ್ಚೆಯನಂತರ ಸರಕಾರದ ಆಯಾ ಖಾತೆಗಳ ಅಂದಾಜುಗಳು ಪ್ರತ್ಯೇಕವಾಗಿ ಚರ್ಚಿಸಲ್ಪಡುತ್ತವೆ. ಅಂದಾಜಿನಲ್ಲಿ ಕಡಿತ ಮಾಡುವ ಅಧಿಕಾರ ಶಾಸನ ಸಭೆಗೆ ಇರುತ್ತದೆ. ಆದರೆ ವೆಚ್ಚವನ್ನು ಹೆಚ್ಚಿಸುವ ಅಧಿಕಾರ ಅಮೇರಿಕೆಯ ಶಾಸನ ಸಭೆಯನ್ನು ಬಿಟ್ಟರೆ ಉಳಿದ ಯಾವ ಸಭೆಗೂ ಇಲ್ಲ. ಎಲ್ಲ ಖಾತೆಗಳ ಅಂದಾಜುಗಳಿಗೆ ಮಂಜೂರಿ ದೊರೆತ ಮೇಲೆ ಅದು ಶಾಸನಸಭೆಯ ಹಣಕಾಸಿನ ಸಮಿತಿಗೆ ಒಪ್ಪಿಸಲ್ಪಡುತ್ತದೆ. ಈ ಸಮಿತಿಯು ಮಂಜೂರಾದ ಎಲ್ಲ ಅಂದಾಜುಗಳನ್ನೊಗೊಂಡ ಒಂದು ವಿಧೇಯಕವನ್ನು ತಯ್ಯಾರಿಸುತ್ತದೆ. ಈ ವಿಧೇಯಕಕ್ಕೆ ಶಾಸನಸಭೆಯ ಮಂಜೂರಿ ದೊರೆತ ನಂತರ ಅದು ರಾಜ್ಯದ

ಅಧಿಪತಿಯ ಕಡೆಗೆ ಸಹಿಗಾಗಿ ಕಳಿಸಲ್ಪಡುತ್ತದೆ. ಆಗ ಅದು ಹಣಕಾಸಿನ ಕಾಯ್ದೆಯಾಗುತ್ತದೆ.

ಕಳೆದ ವರ್ಷದ ಸರಕಾರದ ಆದಾಯ ವೆಚ್ಚಗಳ ಲೆಕ್ಕಪತ್ರಗಳನ್ನು ನಿರೀಕ್ಷಿಸಲು ಶಾಸನಸಭೆಯು ತನ್ನ ಸದಸ್ಯರ ಒಂದು ತಪಾಸಣೆಯ ಸಮಿತಿಯನ್ನು ನಿಯಮಿಸುತ್ತದೆ. ಆ ಸಮಿತಿಯು ಲೆಕ್ಕ ತಪಾಸಣೆಯ ಉಚ್ಚ ಅಧಿಕಾರಿಯ ವರದಿಯನ್ನು ವಿವೇಚಿಸುವುದು. ಇದಲ್ಲದೆ ಸರಕಾರವು ಹಣಕಾಸಿನ ಕಾಯ್ದೆಗನುಸರಿಸಿ ಹಣವನ್ನು ಬಳಿಸಿದೆಯೋ ಹೇಗೆ ಎಂಬುದನ್ನು ಪರೀಕ್ಷಿಸುವುದು. ಕೊನೆಗೆ ತನ್ನ ಶಿಫಾರಸುಗಳನ್ನು ಅದು ಶಾಸನಸಭೆಗೆ ವರದಿ ಮಾಡುವುದು. ವರದಿಯಲ್ಲಿ ಗಂಭೀರ ಸ್ವರೂಪದ ಲೋಪದೋಷಗಳ ಉಲ್ಲೇಖವಿದ್ದರೆ ಶಾಸನಸಭೆಯು ಆ ಬಗ್ಗೆ ತನ್ನ ಅಭಿಪ್ರಾಯವನ್ನು ವ್ಯಕ್ತ ಮಾಡುತ್ತದೆ. ಈ ಬಗೆಯಾಗಿ ಶಾಸನಸಭೆಯು ಹಣಕಾಸಿನ ವಿಷಯದಲ್ಲಿ ಕಾರ್ಯಾಂಗದ ಮೇಲ್ವಿಚಾರಣೆ ಮಾಡುತ್ತದೆ.

ಕೆಲವು ಸಲ ರಾಜದ್ರೋಹ ಮಾಡಿದ ಉಚ್ಚ ಅಧಿಕಾರಿಗಳನ್ನು ಶಾಸನಾಂಗವೇ ನ್ಯಾಯಾಲಯವಾಗಿ ವಿಚಾರಣೆ ನಡೆಸುವುದುಂಟು. ಆದರೆ ಈಚೆಗೆ ಈ ವಿಧಾನವು ಅಪರೂಪವಾಗಿ ಉಪಯೋಗಿಸಲ್ಪಡುತ್ತದೆ.

ತಮ್ಮ ಕಾರ್ಯಕಲಾಪಗಳನ್ನು ಸುಸೂತ್ರವಾಗಿ ಮತ್ತು ದಕ್ಷತೆಯಿಂದ ಸಾಗಿಸಿಕೊಂಡು ಹೋಗಲು ಶಾಸನಸಭೆಗಳಿಗೆ ಆಡಳಿತಗಾರರ ನೆರವು ಅವಶ್ಯವಿದೆ. ಬಹಳ ವಿಷಯಗಳನ್ನು ಸ್ವಲ್ಪ ಸಮಯದಲ್ಲಿ ಕೂಲಂಕಷವಾಗಿ ಚರ್ಚೆಮಾಡಲು ಸುಲಭ ಮಾಡಿಕೊಡಬಲ್ಲ ನಿಯಮಾವಳಿಗಳು ಬೇಕು. ಈ ಕಾಲದಲ್ಲಿ ಶಾಸನಸಭೆಗಳು ಮಾಡಬೇಕಾದ ಕಾರ್ಯ ಬಹಳ ಹೆಚ್ಚಾಗಿವೆ. ಅವುಗಳ ವೇಳಾಪತ್ರಿಕೆಯನ್ನು ಬಹು ಜಾಣ್ಮೆಯಿಂದ ಸಿದ್ಧಪಡಿಸಬೇಕಾಗುತ್ತದೆ. ಆಡಳಿತೆಯ ದೃಷ್ಟಿಯಿಂದ ಆಯಾ ಕಾರ್ಯಗಳ ಮಹತ್ವ ಮತ್ತು ಅವಸರವನ್ನರಿತ ಕಾರ್ಯಾಂಗವು ಮಾತ್ರ ಶಾಸನಸಭೆಯ ಕಾರ್ಯಕಲಾಪಗಳ ವೇಳಾಪತ್ರಿಕೆಯನ್ನು ಸಿದ್ಧಪಡಿಸುವುದು ಉಚಿತ. ಇದಲ್ಲದೆ ಕಾಯ್ದೆಯ ಭೂಮಿಕೆ ಮತ್ತು ಕರಡುಗಳನ್ನು ಸಹ ಮೊದಲು ಕಾರ್ಯಾಂಗವೇ ಸಿದ್ಧಪಡಿಸಿ ಶಾಸನಸಭೆಗೆ ನೆರವಾಗುವುದು ಅವಶ್ಯ.

ಶಾಸನಾಂಗವು ಕಾಯ್ದೆ ಮಾಡಿ ಮಾಡಿದಷ್ಟಕ್ಕೆ ಅದರ ಕಾರ್ಯ ಮುಗಿಯಲಿಲ್ಲ. ಆ ಕಾಯ್ದೆಗಳಿಗನುಸರಿಸಿ ಕಾರ್ಯಾಂಗವು ಕಾರ್ಯ ಮಾಡುತ್ತಿ

ದೆಯೋ ಇಲ್ಲವೋ ಎಂಬುದರ ಮೇಲ್ವಿಚಾರಣೆ ಮಾಡುವುದು ಸಹ ಅದರ ಕಾರ್ಯವಾಗಿದೆ. ಈ ಕಾರ್ಯವನ್ನು ಅದು ಹೇಗೆ ಮಾಡುತ್ತಿದೆಯೆಂಬುದನ್ನು ತಿಳಿದುಕೊಳ್ಳಬೇಕಾದರೆ ಕಾರ್ಯಾಂಗದ ರಚನೆ ಮತ್ತು ಅದರ ಕಾರ್ಯ ಕಲಾಪಗಳ ಬಗೆಯನ್ನು ನಿರೀಕ್ಷಿಸಬೇಕಾಗುತ್ತದೆ.

**೧೨. ಕಾರ್ಯಾಂಗದ ರಚನೆ ಮತ್ತು ಕಾರ್ಯಮಾಡುವ ರೀತಿ**

ಎರಡು ಪ್ರಕಾರದ ಕಾರ್ಯಾಂಗಗಳಿವೆ. ಅಮೇರಿಕೆಯ ಸಂಯುಕ್ತ ಸಂಸ್ಥಾನದಲ್ಲಿರುವಂತಹ ಅಧ್ಯಕ್ಷಕೀಯ ಕಾರ್ಯಾಂಗ ಶಾಸನ ಸಭೆಯಿಂದ ಬಹುಮಟ್ಟಿಗೆ ಸ್ವತಂತ್ರವಾಗಿರುತ್ತದೆ. ಆದರೆ ಇಂಗ್ಲಂಡದಲ್ಲಿರುವಂತಹ ಮಂತ್ರಿ ಪರಿಷತ್ತಿನ ಕಾರ್ಯಾಂಗ ಶಾಸನಾಂಗದ ಒಂದು ಸಮಿತಿಯಂತೆ ಕಾರ್ಯ ಮಾಡುತ್ತದೆ. ಇಲ್ಲಿ ಮೊದಲು ಮಂತ್ರಿ ಪರಿಷತ್ತಿನ ಕಾರ್ಯಾಂಗದ ರಚನೆ ಮತ್ತು ಇರುವಿಕೆಗಳನ್ನು ವಿವರಿಸಲಾಗುವುದು. ಏಕೆಂದರೆ, ಬಹಳ ದೇಶಗಳಲ್ಲಿ ಈ ಬಗೆಯ ಕಾರ್ಯಾಂಗಗಳೇ ಅಸ್ತಿತ್ವದಲ್ಲಿವೆ.

ಮಂತ್ರಿ ಪರಿಷತ್ತು ಶಾಸನಾಂಗದ ಒಂದು ಸಮಿತಿ. ಮಂತ್ರಿಗಳು ಶಾಸನ ಸಭೆಯ ಸದಸ್ಯರಿರಲೇಬೇಕು. ಶಾಸನ ಸಭೆಯ ಬಹುಮತ ಪಕ್ಷದ ನಾಯಕನ ರಾಜ್ಯದ ಅಧಿಪತಿಯಿಂದ ಮುಖ್ಯ ಮಂತ್ರಿಯಾಗಿ ನಿಯಮಿಸಲ್ಪಡುವ ರೂಢಿಯಿದೆ. ಮುಖ್ಯ ಮಂತ್ರಿಯಾದವನು ತನ್ನ ಪಕ್ಷದ ಸದಸ್ಯರಲ್ಲಿ ಯಾರು ಬೇಕಾದವರನ್ನು ತನ್ನ ಮಂತ್ರಿ ಪರಿಷತ್ತಿನಲ್ಲಿ ಸೇರಿಸಿಕೊಳ್ಳಬಹುದು. ಆದರೆ ಅವನು ತನ್ನ ಪಕ್ಷದ ಕೆಲ ಗಣ್ಯ ವ್ಯಕ್ತಿಗಳಿಗೂ ಮತ್ತು ಕೆಲ ಸಾಮಾಜಿಕ, ಆರ್ಥಿಕ ಮತ್ತು ಪ್ರಾದೇಶಿಕ ಹಿತಸಂಬಂಧಗಳಿಗೂ ಮಂತ್ರಿ ಪರಿಷತ್ತಿನಲ್ಲಿ ಪ್ರಾತಿನಿಧ್ಯ ಕೊಡಬೇಕಾಗುತ್ತದೆ. ಮುಖ್ಯಮಂತ್ರಿಯಾದವನು ಈ ವಿಷಯದಲ್ಲಿ ಪಕ್ಷದ ಆಂತರಿಕ ಕಲಹವನ್ನು ಎದುರಿಸಬೇಕಾಗಬಹುದು. ಈ ಕಲಹವು ಮಾತ್ರ ತೆರೆಯ ಮರೆಯಲ್ಲಿ ನಡೆಯುತ್ತದೆ. ಅಂತೂ ಮುಖ್ಯ ಮಂತ್ರಿಯಾದವನು ತನ್ನ ಮಂತ್ರಿ ಪರಿಷತ್ತಿನ ಸದಸ್ಯರ ಬಗ್ಗೆ ಒಂದು ನಿರ್ಣಯಕ್ಕೆ ಬಂದು ಅವರ ಹೆಸರುಗಳನ್ನು ರಾಜ್ಯದ ಅಧಿಪತಿಗೆ ಒಪ್ಪಿಸುತ್ತಾನೆ. ಅಧಿಪತಿಯು ಅವರನ್ನೇ ಮಂತ್ರಿಗಳೆಂದು ನಿಯಮಿಸುತ್ತಾನೆ. ಹೀಗೆ ಮಂತ್ರಿ ಪರಿಷತ್ತು ರಚಿಸಲ್ಪಡುತ್ತದೆ.

ಮುಖ್ಯ ಮಂತ್ರಿಗೆ ಮಂತ್ರಿ ಪರಿಷತ್ತಿನಲ್ಲಿ ಪ್ರಥಮಸ್ಥಾನವಿರುತ್ತದೆ. ಏಕೆಂದರೆ ಅವನು ಪಕ್ಷದ ನಾಯಕನಾಗಿರುತ್ತಾನೆ; ಶಾಸನ ಸಭೆಯ ಧುರೀ

ಣನಾಗಿರುತ್ತನೆ; ಮತ್ತು ತನ್ನ ಅಭಿಮತವನ್ನು ವಿರೋಧಿಸುವ ಮಂತ್ರಿಯು ರಾಜೀನಾಮೆ ಕೊಡುವಂತೆ ಮಾಡುತ್ತಾನೆ. ಇದಲ್ಲದೆ ಎಲ್ಲ ಮಹತ್ವದ ವಿಷಯಗಳ ಬಗ್ಗೆ ಅವನ ಮಾತೇ ಮಂತ್ರಿಪರಿಷತ್ತಿನ ಅಧಿಕೃತ ಮಾತೆನಿಸು ತ್ತದೆ. ಮಂತ್ರಿ ಪರಿಷತ್ತಿನ ಪರವಾಗಿ ಅವನೊಬ್ಬನೇ ರಾಜ್ಯದ ಅಧಿಪತಿಯ ಸಂಗಡ ನೇರವಾದ ಸಂಪರ್ಕವಿಟ್ಟುಕೊಂಡಿರುತ್ತಾನೆ. ರಾಜ್ಯದ ಅನೇಕ ದೊಡ್ಡ ಹುದ್ದೆಗಳಿಗೆ ನಿಯಮಿಸುವುದೂ, ಪದವಿ ಕೊಟ್ಟು ಗೌರವಿಸುವುದೂ, ರಾಯಭಾರಿಗಳನ್ನು ಮತ್ತು ಶಿಷ್ಟ ಮಂಡಲಗಳನ್ನು ಪರರಾಷ್ಟ್ರಗಳಿಗೆ ಕಳಿ ಸುವುದೂ ಮೊದಲಾದವು ಮುಖ್ಯ ಮಂತ್ರಿಯ ಕೈಯಲ್ಲಿರುತ್ತವೆ. ಇವ ನ್ನೆಲ್ಲ ಅವನು ಅನೇಕರ ಸಲಹೆಯ ಮೇರೆಗೆ ಮಾಡಿದರೂ ಕೊನೆಯ ನಿರ್ಣಯ ಅವನದೇ, ಆದುದರಿಂದ ಮುಖ್ಯಮಂತ್ರಿಯು ಮಂತ್ರಿಪರಿಷತ್ತಿನ ಅಡಗಲ್ಲು ಎಂದು ಹೇಳಬಹುದು.

ಮಂತ್ರಿಪರಿಷತ್ತು ಆಡಳಿತೆಯ ಧೋರಣೆಯ ಬಗ್ಗೆ ಸಾಮೂಹಿಕವಾಗಿ ಶಾಸನಾಂಗಕ್ಕೆ ಹೊಣೆಯಾಗಿರುತ್ತದೆ. ಅಂದರೆ ಮಂತ್ರಿಪರಿಷತ್ತು ಮಂಡಿ ಸಿದ ವಿಧೇಯಕಗಳಿಗೆ, ಹಣಕಾಸಿನ ಅಂದಾಜು ಪತ್ರಿಕೆಗೆ ಮತ್ತು ಇತರ ಆಡಳಿತೆಯ ಸೂಚನೆಗಳಿಗೆ ಶಾಸನ ಸಭೆಯ ಬಹುಮತದ ಬೆಂಬಲವಿರುವ ವರೆಗೆ ಅದು ಅಧಿಕಾರದಲ್ಲಿ ಉಳಿಯಬಲ್ಲದು. ಒಂದು ವೇಳೆ ಯಾವುದೇಕಾ ರಣದಿಂದ ಬಹುಮತದ ಬೆಂಬಲವು ದೊರೆಯದಿದ್ದರೆ ಅದು ಸಾಮೂಹಿ ಕವಾಗಿ ರಾಜೀನಾಮೆ ಕೊಡಬೇಕಾಗುತ್ತದೆ. ಆ ಮೇಲೆ ಶಾಸನ ಸಭೆಯ ಬೆಂಬಲ ಪಡೆಯಬಲ್ಲ ಇನ್ನೊಂದು ಮಂತ್ರಿ ಪರಿಷತ್ತು ರಚಿಸಲ್ಪಡುತ್ತದೆ.

ಎಲ್ಲ ಮಂತ್ರಿಗಳೂ ಸಾಮೂಹಿಕವಾಗಿ ಹೊಣೆಗಾರರಾಗಿರುವುದರಿಂದ ಅವರು ಎಲ್ಲ ಖಾತೆಗಳ ಆಡಳಿತೆಯ ಸಾಮಾನ್ಯ ಧೋರಣೆಯನ್ನು ವಾರ ಕ್ಕೊಂದುಸಲವಾದರೂ ಎಲ್ಲರೂ ಕೂಡಿ ಚರ್ಚಿಸಬೇಕಾಗುತ್ತದೆ. ಇಂತಹ ಚರ್ಚೆಗಳಲ್ಲಿ ಕೈಕೊಂಡನಿರ್ಣಯಗಳಿಂದ ಎಲ್ಲರೂ ಬದ್ಧರಾಗುತ್ತಾರೆ. ಯಾವುದೊಂದು ಸಾಮೂಹಿಕ ನಿರ್ಣಯವು ಶಾಸನ ಸಭೆಯ ಎದುರಿಗೆ ಬಂದಾಗ ಎಲ್ಲ ಮಂತ್ರಿಗಳೂ ಆ ನಿರ್ಣಯವನ್ನೇ ಸಮರ್ಥಿಸಬೇಕಾಗು ತ್ತದೆ. ಶಾಸನ ಸಭೆಯ ಹೊರಗೂ ಸಹ ಅವರು ಅದಕ್ಕೆ ಅಂಟಿಕೊಂಡಿರ ಬೇಕಾಗುತ್ತದೆ. ಒಂದು ವೇಳೆ ಶಾಸನ ಸಭೆಯು ಆ ನಿರ್ಣಯಕ್ಕೆ ಒಪ್ಪಿಗೆ ಕೊಡದಿದ್ದರೆ ಇಡೀಮಂತ್ರಿ ಪರಿಷತ್ತು ರಾಜೀನಾಮೆ ಕೊಡಬೇಕಾಗುತ್ತದೆ. ಈ

ಸಾಮೂಹಿಕ ಹೊಣೆಗಾರಿಕೆಯು ರಾಜ್ಯದಾಡಳಿತೆಯ ಐಕ್ಯತೆಯ ದೃಷ್ಟಿಯಿಂದ ಅತ್ಯವಶ್ಯ. ಇಲ್ಲವಾದರೆ ಆಯಾ ಮಂತ್ರಿಗಳು ಪರಸ್ಪರ ವಿರೋಧಾತ್ಮಕ ಧೋರಣೆಗಳನ್ನು ಅನುಸರಿಸುವ ಭಯವಿದೆ. ಅದರಿಂದ ಆಡಳಿತೆಯಲ್ಲಿ ಅರಾಜಕತೆ ತಲೆದೋರಬಹುದು.

ಮಂತ್ರಿ ಪರಿಷತ್ತು ಒಟ್ಟಿಗೆ ಕಾರ್ಯ ಮಾಡುತ್ತಿದ್ದರೂ ಆಯಾ ಮಂತ್ರಿಗಳು ತಮ್ಮ ತಮ್ಮ ಖಾತೆಗಳ ಆಂತರಿಕ ಆಡಳಿತೆಯ ಸುವ್ಯವಸ್ಥೆಗಾಗಿ ವೈಯುಕ್ತಿಕವಾಗಿ ಹೊಣೆಗಾರರಾಗಿರುತ್ತಾರೆ. ಪ್ರತಿಯೊಬ್ಬ ಮಂತ್ರಿಯೂ ಸರಕಾರದ ಒಂದೆರಡು ಖಾತೆಗಳ ಮುಖ್ಯಸ್ಥನಾಗಿರುತ್ತಾನೆ. ಅವನ ಕೈಕೆಳಗೆ ಸೇನಾಪತಿಗಳೂ, ಕಾರ್ಯದರ್ಶಿಗಳೂ,ಅಧಿಕಾರಿಗಳೂ, ಕಾರಕೂನರೂ,ಪೋಲೀಸರೂಮೊದಲಾದವರೆಲ್ಲ ಕೆಲಸ ಮಾಡುತ್ತಿರುತ್ತಾರೆ. ಇವರೆಲ್ಲರೂ ಸಾರ್ವಜನಿಕ ಸೇವಕರು. ಇವರು ಸರಕಾರದ ಸೇವೆಯಲ್ಲಿ ತಮ್ಮ ಜೀವಮಾನವನ್ನೇ ಕಳೆದಿರುತ್ತಾರೆ. ಇವರು ರಾಜಕಾರಣಿಗಳಲ್ಲ. ಇವರು ಮತದಾನ ಮಾಡಬಲ್ಲರಾದರೂ ರಾಜಕೀಯ ವಾದವಿವಾದಗಳಲ್ಲಿ ಇಲ್ಲವೆ ಪ್ರಚಾರ ಕಾರ್ಯದಲ್ಲಿ ಭಾಗವಹಿಸುವುದಿಲ್ಲ. ರಾಜಕಾರಣದಿಂದ ನಿರ್ಲಿಪ್ತರಾಗಿರುವುದು ಈ ಸಾರ್ವಜನಿಕ ಸೇವಾವರ್ಗದ ವೈಶಿಷ್ಟ್ಯ. ಮಂತ್ರಿಯು ತನ್ನ ಖಾತೆಯ ಸೇವಾವರ್ಗದ ಮೇಲೆ ಅಧಿಕಾರಿಯಾಗಿರುತ್ತಾನೆ. ಅವನು ಮಂತ್ರಿ ಪರಿಷತ್ತಿನ ಧೋರಣೆಯನ್ನು ಇವರಿಗೆ ತಿಳಿಸುತ್ತಾನೆ. ಆ ಧೋರಣೆಯನ್ನು ದಕ್ಷತೆಯಿಂದ ಮತ್ತು ಪ್ರಾಮಾಣಿಕೆಯಿಂದ ಆಚರಣೆಯಲ್ಲಿ ತರುವುದು ಇವರ ಕರ್ತವ್ಯ. ಒಂದು ವೇಳೆ ಅವರು ಈ ಕರ್ತವ್ಯದಲ್ಲಿ ತಪ್ಪಿದರೆ ಮಂತ್ರಿಯು ಇವರ ಮೇಲೆ ಕ್ರಮ ತೆಗೆದುಕೊಳ್ಳಬಹುದು. ಕೆಲವು ಸಲ ನ್ಯಾಯಾಲಯಗಳು ಸಾರ್ವಜನಿಕ ಸೇವಕರ ಆಚರಣೆಯನ್ನು ನಿಯಂತ್ರಿಸುತ್ತವೆ. ಆದರೆ ಶಾಸನ ಸಭೆಯು ಮಾತ್ರ ನೇರವಾಗಿ ಸಾರ್ವಜನಿಕ ಸೇವಕರ ಮೇಲೆ ಯಾವ ಕ್ರಮವನ್ನೂ ತೆಗೆದುಕೊಳ್ಳುವುದಿಲ್ಲ. ಯಾವದೊಂದು ಖಾತೆಯ ಆಡಳಿತೆಯು ಸರಿಯಾಗಿ ಸಾಗುತ್ತಿಲ್ಲವಾದರೆ ಶಾಸನ ಸಭೆಯು ಆ ಖಾತೆಯ ಮಂತ್ರಿಯನ್ನು ದೂಷಿಸಬಹುದು. ಆಡಳಿತೆಯನ್ನು ಹಿಡಿತದಲ್ಲಿಡಲು ಅಸಮರ್ಥನಾದ ಮಂತ್ರಿಯ ಬಗ್ಗೆ ಶಾಸನ ಸಭೆಯು ವೈಯುಕ್ತಿಕ ಅವಿಶ್ವಾಸ ವ್ಯಕ್ತಪಡಿಸಿದ್ದಾದರೆ, ಆ ಮಂತ್ರಿಯು ರಾಜೀನಾಮೆ ಕೊಡಬೇಕಾಗುತ್ತದೆ. ಒಂದು ಖಾತೆಯ ಆಂತರಿಕ ಆಡಳಿತೆಯ ಲೋಪದೋಷಗಳಿಗೆ ಇಡೀ ಮಂತ್ರಿ ಪರಿಷತ್ತು

ಹೊಣೆಯಾಗಿರದೆ ಆ ಖಾತೆಯ ಮಂತ್ರಿಯು ಮಾತ್ರ ಹೊಣೆಯಾಗಿರುತ್ತಾನೆ. ಇದಕ್ಕೆ ಮಂತ್ರಿಯ ವೈಯಕ್ತಿಕ ಹೊಣೆಗಾರಿಕೆಯೆನ್ನುತ್ತಾರೆ.

ಮಂತ್ರಿ ಪರಿಷತ್ತಿಗೆ ಬೆಂಬಲಕೊಡುವ ಬಹುಮತ ಪಕ್ಷವು ಶಾಸನ ಸಭೆಯಲ್ಲಿ ಇದ್ದುದಾದರೆ ಈ ಬಗೆಯ ಕಾರ್ಯಾಂಗವು ಬಹಳ ಬಲಿಷ್ಠ ವಾಗಿರುತ್ತದೆ. ಆಗ ಅದು ತನ್ನ ಹುಂಬ ಬಹುಮತವನ್ನು ಸಾಮಾಜಿಕ ಸಾಂಸ್ಕೃತಿಕ, ಆರ್ಥಿಕ ಸ್ಥಿತಿಗತಿಗಳನ್ನು ಆಮೂಲಾಗ್ರ ಬದಲು ಮಾಡಲು ಉಪಯೋಗಿಸಿಕೊಳ್ಳಬಹುದು. ಆಡಳಿತೆಯ ಸೌಲಭ್ಯದ ನೆವದಿಂದ ಅದು ಶಾಸನಾಂಗ ಮತ್ತು ನ್ಯಾಯಾಂಗಗಳಿಗೆ ಸಂಬಂಧ ಪಟ್ಟ ವಿಷಯಗಳನ್ನು ತಾನೇ ನಿರ್ಧರಿಸುವ ಅಧಿಕಾರವನ್ನು ಪಡೆಯಬಹುದು. ಆದರೂ ಅದು ತನ್ನ ಪಕ್ಷದ ಹೊಣೆಯನ್ನು ಮರೆತು ಕಾರ್ಯಮಾಡುವಂತಿಲ್ಲ. ಏಕೆಂದರೆ, ತಾನು ಅಧಿಕಾರದಲ್ಲಿದ್ದಾಗ ಸಾಧಿಸಿದ ಕಾರ್ಯದ ಬಲದಿಂದಲೆ ಅದು ಮುಂದಿನ ಚುನಾವಣೆಯನ್ನು ಎದುರಿಸಬೇಕಾಗುತ್ತದೆ.

ಇನ್ನು ಶಾಸನ ಸಭೆಯಲ್ಲಿ ಅನೇಕ ಸಣ್ಣಪಕ್ಷಗಳಿದ್ದರೆ ಮಂತ್ರಿ ಪರಿಷತ್ತು ರಚಿಸುವ ಕಾರ್ಯವೇ ಕಠಿಣವಾಗಬಹುದು. ಇಂದು ರಚಿಸಲ್ಪಟ್ಟ ಮಂತ್ರಿ ಪರಿಷತ್ತು ನಾಳೆ ಶಾಸನ ಸಭೆಯ ವಿಶ್ವಾಸ ಕಳೆದುಕೊಳ್ಳಬಹುದು. ಏಕೆಂದರೆ ಅನೇಕ ಸಣ್ಣ ಪಕ್ಷಗಳು ಕೂಡಿ ಮಂತ್ರಿ ಪರಿಷತ್ತನ್ನು ರಚಿಸುವ ಮೊದಲು ಅವು ಒಂದು ಸಾಮಾನ್ಯ ಕಾರ್ಯಕ್ರಮಕ್ಕೆ ಒಪ್ಪಿಕೊಂಡಿರುತ್ತವೆ. ಆದರೆ ಕೆಲ ದಿನಗಳಲ್ಲಿ ಯಾವುದಾದರೊಂದು ಮಹತ್ವದ ಸಮಸ್ಯೆ ಉದ್ಭವಿಸಿದ ಕೂಡಲೆ ಆ ಪಕ್ಷಗಳ ಒಡಂಬಡಿಕೆ ಕೊನೆಗೊಳ್ಳುತ್ತವೆ. ಆಗ ಮಂತ್ರಿ ಪರಿಷತ್ತಿನಲ್ಲಿ ಬಿಕ್ಕಟ್ಟು ಉಂಟಾಗಿ ರಾಜೀನಾಮೆ ಕೊಡಬೇಕಾಗುತ್ತದೆ: ಹೀಗೆ ಮೇಲಿಂದ ಮೇಲೆ ಮಂತ್ರಿ ಪರಿಷತ್ತುಗಳು ಬದಲಾಗುವ ದೇಶದಲ್ಲಿ ಸಾರ್ವಜನಿಕ ಸೇವಾವರ್ಗವು ಬಹಳ ಬಲಿಷ್ಠವಾಗುತ್ತವೆ. ಇದರ ಜೊತೆಗೆ ಶಾಸನ ಸಭೆಯ ಹಲವು ಸಮಿತಿಗಳು ಕಾರ್ಯಮಾಡುತ್ತಿರುತ್ತವೆ. ಮಂತ್ರಿ ಪರಿಷತ್ತು ಇಲ್ಲದಾಗಲೂ ರಾಜ್ಯಭಾರ ನಡೆಯಬೇಕಲ್ಲವೇ ?

ಶಾಸನಸಭೆಯ ಸದಸ್ಯರು ಆಯಾ ಖಾತೆಯ ಮಂತ್ರಿಗಳಿಗೆ ಸಮ್ಬಂಧಿಸಿದ ಬೇಕಾದ ಪ್ರಶ್ನೆಗಳನ್ನು ಕೇಳಬಹುದು. ಅವುಗಳಿಗೆ ಮಂತ್ರಿಗಳು ಸದುತ್ತರವನ್ನು ಕೊಡಬಹುದು; ಇಲ್ಲವೆ ಸಾರ್ವಜನಿಕ ಹಿತದ ನೆವದಿಂದ ಉತ್ತರ ಕೊಡಲು ನಿರಾಕರಿಸಬಹುದು. ಉತ್ತರ ಕೊಟ್ಟಾಗ ಇಲ್ಲವೆ ಕೊಡದೆ ಇದ್ದಾಗ

ಅದು ತೃಪ್ತಿಕರವಾಗಿದೆಯೋ ಇಲ್ಲವೋ ಎಂಬುದನ್ನು ಇಡೀ ದೇಶದ ಜನರೇ ತರ್ಕಿಸುವರು. ಹಾರಿಕೆಯ ಇಲ್ಲವೆ ಅತೃಪ್ತಿಕರ ಉತ್ತರಗಳು ದೇಶದ ಜನತೆಯ ವಿಶ್ವಾಸ ಕಳೆದುಕೊಳ್ಳಲು ಕಾರಣವಾಗಬಹುದು. ಅವಿಶ್ವಾಸ ಠರಾವುಗಳನ್ನು ಬಹುಶಃ ವಿರೋಧಿ ಪಕ್ಷದವರು ತರುತ್ತಾರೆ. ಶಾಸನ ಸಭೆಯಲ್ಲಿ ಬಹಿರಂಗವಾಗಿ ಮಂತ್ರಿಪರಿಷತ್ತನ್ನು ಟೀಕಿಸುವವರೂ ಅವರೇ. ಅಧಿಕಾರ ರೂಢ ಪಕ್ಷದ ಸದಸ್ಯರು ಯಾವ ವಿಧದಿಂದ ವಿರೋಧ ಪ್ರಕಟಿಸಿದರೂ ಅದು ಪಕ್ಷದ ಶಿಸ್ತುಭಂಗವೆನಿಸುವುದು. ಆದರೆ ಪ್ರಶ್ನೆಕೇಳಲು ಎಲ್ಲ ಸದಸ್ಯರಿಗೂ ಸಮ ಅವಕಾಶವಿದೆ. ಇದರಿಂದ ಆಡಳಿತದ ಲೋಪದೋಷಗಳನ್ನು ಸುಲಭವಾಗಿ ಬಯಲಿಗೆಳೆಯಬಹುದು. ಆದುದರಿಂದ ಇದು ಕಾರ್ಯಾಂಗವನ್ನೂ ಜಾಗ್ರತಗೊಳಿಸಬಲ್ಲ ಅತ್ಯಂತ ಪರಿಣಾಮಕಾರಕ ಅಸ್ತ್ರವೆಂದು ಗಣಿಸಲ್ಪಡುತ್ತದೆ.

ಇನ್ನು ಅಧ್ಯಕ್ಷಕೀಯ ಕಾರ್ಯಾಂಗದ ಸ್ವರೂಪವನ್ನು ಸ್ವಲ್ಪ ವಿವರಿಸಬೇಕಾಗಿದೆ. ಅಧ್ಯಕ್ಷನು ನೇರವಾಗಿ ಜನರಿಂದ ಆರಿಸಲ್ಪಡುತ್ತಾನೆ. ಶಾಸನ ಸಭೆಯು ಅವನನ್ನು ಪದಚ್ಯುತ ಮಾಡಲು ಬರುವುದಿಲ್ಲ. ಅವನು ತನ್ನ ಕಾರ್ಯದರ್ಶಿ ಮಂಡಲವನ್ನು ನಿರ್ಮಿಸುತ್ತಾನೆ. ಕಾರ್ಯದರ್ಶಿಗಳೆಲ್ಲ ಅವನಿಗೆ ಹೊಣೆಗಾರರಾಗಿರುತ್ತಾರೆ. ಶಾಸನಸಭೆಯು ಅವರನ್ನು ಕಿತ್ತೊಗೆಯಲಾರದು. ಅಧ್ಯಕ್ಷನಾಗಲಿ ಇಲ್ಲವೆ ಅವನ ಕಾರ್ಯದರ್ಶಿಗಳಾಗಲಿ ಶಾಸನ ಸಭೆಯೆದುರಿಗೆ ಬಂದು ತಮ್ಮ ಬೇಕುಬೇಡಗಳನ್ನು ಮಂಡಿಸಲಾರರು. ಕಾಯ್ದೆ ಮಾಡುವ ಕಾರ್ಯದಲ್ಲಿ ಇಲ್ಲವೆ ಹಣಕಾಸಿನ ಸಂಬಂಧದಲ್ಲಿ ಶಾಸನ ಸಭೆಯ ಸಿಫಾರಸಿನಂತೆ ಹೋಗಬೇಕಾಗಿಲ್ಲ. ಈ ಬಗೆಯ ರಾಜ್ಯ ವ್ಯವಸ್ಥೆಯಲ್ಲಿ ಕಾರ್ಯಾಂಗ ಮತ್ತು ಶಾಸನಾಂಗಗಳೆರಡನ್ನು ಬೇರ್ಪಡಿಸುವ ಎತ್ತುಗಡೆ ಕಾಣಿಸುತ್ತದೆ. ಆದರೆ ರಾಜ್ಯಭಾರದ ಅವಶ್ಯಕತೆಗಳು ಈ ಪ್ರತ್ಯೇಕತೆಯನ್ನು ಬಹುಮಟ್ಟಿಗೆ ತಗ್ಗಿಸುತ್ತವೆ. ಅವೆರಡರ ನಡುವೆ ಅಪ್ರತ್ಯಕ್ಷ ಸಂಪರ್ಕ ಮತ್ತು ಹೊಣೆಗಾರಿಕೆಗಳು ಉಂಟಾಗಲೇಬೇಕು. ಅಧ್ಯಕ್ಷ ಮತ್ತು ಶಾಸನಸಭೆಯ ಬಹುಮತ ಪಕ್ಷ ಒಂದೇ ಪಕ್ಷದವರಾಗಿದ್ದರೆ ಅವರಲ್ಲಿ ಒಂದು ಬಗೆಯ ಮೇಳವು ತಾನಾಗಿಯೇ ತೋರುತ್ತದೆ. ಆದರೂ ಶಾಸನಸಭೆಯ ಸಂಗಡ ನಿಕಟ ಸಂಬಂಧವಿರದ ಈ ಬಗೆಯ ಅಧ್ಯಕ್ಷೀಯ ಕಾರ್ಯಾಂಗವು ದುರ್ಬಲವಾದುದು ಎಂದು ಕೆಲವರ ಅಭಿಪ್ರಾಯ.

## ೧೩. ಕಾರ್ಯಾಂಗದ ಕಾರ್ಯಕ್ಷೇತ್ರ.

ರಾಜ್ಯವು ನಿರ್ವಹಿಸಬೇಕಾದ ಎಲ್ಲ ಕಾರ್ಯಗಳನ್ನೂ ಕಾರ್ಯಾಂಗವು ಮಾಡಬೇಕಾಗುತ್ತದೆ. ಅನುಕೂಲತೆಗಾಗಿ ಮೂರು ವಿಭಾಗಗಳನ್ನು ಮಾಡಬಹುದು. (೧) ಕಾಯ್ದೆ ಮಾಡುವ ಕಾರ್ಯದಲ್ಲಿ ಶಾಸನ ಸಭೆಗೆ ನೆರವಾಗುವುದು; (೨) ಕಾಯ್ದೆಗೆ ಅನುಗುಣವಾಗಿ ಆಡಳಿತೆ ಸಾಗಿಸುವುದು; (೩) ಕೆಲ ವಿಷಯಗಳಲ್ಲಿ ನ್ಯಾಯನಿರ್ಣಯ ಮಾಡುವುದು. ಇವುಗಳನ್ನು ಇಲ್ಲಿ ಒಂದೊಂದಾಗಿ ಪರಿಶೀಲಿಸುವುದು ವಿಹಿತ.

ಕಾರ್ಯಾಂಗದ ಉಚ್ಚ ಸ್ಥಾನಗಳಲ್ಲಿ ರಾಜಕಾರಣಿಗಳಿರುತ್ತಾರೆ. ಅವರನ್ನು ಮಂತ್ರಿಗಳೆಂದು ಕರೆಯುತ್ತಿರಬಹುದು.ಇಲ್ಲವೆ ಬೇರೊಂದು ಹೆಸರಿನಿಂದ ಕರೆಯುತ್ತಿರಬಹುದು. ಅವರು ರಾಜಕೀಯ ಪಕ್ಷದ ನಾಯಕರಾಗಿರುತ್ತಾರೆ. ಅವರ ಕೈಕೆಳಗೆ ನುರಿತ ಸಾರ್ವಜನಿಕ ಸೇವಕರು ಕಾರ್ಯ ಮಾಡುತ್ತಿರುತ್ತಾರೆ. ಸರಕಾರದ ಧೋರಣೆಯನ್ನು ನಿರ್ಧರಿಸುವುದು ಮಂತ್ರಿಗಳ ಕೆಲಸ. ಅವರು ಜನತೆಯ ಒಲವು ಅರಿತು ತಮ್ಮ ಪಕ್ಷದ ಕಾರ್ಯಕ್ರಮದೊಳಗಿನ ಒಂದು ಅವಸರದ ವಿಷಯದ ಬಗ್ಗೆ ಒಂದು ನಿರ್ಣಯಕ್ಕೆ ಬರುತ್ತಾರೆ. ಈಗ ಪಾನ ಪ್ರತಿಬಂಧ ಮಾಡಬೇಕೆಂದು ನಿರ್ಣಯಿಸಿದರೆಂದು ತಿಳಿಯೋಣ. ತಮ್ಮ ಈ ನಿರ್ಣಯವನ್ನು ಅವರು ಆಡಳಿತ ವರ್ಗದ ಉಚ್ಚ ಅಧಿಕಾರಿಗಳಿಗೆ ತಿಳಿಸುತ್ತಾರೆ. ಆಗ ಅವರು ಆ ವಿಷಯಕ್ಕೆ ಸಂಬಂಧಪಟ್ಟ ಎಲ್ಲ ಮಾಹಿತಿಯನ್ನು ಕೂಡಿಹಾಕುತ್ತಾರೆ. ಅದರ ಆಧಾರದಮೇಲೆ ಅವರು ತಮ್ಮ ಆಡಳತದ ಅನುಭವದ ದೃಷ್ಟಿಯಿಂದ ಹೊರಡುಬಹುದಾದ ಸಿದ್ಧಾಂತಗಳನ್ನು ತೆಗೆಯುತ್ತಾರೆ. ಮಾದಕ ಪೇಯಗಳಿಂದ ಬರುವ ಉತ್ಪನ್ನ, ಆ ಉದ್ಯೋಗದಲ್ಲಿ ನಿರತರಾಗಿರುವ ಜನರ ಸಂಖ್ಯೆ, ಪ್ರತಿಬಂಧಿಸಲು ಬೇಕಾಗುವ ನೌಕರರ ಸಂಖ್ಯೆ ಜನಸಾನ್ಯರ ಮೇಲಾಗುವ ಪರಿಣಾಮ, ಪ್ರತಿಬಂಧಕ ಕಾಯ್ದೆಯ ರೂಪರೇಷೆ ಮೊದಲಾದ ವಿಷಯಗಳ ಬಗ್ಗೆ ಅವರು ತಮ್ಮ ಸಿದ್ಧಾಂತಗಳನ್ನು ಮಂತ್ರಿಗಳಿಗೆ ತಿಳಿಸುತ್ತಾರೆ. ಹೀಗೆ ಆಡಳಿತಗಾರರು ಒದಗಿಸುವ ಮಾಹಿತಿ ಮತ್ತು ಸಿದ್ಧಾಂತಗಳನ್ನು ಜನರ ಬೇಕು ಬೇಡಗಳ ದೃಷ್ಟಿಯಿಂದ ಮಂತ್ರಿಗಳು ವಿಚಾರಿಸಬೇಕಾಗುತ್ತದೆ. ಆಗ ಅವರು ತಮ್ಮ ಮೊದಲಿನ ಧೋರಣೆಯನ್ನು ಪುನರ್ವಿವೇಚಿಸಬೇಕಾಗುತ್ತವೆ. ಹೀಗೆ ಕೊನೆಯ ನಿರ್ಣಯಕ್ಕೆ

ಬಂದಮೇಲೆ ಮಂತ್ರಿಗಳು ಆ ವಿಷಯವನ್ನು ಶಾಸನಸಭೆಯ ಎದುರಿಗೆ ಮಂಡಿಸುತ್ತಾರೆ. ಆಡಳಿತೆಗಾರರ ಈ ಬಗೆಯ ಸಹಾಯವಿಲ್ಲದೆ ಶಾಸನಾಂಗವು ಇಂದಿನ ಸಮಸ್ಯೆಗಳನ್ನು ಪರಿಹರಿಸಬಲ್ಲ ಕಾಯ್ದೆ ಮಾಡಲಾರರು.

ಶಾಸನ ಸಭೆಗಳು ಈಚೆಗೆ ಕೇವಲ ತಾತ್ವಿಕ ಸ್ವರೂಪದ ಕಾಯ್ದೆಗಳನ್ನು ಮಾಡಹತ್ತಿವೆ. ಕಾಯ್ದೆಗಳ ಸೂಕ್ಷ್ಮ ವಿವರಗಳನ್ನು ತುಂಬುವ ಕಾರ್ಯವನ್ನು ಅವು ಕಾರ್ಯಾಂಗಕ್ಕೇ ಬಿಟ್ಟುಕೊಡುತ್ತವೆ. ತಾತ್ವಿಕ ಸ್ವರೂಪದ ಕಾಯ್ದೆಯ ಪರಿಪೂರ್ಣತೆಗಾಗಿ ಆಡಳಿತೆಗಾರರು ನಿಯಮಗಳನ್ನೂ, ಠರಾವುಗಳನ್ನೂ, ಆಜ್ಞೆಗಳನ್ನೂ, ಪರಿಪತ್ರಗಳನ್ನೂ ಹೊರಡಿಸುತ್ತಾರೆ. ಹೀಗೆ ಮಾಡುವಾಗ ಅವರು ಮೂಲ ಕಾಯ್ದೆಯ ಪರಿಮಿತಿಯನ್ನು ವಿಸ್ತೃತಗೊಳಿಸಬಹುದು ಇಲ್ಲವೆ ಸಂಕುಚಿತಗೊಳಿಸಬಹುದು. ಈ ಬಗೆಯ ಕಾಯ್ದೆ ಪರಿಪೂರಕ ಅಧಿಕಾರವನ್ನು ಕಾರ್ಯಾಂಗವು ಬೇಡಿ ಪಡೆದಿಲ್ಲ. ಇಂದಿನ ಶಾಸನಸಭೆಗಳು ಈ ಕಾಲದ ಅನಂತ ಸಮಸ್ಯೆಗಳನ್ನು ಎದುರಿಸಬೇಕಾಗಿರುವುದರಿಂದ ಅವುಗಳಿಗೆ ಸೂಕ್ಷ್ಮ ವಿವರಗಳನ್ನೊಳಗೊಂಡ ಕಾಯ್ದೆ ಮಾಡುವುದು ಅಸಾಧ್ಯವಾಗಿದೆ. ಆದುದರಿಂದ ಆ ಕಾರ್ಯವನ್ನು ಕಾರ್ಯಾಂಗವು ಮಾಡಬೇಕಾಗಿ ಬಂದಿದೆ.

ಇನ್ನು ಆಡಳಿತೆಯ ವಿಷಯ. ಸರಕಾರದ ಬೇರೆ ಬೇರೆ ಕಾರ್ಯಗಳನ್ನು ನೆರವೇರಿಸಲು ಬೇರೆ ಬೇರೆ ಶಾಖೆಗಳನ್ನು ಮಾಡಿರುತ್ತಾರೆ—

(೧) ಹಣಕಾಸಿನ ಶಾಖೆಯು ಅಂದಾಜು ಪತ್ರಿಕೆಯನ್ನು ಸಿದ್ಧಪಡಿಸುತ್ತದೆ ; ಕಂದಾಯ ವಸೂಲು ಮಾಡುತ್ತದೆ ; ಲೆಕ್ಕ ಪತ್ರಗಳನ್ನಿಡುತ್ತದೆ ; ನಾಣ್ಯಗಳ ವಿತರಣವನ್ನು ನಿಯಂತ್ರಿಸುತ್ತದೆ ; ಸರಕಾರಿ ಸಾಲದ ವ್ಯವಸ್ಥೆ ಮಾಡುತ್ತದೆ. ಮತ್ತು ಇತರ ಹಣಕಾಸಿನ ವ್ಯವಹಾರವನ್ನು ನೋಡಿಕೋಳ್ಳುತ್ತದೆ.

(೨) ವಿದೇಶ ಶಾಖೆಯು ಪರರಾಷ್ಟ್ರಗಳಿಗೆ ರಾಯಭಾರಿಗಳನ್ನು ಕಳಿಸುತ್ತದೆ; ಪರರಾಷ್ಟ್ರಗಳ ರಾಯಭಾರಿಗಳನ್ನೂ ಬರಮಾಡಿಕೊಳ್ಳುತ್ತದೆ; ಸಾಂಸಕೃತಿಕ ಮತ್ತು ವ್ಯವಹಾರಿ ಶಿಷ್ಟಮಂಡಲಗಳನ್ನು ಕಳಿಸುತ್ತದೆ; ಪರದೇಶಗಳಿಗೆ ಹೋಗಲು ರಹದಾರಿ ಕೊಡುತ್ತದೆ. ಪರರಾಷ್ಟ್ರಗಳ ಸಂಗಡ ಒಡಂಬಡಿಕೆಗಳನ್ನು ಮಾಡಿಕೊಳ್ಳುತ್ತದೆ; ಪರದೇಶಗಳಲ್ಲಿ ಪ್ರಚಾರಕಾರ್ಯ

ಕೈಕೊಳ್ಳುತ್ತದೆ. ಸಂಯುಕ್ತ ರಾಷ್ಟ್ರ ಸಂಘದ ಸಂಗಡ ವ್ಯವಹರಿಸುತ್ತದೆ. ಮತ್ತು ಇತರ ಎಷ್ಟೋ ಕಾರ್ಯಗಳನ್ನು ಮಾಡುತ್ತದೆ.

(೩) ಸಂರಕ್ಷಣೆ ಶಾಖೆಯು ಬಾಹ್ಯ ಮತ್ತು ಆಂತರಿಕ ವೈರಿಗಳಿಂದ ರಾಷ್ಟ್ರವನ್ನು ಸಂರಕ್ಷಿಸುವ ಕಾರ್ಯದಲ್ಲಿ ತೊಡಗಿರುತ್ತದೆ. ಈ ಉದ್ದೇಶದಿಂದ ಅದು ನಾಕಷ್ಟು ಸೈನ್ಯ, ಹಡಗುವಡೆ, ವಿಮಾನಪಡೆ, ಯುದ್ಧೋಪಕರಣಗಳನ್ನು ತಯ್ಯಾರಿಸುವ ಕಾರಖಾನೆಗಳು ಮೊದಲಾದವುಗಳನ್ನು ಸುಸಜ್ಜಿತವಾಗಿರಿಸುತ್ತದೆ.

(೪) ಗೃಹ ಶಾಖೆಯು ದೇಶದ ಆಂತರಿಕ ಸುವ್ಯವಸ್ಥೆಯನ್ನು ನೋಡಿಕೊಳ್ಳುವ ಉದ್ದೇಶದಿಂದ ಪೋಲೀಸಪಡೆ, ಜೇಲುಗಳು, ಬಾಲಕ ಅಪರಾಧಿಗಳನ್ನು ಸುಧಾರಿಸುವ ಕೇಂದ್ರಗಳು ಮೊದಲಾವುಗಳನ್ನು ಇಡುತ್ತದೆ.

ಈ ಶಾಖೆಗಳು ಬಹುಕಾಲದಿಂದ ಎಲ್ಲ ರಾಜ್ಯಗಳಲ್ಲಿಯೂ ಅಸ್ತಿತ್ವದಲ್ಲಿವೆ. ಆದರೆ ಈಗೀಗ ರಾಜ್ಯವು ಲೋಕೋಪಯೋಗಿ ಕಾರ್ಯದಲ್ಲಿ ತೊಡಗಿದೆ. ಆದುದರಿಂದ ಅನೇಕ ಹೊಸ ಶಾಖೆಗಳು ಉಂಟಾಗಿವೆ. ಅವುಗಳಲ್ಲಿ ಶಿಕ್ಷಣ, ಆರೋಗ್ಯ, ಸಂಶೋಧನೆ, ಒಕ್ಕಲತನ, ಅರಣ್ಯ, ಖನಿಜ ಸಂಪತ್ತು, ನೀರಾವರಿ, ರೇಲ್ವೆ, ಮೋಟರ, ಹಡಗ, ವಿಮಾನ, ಅಂಚೆ, ತಾರು, ಆಕಾಶವಾಣಿ, ಪ್ರಚಾರ ಕಾರ್ಯ, ಸುದ್ದಿವಿತರಣ, ಚಲಚ್ಚಿತ್ರ, ಪ್ರದರ್ಶನ, ಉದ್ದಿಮೆ, ವ್ಯವಹಾರ ಮೊದಲಾದವುಗಳನ್ನು ನೋಡಿಕೊಂಡು ಹೋಗುವ ಶಾಖೆಗಳು ಮುಖ್ಯವಾಗಿವೆ. ಇವಲ್ಲದೆ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಮೇಲ್ವಿಚಾರಣೆ ಮಾಡುವ ಶಾಖೆ ಮತ್ತು ಕೂಲಿಕಾರ-ಉದ್ದಿಮೆದಾರರ ನಡುವೆ ಮಧ್ಯಸ್ತಿಕೆ ವಹಿಸುವ ಶಾಖೆಗಳಿರುತ್ತವೆ.

ರಾಜ್ಯವು ಲೋಕೋಪಯೋಗಿ ಕಾರ್ಯಗಳನ್ನು ಹೆಚ್ಚೆಚ್ಚಾಗಿ ಕೈಕೊಂಡಂತೆ ಅವುಗಳನ್ನೂ ನಿಯೋಜಿಸುವ ಅಗತ್ಯವುಂಟಾಯಿತು. ದೇಶದ ಅಭಿವೃದ್ಧಿ ಯೋಜನೆಗಳನ್ನು ತಯ್ಯಾರಿಸುವ ಕೇಂದ್ರ ಆಯೋಗ ಶಾಖೆಯು ತಲೆಯೆತ್ತಿದೆ. ಇದಲ್ಲದೆ ಸರಕಾರಕ್ಕೆ ಬೇಕಾಗುವ ಸಾಮುಗ್ರಿಗಳನ್ನು ಕೊಳ್ಳುವ, ಕಾಗದ ಪತ್ರಗಳನ್ನು ಅಚ್ಚುಹಾಕಿಸುವ ಮೊದಲಾದ ವ್ಯವಹಾರೀ ಸ್ವರೂಪದ ಉಪಶಾಖೆಗಳೂ ತಲೆಯೆತ್ತಿವೆ.

ಈ ಬಗೆಯ ಅನೇಕ ಶಾಖೆಗಳು ತಮ್ಮ ತಮ್ಮ ಕಾರ್ಯ ಮಾಡುವಾಗ ಆಯಾ ಶಾಖೆಗಳ ನಡುವೆ ಘರ್ಷಣೆಯುಂಟಾಗಬಹುದು; ಒಂದೇ

ಕೆಲಸವನ್ನು ಹಲವು ಶಾಖೆಗಳು ಮಾಡುತ್ತಿರಬಹುದು; ಇಲ್ಲವೆ ಅದನ್ನು ಯಾವ ಶಾಖೆಗಳೂ ಮಾಡದೆ ಅದರ ಹೊಣೆಯನ್ನು ಒಂದರ ಮೇಲೊಂದು ಹಾಕಲು ಪ್ರಯತ್ನಿಸುತ್ತಿರಬಹುದು. ಹೀಗಾಗದಂತೆ ಆಡಳಿತೆಯ ಶಾಖೆಗಳಲ್ಲಿ ಪರಸ್ಪರ ಸಾಮರಸ್ಯವನ್ನುಂಟು ಮಾಡುವುದು ಮಂತ್ರಿ ಪರಿಷತ್ತಿನ ಮಹತ್ವದ ಕಾರ್ಯವಾಗಿದೆ.

ಈಚೆಗೆ ಹಲವು ವಿಷಯಗಳ ಬಗ್ಗೆ ನ್ಯಾಯನಿರ್ಣಯ ಮಾಡುವ ಅಧಿಕಾರವನ್ನು ಆಡಳಿತೆಗಾರರು ಪಡೆದಿದ್ದಾರೆ. ಈ ಅಧಿಕಾರವನ್ನು ಅವರಿಗೆ ಶಾಸನ ಸಭೆಗಳೇ ಕೊಟ್ಟಿವೆ. ಆದರೆ ನ್ಯಾಯಾಲಯಗಳು ಅವರ ಈ ಅಧಿಕಾರವನ್ನು ಅಷ್ಟೊಂದು ಒಳ್ಳೆಯ ದೃಷ್ಟಿಯಿಂದ ಕಾಣುತ್ತಿಲ್ಲ. ಏಕೆಂದರೆ ಆಡಳಿತೆಗಾರರಿಗೆಕೊಡಲ್ಪಟ್ಟಿರುವ ನ್ಯಾಯನಿರ್ಣಯದ ಅಧಿಕಾರವು ನ್ಯಾಯಾಲಯಗಳ ಅಧಿಕಾರಕ್ಕೆ ವ್ಯತ್ಯಯವನ್ನುಂಟು ಮಾಡಿದಂತೆ ಭಾಸವಾಗುತ್ತದೆ. ನಿಜವಾಗಿ ನೋಡಿದರೆ, ಇಂದಿನ ಕಾಲದ ಸ್ಥಿತಿಗತಿಗಳೇ ಆಡಳಿತೆಗಾರರಿಗೆ ನ್ಯಾಯನಿರ್ಣಯದ ಅಧಿಕಾರ ಕೊಡಲು ಒತ್ತಾಯಪಡಿಸಿವೆ. ಅವರ ಈ ಅಧಿಕಾರವು ನ್ಯಾಯಾಲಯಗಳ ನ್ಯಾಯದಾನ ಕಾರ್ಯಕ್ಕೆ ಪೂರಕವಾಗಿದೆಯಲ್ಲದೆ ವಿರೋಧಕವಾಗಿಲ್ಲ. ಈ ಮಾತನ್ನು ಒಂದು ನಿದರ್ಶನದಿಂದ ಸ್ಪಷ್ಟಪಡಿಸಬಹುದು.

ಒಬ್ಬ ವಿದ್ಯಾಶಾಖೆಯ ಅಧಿಕಾರಿಯು ಒಂದು ಶಾಲೆಗೆ ಸರಕಾರದಿಂದ ದೊರೆಯುವ ಸಹಾಯಧನದಲ್ಲಿ ಕೆಲವೊಂದು ಕಾರಣಗಳಿಗಾಗಿ ಕಡಿತ ಮಾಡಿದ್ದಾನೆಂದು ತಿಳಿಯೋಣ. ಆಗ ಶಾಲೆಯ ಸಂಚಾಲಕರು ವಿದ್ಯಾಶಾಖೆಯ ಉಚ್ಚ ಅಧಿಕಾರಿಯ ಕಡೆಗೆ ತಮ್ಮ ದೂರು ಒಯ್ಯಬಹುದು. ಆ ಅಧಿಕಾರಿಯು ಅವರ ದೂರನ್ನು ನಿರಾಕರಿಸಿದರೆ, ಆ ವಿಷಯವನ್ನು ಶಿಕ್ಷಣ ಮಂತ್ರಿಗಳ ಕಡೆಗೆ ಒಯ್ಯಬಹುದು. ಆದರೆ ಅಲ್ಲಿಯೂ ಸಹ ಅದು ನಿರಾಕರಿಸಲ್ಪಟ್ಟರೆ ಶಾಲೆಯ ಸಂಚಾಲಕರು ಅದನ್ನು ಸಾಮಾನ್ಯ ನ್ಯಾಯಾಲಯದೆದುರು ಒಯ್ಯಲಾರರು. ನ್ಯಾಯಾಲಯವು ಆಡಳಿತದ ನಿರ್ಣಯವನ್ನು ಪ್ರಶ್ನಿಸಲಾರದು. ಒಂದು ವೇಳೆ ನ್ಯಾಯಾಲಯಗಳು ಈ ಬಗೆಯ ಆಡಳಿತೆಯ ನಿರ್ಣಯಗಳನ್ನು ಪ್ರಶ್ನಿಸತೊಡಗಿದರೆ ಆಡಳಿತೆಯೇ ನಿಂತುಹೋಗಬಹುದು.

ಆಡಳಿತೆಗಾರರು ತಮ್ಮ ನ್ಯಾಯನಿರ್ಣಯ ಅಧಿಕಾರದ ದುರುಪಯೋಗ ಮಾಡುವ ಸಂಭವವೂ ಇದೆ. ಮೇಲಿನ ನಿದರ್ಶನದಲ್ಲಿ ಕೆಳಗಿನ ಅಧಿಕಾರಿಯು

ತನ್ನ ದರ್ಪ ಪ್ರದರ್ಶಿಸಲು ಸಹಾಯಧನದಲ್ಲಿ ಕಡಿತ ಮಾಡಿರಬಹುದು; ಮೇಲಧಿಕಾರಿಗಳನ್ನು ತೃಪ್ತಿಬಡಿಸಿ ಬಡತಿದೊರಕಿಸುವ ಇಚ್ಛೆಯಿಂದ ಹಾಗೆ ಮಾಡಿರಬಹುದು; ಇಲ್ಲವೆ ಸರಕಾರದ ಗುಪ್ತ ಆದೇಶದ ಮೇರೆಗೆ ಅವನು ಹಾಗೆ ಮಾಡಿರಬಹುದು. ಮೇಲಧಿಕಾರಿಯು ಕೆಳ ಅಧಿಕಾರಿಯ ಬೆನ್ನುಕಟ್ಟ ಬಹುದು; ಇಲ್ಲವೆ ಅವನು ಮಾಡಿದ ವರದಿಯನ್ನು ನಂಬಿ ಹಾಗೆ ಮಾಡ ಬಹುದು. ಈ ಬಗೆಯ ಅನ್ಯಾಯಕ್ಕೆ ಅವಕಾಶವಿರುವುದಾದರೂ ಸಾಮಾನ್ಯ ವಾಗಿ ಆಡಳಿತೆಗಾರರು ನಿಷ್ಪಕ್ಷಪಾತತನದಿಂದ ನಿರ್ಣಯ ಕೈಕೊಳ್ಳುವರೆಂದು ಹೇಳಬಹುದು.

ಆಡಳಿತೆಗಾರರು ಕೊಡುವ ಪರಿಹಾರವು ಅಷ್ಟು ವೆಚ್ಚದಾಯಕವಾಗಿರು ವುದಿಲ್ಲ. ಇದಲ್ಲದೆ ನ್ಯಾಯಾಲಯಗಳಂತೆ ಸುದೀರ್ಘ ಸಮಯವನ್ನೂ ತೆಗೆದು ಕೊಳ್ಳುವುದಿಲ್ಲ. ಆದುದರಿಂದ ನಾಗರಿಕರು ನ್ಯಾಯಾಲಯಗಳ ನ್ಯಾಯದಾ ನಕ್ಕಿಂತಲೂ ಆಡಳಿತೆಗಾರರ ಪರಿಹಾರವನ್ನೇ ಹೆಚ್ಚು ಅಪೇಕ್ಷಿಸುತ್ತಾರೆ.

ಅಪರಾಧಿಗೆ ಕ್ಷಮೆ ಕೊಡುವ ಅಧಿಕಾರವು ಬಹುತರವಾಗಿ ಕಾರ್ಯಾಂಗದ ಮುಖ್ಯಸ್ಥನಿಗೆ ಇರುತ್ತದೆ. ಇದರಿಂದ ಕಾಯ್ದೆಯ ನ್ಯಾಯ ನಿಷ್ಠುರತೆಯನ್ನು ಸಮಯೋಚಿತವಾಗಿ ಕಡಮೆಮಾಡಲು ಬರುತ್ತದೆ.

ರಾಜ್ಯದ ಒಳ್ಳೆಯತನ ಕೆಟ್ಟತನಗಳು ಕಾರ್ಯಾಂಗದ ಆಚರಣೆಯ ಮೇಲಿಂದ ನಾಗರಿಕರಿಗೆ ಗೋಚರವಾಗುತ್ತವೆ. ಶಾಸನ ಸಭೆಗಳು ಮಾಡುವ ಕಾಯ್ದೆಯ ಉದ್ದೇಶವನ್ನು ಸಾಮಾನ್ಯವಾಗಿ ನಾಗರಿಕರು ತಿಳಿದುಕೊಳ್ಳಲು ಪ್ರಯತ್ನಿಸುವುದಿಲ್ಲ. ಆದರೆ ಅವರು ಅಧಿಕಾರಿಗಳು, ಕಾರಕೂನರು, ಪೋಲೀಸರು ಮೊದಲಾದವರು ಕಾಯ್ದೆಗಳನ್ನು ಕಾರ್ಯರೂಪದಲ್ಲಿ ತರುವ ರೀತಿಯ ಮೇಲಿಂದ ಸರಕಾರದ ಬೆಲೆ ಕಟ್ಟುತ್ತಾರೆ. ನಾಗರಿಕರ ಈ ವ್ಯಾವ ಹಾರಿಕ ದೃಷ್ಟಿ ಸಹಜವಾದುದು. ಉತ್ತಮ ಕೃತಿಗಳಿಂದ ಜನರನ್ನು ತೃಪ್ತಿ ಬಡಿಸುವ ರಾಜ್ಯವು ಮಾತ್ರ ಒಳ್ಳೆಯ ರಾಜ್ಯವಾಗಬಲ್ಲದೆ ಹೊರತು, ಆಳರಸರ ಸ್ವಯಂ ಪ್ರಶಂಶೆಯಿಂದ ಅದು ಒಳ್ಳೆಯದೆನಿಸದು.

**೧೪. ಸ್ವತಂತ್ರ ನ್ಯಾಯಾಂಗದ ಮಹತ್ವ ಮತ್ತು ಕಾರ್ಯ**

ಕಾರ್ಯಾಂಗದ ನಿರಂಕುಶತ್ವ ತಗ್ಗಿಸಲು ಜನಪ್ರಿಯ ಶಾಸನಾಂಗ ಮತ್ತು ಸ್ವತಂತ್ರ ನ್ಯಾಯಾಂಗಗಳಿಗಾಗಿ ಎಲ್ಲ ದೇಶಗಳ ಸ್ವಾತಂತ್ರ್ಯಪ್ರಿಯರೂ

ಹೋರಾಡಿದ್ದಾರೆಂಬ ಮಾತನ್ನು ಲೋಕಸತ್ತಾತ್ಮಕ ರಾಜ್ಯಪದ್ಧತಿಯ ಬೆಳವ ಣಿಗೆಯ ಇತಿಹಾಸವು ಸ್ಪಷ್ಟಪಡಿಸುತ್ತದೆ. ಇಂದು ನ್ಯಾಯಾಂಗವು ಬಹುಮ ಟ್ಟಿಗೆ ಕಾರ್ಯಾಂಗದಿಂದ ಮತ್ತು ಶಾಸನಾಂಗದಿಂದ ಸ್ವತಂತ್ರವಾಗಿದೆ. ನ್ಯಾಯಾಧೀಶರನ್ನು ನಿಯಮಿಸುವ ಅಧಿಕಾರ ಕಾರ್ಯಾಂಗಕ್ಕಿದೆ. ಆದರೆ ಅವರನ್ನು ತೆಗೆದೊಗೆಯುವ ಅಧಿಕಾರ ಅದಕ್ಕಿಲ್ಲ. ನ್ಯಾಯಾಧೀಶರು ಒಳ್ಳೆಯ ನಡತೆಯವರಿರುವ ವರೆಗೆ ಮತ್ತು ಮನಸ್ಥೈರ್ಯವುಳ್ಳವರಾಗಿರುವವರೆಗೆ ಅವರನ್ನು ಕಾರ್ಯಾಂಗವು ಪದಚ್ಯುತಗೊಳಿಸಲಾರದು. ಅನಿವಾರ್ಯ ಪ್ರಸಂಗಗಳಲ್ಲಿ ಅದು ಶಾಸನ ಸಭೆಯ ಸಮ್ಮತಿಯಿಂದ ನ್ಯಾಯಾಧೀಶರನ್ನು ಪದಚ್ಯುತಗೊಳಿಸಬಲ್ಲದು. ಇಂತಹ ಪ್ರಸಂಗ ಬರುವುದೇ ಅಪರೂಪ. ಆದುದರಿಂದ ನ್ಯಾಯಾಧೀಶರ ಸ್ಥಾನಮಾನಗಳು ಇಂಧು ಭದ್ರವಾಗಿವೆಯೆಂದು ಹೇಳಬಹುದು. ಅವರು ಕಾರ್ಯಾಂಗದ ದರ್ಪಕ್ಕೆ ತಲೆಬಾಗದೆ ತಮ್ಮ ನಿರ್ಣಯವನ್ನು ಕೊಡಬಲ್ಲರು. ಇದಲ್ಲದೆ ಅವರು ಶಾಸನಾಂಗದ ಉದ್ರೇಕ ಯುಕ್ತ ಕೂಗಾಟಕ್ಕೂ ಕಿವಿಗೊಡದೆ ವಿವೇಕಯುಕ್ತ ನಿರ್ಣಯ ಕೊಡಬಲ್ಲರು. ಜನಾಭಿಪ್ರಾಯವಾದರೂ ಅವರಿಂದ ಇದನ್ನೇ ಅಪೇಕ್ಷಿಸುತ್ತದೆ.

ಕೆಲವು ದೇಶಗಳಲ್ಲಿ ನ್ಯಾಯಾಧೀಶರು ಜನರಿಂದ ಆರಿಸಲ್ಪಡುತ್ತಾರೆ· ನ್ಯಾಯಾಧೀಶರು ಜನಪ್ರಿಯರೂ ಆಗಬೇಕು. ಮತ್ತು ನ್ಯಾಯಪ್ರಿಯರೂ ಇರಬೇಕು ಎಂಬ ಮಾತು ಅಷ್ಟೊಂದು ಸುಲಭ ಸಾಧ್ಯವಿಲ್ಲ. ಜನಪ್ರಿಯರಾ ದವರು ಕಾಯ್ದೆಗಿಂತಲೂ ಜನರ ಒಲವಿಗೆ ಹೆಚ್ಚು ಬೆಲೆಕೊಡಬಹುದು. ಅವರು ರಾಜಕಾರಣದಿಂದ ನಿರ್ಲಿಪ್ತರಾಗಿರುವುದು ವಿರಳ; ಕಾಯ್ದೆಪಂಡಿತರಾ ಗಿರುವುದೂ ವಿರಳ. ಆದುದರಿಂದ ಸಣ್ಣಪುಟ್ಟ ವಿಷಯಗಳ ಬಗ್ಗೆ ಅವರ ನಿರ್ಣಯ ಒಪ್ಪಬಹುದಲ್ಲದೆ, ನಿಷ್ಪಕ್ಷಪಾತತನ ಮತ್ತು ಕಾಯ್ದೆಪಾಂಡಿತ್ಯ ಅವಶ್ಯವಿರುವಲ್ಲಿ ಅವರ ತೀರ್ಪಿಗೆ ಒಪ್ಪುವುದು ವಿಹಿತವಲ್ಲ. ಗ್ರಾಮಪಂಚಾ ಯತಿಗಳು ಆಯ್ಕೆಹೊಂದಿದ ನ್ಯಾಯಾಲಗಳ ಪಂಕ್ತಿಯಲ್ಲಿ ಬರುತ್ತವೆ. ಆದರೆ ಅವುಗಳ ನ್ಯಾಯದಾನದ ಅಧಿಕಾರ ಮಿತವಾಗಿದೆ.

ನ್ಯಾಯಾಂಗವು ಮುಖ್ಯವಾಗಿ ಎರಡು ಕಾರ್ಯಗಳನ್ನು ಮಾಡುತ್ತ ಬಂದಿದೆ. ಸರಕಾರ ಮತ್ತು ನಾಗರಿಕರ ನಡುವಿನ ನ್ಯಾಯಗಳನ್ನೂ, ವ್ಯಕ್ತಿ ವ್ಯಕ್ತಿಗಳ ನಡುವಿನ ನ್ಯಾಯಗಳನ್ನೂ ಅದು ನಿರ್ಣಯಿಸುತ್ತ ಬಂದಿದೆ. ಜನರು

ತಮ್ಮ ತಮ್ಮೊಳಗೆ ಬಡಿದಾಡಿದಾಗ ಅವರು ನ್ಯಾಯಾಲಯದ ಎದುರಿಗೆ ತಮ್ಮ ದೂರು ಒಯ್ಯುತ್ತಾರೆ. ಯಾವನಾದರೂ ರಾಜ್ಯದ ವಿರುದ್ಧ ಅಪರಾಧವೆಸಗಿದರೆ ಅವನನ್ನು ಸರಕಾರವೇ ನ್ಯಾಯಾಲಯದ ಎದುರಿಗೆ ತರುತ್ತದೆ. ಸರಕಾರದ ಅಧಿಕಾರಿಯೊಬ್ಬನು ಕಾಯ್ದೆಬಾಹಿರ ನಿರ್ಣಯ ಕೊಟ್ಟಾಗ ಆದರ ವಿರುದ್ಧ ನಾಗರಿಕನು ತನ್ನ ದೂರನ್ನು ನ್ಯಾಯಾಲಯದ ಎದುರಿಗೆ ತರುತ್ತಾನೆ. ಹೀಗೆ ನ್ಯಾಯಾಲಯಗಳು ನಾಗರಿಕರ ಮತ್ತು ಸರಕಾರೀ ಅಧಿಕಾರಿಗಳ ತಪ್ಪು ತಿದ್ದುವ ಕಾರ್ಯದಲ್ಲಿ ತೊಡಗಿವೆ.

ಒಂದಾನೊಂದು ಕಾಲಕ್ಕೆ ಜನರ ರೂಢಿಗಳೇ ಕಾಯ್ದೆಗಳಾಗಿದ್ದವು. ಒಂದು ಸ್ಥಳದ ರೂಢಿ ಇನ್ನೊಂದು ರೂಢಿಯಂತಿರಲಿಲ್ಲ. ಆಗ ಅಲ್ಲಲ್ಲಿಯ ಸ್ಥಳಿಕ ಸಾಮಾಜಿಕ ಸಂಸ್ಥೆಗಳೇ ನ್ಯಾಯ ನಿರ್ಣಯ ಮಾಡುತ್ತಿದ್ದವು. ರಾಜ್ಯವು ಬಲಿಷ್ಠವಾಗುತ್ತ ಬಂದಂತೆ ಅದು ಜನರ ರೂಢಿಗಳನ್ನು ಅಭ್ಯಸಿಸಿ, ಅವುಗಳನ್ನು ಅನುಸರಿಸಿ ಸಾರ್ವತ್ರಿಕ ಕಾಯ್ದೆಗಳನ್ನು ಮಾಡಲಾರಂಭಿಸಿತು. ಇದು ಪಂಡಿತರ ಕಾರ್ಯ. ಆದುದರಿಂದ ಕಾಯ್ದೆಗೆ ರೂಪುಕೊಡುವ ಮತ್ತು ಕಾಯ್ದೆಯಂತೆ ನಿರ್ಣಯ ಕೊಡುವ ಕಾರ್ಯವನ್ನು ಆಳರಸರು ಕಾಯ್ದೆ ಪಂಡಿತರಿಗೇ ಒಪ್ಪಿಸಿದರು. ಮುಂದೆ ನ್ಯಾಯ ನಿರ್ಣಯಮಾಡುವ ಒಂದು ಪರಂಪರೆಯೇ ಬೆಳೆದು ಬಂದಿತು. ಈ ಪರಂಪರೆಯು ಆಡಳಿತೆಗಾರರ ಕಾಯ್ದೆಬಾಹಿರ ಆಚರಣೆಯ ಮೇಲೆ ನಿಯಂತ್ರಣವಾಗಿ ಪರಿಣಮಿಸಿತು. ನಾಗರಿಕರು ಸ್ವತಂತ್ರ ನ್ಯಾಯಾಧೀಶರ ಮಹತ್ವವನ್ನರಿತರು. ಇದರಿಂದ ನ್ಯಾಯಾಂಗದ ಸ್ಥಾನಮಾನಗಳು ಭದ್ರವಾದವು.

ಎರಡೂ ಪಕ್ಷಗಳನ್ನು ಸಮದೃಷ್ಟಿಯಿಂದ ಕಾಣುವುದೇ ನ್ಯಾಯಾಂಗದ ಶ್ರೇಷ್ಠಪರಂಪರೆ. ನ್ಯಾಯ ನಿರ್ಣಯದ ಪರಿಣಾಮದಲ್ಲಿ ನ್ಯಾಯಾಧೀಶನ ವೈಯಕ್ತಿಕ ಆಸ್ಥೆಯಿರುವದಿಲ್ಲ. ಎರಡೂ ಪಕ್ಷಗಳು ತಮ್ಮ ಸಾಕ್ಷಿ ಪುರಾವೆಗಳನ್ನು ಸಾದರ ಪಡಿಸಲು ಅನುಕೂಲವಾದ ನಿಶ್ಚಿತ ರೀತಿಯನ್ನೇ ನ್ಯಾಯಾಲಯವು ಅನುಸರಿಸುತ್ತದೆ. ಆಯಾ ಪಕ್ಷಗಳು ಕಾಯ್ದೆ ಪಂಡಿತರ ಸಹಾಯ ತೆಗೆದುಕೊಳ್ಳಲು ಅದು ಅವಕಾಶ ಕೊಡುತ್ತದೆ. ವಿಚಾರಣೆಯನ್ನು ಬಹಿರಂಗವಾಗಿ ನಡೆಸುತ್ತದೆ. ವಿಚಾರಣೆಯ ಮತ್ತು ತೀರ್ಪಿನ ಕಾಗದ ಪತ್ರಗಳನ್ನು ಕಾಯ್ದಿರಿಸುತ್ತದೆ. ಅದು ತೀರ್ಪುಕೊಡುವಾಗ ಬಹು

ತರವಾಗಿ ತನ್ನ ಹಿಂದಿನ ನಿರ್ಣಯಗಳ ನಿರ್ದಿಷ್ಟ ವಿಚಾರಸರಣಿಯನ್ನೇ ಅನುಸರಿಸುತ್ತದೆ. ನ್ಯಾಯಾಲಯದ ಈ ಪರಂಪರೆಗಳ ಬಗ್ಗೆ ನ್ಯಾಯಾಧೀಶರಲ್ಲಿ ಮತ್ತು ಕಾಯ್ದೆಪಂಡಿತರಲ್ಲಿ ಒಂದು ಬಗೆಯ ಗೌರವವಿರುತ್ತದೆ. ಈ ಎಲ್ಲ ಸಂಗತಿಗಳು ನ್ಯಾಯಾಲಯದ ನಿಷ್ಪಕ್ಷಪಾತತನಕ್ಕೆ ಪೋಷಕವಾಗಿವೆ.

ನ್ಯಾಯಾಂಗದ ಪರಂಪರೆಗಳು ನಿಷ್ಪಕ್ಷಪಾತ ನ್ಯಾಯದಾನಕ್ಕೆ ಸಹಾಯಕವಾಗಿದ್ದರೂ ಅದರ ಕೆಲವು ದೋಷಗಳು ಗಮನಾರ್ಹವಾಗಿವೆ. ನ್ಯಾಯಾಂಗವು ಸರಕಾರದ ಒಂದು ಅಂಗ. ಅಂದಮೇಲೆ ಅದು ಉತ್ತಮ ಆಡಳಿತೆಗೆ ಸಹಾಯಕವಾಗಿರಬೇಕಾದುದು ಆಗತ್ಯ. ಈ ದೃಷ್ಟಿಯಿಂದ ಪರೀಕ್ಷಿಸಿದಾಗ ಅದರ ದೋಷಗಳು ಗೋಚರವಾಗುತ್ತವೆ. ನ್ಯಾಯಾಲಯಗಳು ಅಪರಾಧಕ್ಕೆ ತಕ್ಕ ಶಿಕ್ಷೆ ವಿಧಿಸಬಲ್ಲವು; ಆದರೆ ಅಪರಾಧಗಳು ಆಗುವುದನ್ನು ತಡೆಯಲಾರವು. ಅವು ತಮ್ಮ ಎದುರಿಗೆ ಬಂದ ಸಂಗತಿಗಳ ಬಗ್ಗೆ ತೀರ್ಪು ಕೊಡಬಲ್ಲವು; ಆದರೆ ಎದುರಿಗೆ ಬರದ ಎಷ್ಟೋ ಸಂಗತಿಗಳ ಬಗ್ಗೆ ಅವು ಏನೂ ಮಾಡಲಾರವು. ಅಜ್ಞಾನದಿಂದ, ಅಂಜಿಕೆಯಿಂದ ಇಲ್ಲವೆ ದುಡ್ಡಿನ ಅಭಾವದಿಂದ ಹಲವರು ತಮಗಾಗುವ ಅನ್ಯಾಯಗಳ ಬಗ್ಗೆ ನ್ಯಾಯಾಲಯಗಳ ಎದುರಿಗೆ ದೂರು ಒಯ್ಯಲು ಅಸಮರ್ಥರಾಗಿರಬಹುದು. ಅಂಥವರಿಗೆ ಅವು ನ್ಯಾಯಕೊಡಲಾರವು. ನ್ಯಾಯಾಲಯಗಗಲ್ಲಿ ಸಾಕ್ಷಿಪುರಾವೆಗಳನ್ನು ತೆಗೆದುಕೊಳ್ಳುವ ಮತ್ತು ಅವುಗಳ ಬೆಲೆಗಳನ್ನು ಗೊತ್ತುಹಚ್ಚುವ ನಿಯಮಗಳು ಬಹಳ ಬಿಗುವಾಗಿರುತ್ತವೆ. ಎಷ್ಟೋ ಸಲ ಅವು ಅಪರಾಧಗಳ ಮೇಲೆ ಬೆಳಕು ಕೆಡಹಬಲ್ಲ ಸಾಮಾಜಿಕ, ಮಾನಸಿಕ ಮತ್ತು ಆರ್ಥಿಕ ಹಿನ್ನೆಲೆಗಳನ್ನು ವಿಚಾರಿಸುವುದೇ ಇಲ್ಲ. ನ್ಯಾಯಾಧೀಶರ ವಿಚಾರಗಳು ಪುರಾತನ ಕಾಲದ ಸಾಂಪ್ರದಾಯಗಳಿಗೆ ಅಂಟಿಕೊಂಡಿರುವ ಸಂಭವವಿದೆ. ಅವರು ಪ್ರಗತಿಪರ ಸರಕಾರದ ಧೋರಣೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾರರು. ಆಗ ಕಾಯ್ದೆ ಮಾಡಿದ ಉದ್ದೇಶವನ್ನು ಅಲಕ್ಷಿಸಿ ಅವರು ಕಾಯ್ದೆಯ ಅಪಾರ್ಥ ಮಾಡುವುದುಂಟು. ಅವರ ನಿರ್ಣಯಗಳು ವಸ್ತುಸ್ಥಿತಿಗೆ ಹೊಂದಿಕೊಳ್ಳದೆ ಇರಬಹುದು. ಕೆಲವು ಬುದ್ಧಿವಂತ ನ್ಯಾಯಾಧೀಶರು ಮಾತ್ರ ಹೊಸಯುಗದ ಅವಶ್ಯಕತೆಗಳಿಗೆ ತಕ್ಕಂತೆ ಕಾಯ್ದೆಗಳ ಅರ್ಥಮಾಡಲು ಯತ್ನಿಸಿದ್ದಾರೆ. ಆದರೆ ಸಾಮಾನ್ಯವಾಗಿ

ಅವರು ಶಾಸನ ಸಭೆಯು ಮಾಡಬಯಸುವ ಸಮಾಜಸುಧಾರಣೆಯ ಕಾಯ್ದೆ ಗಳಿಗೆ ಆತಂಕವುಂಟುಮಾಡುತ್ತ ಬಂದಿದ್ದಾರೆ. ಅಂದಮೇಲೆ, ನ್ಯಾಯಾಂಗದ ಮಹತ್ವವನ್ನು ಹೊಗಳುವ ಮುಂಚೆ ಅದರ ಈ ಬಗೆಯ ಲೋಪದೋಷ ಗಳನ್ನೂ ಗಮನಿಸಬೇಕು.

ಕೆಲವು ದೇಶಗಳಲ್ಲಿ ನ್ಯಾಯಾಂಗವು ರಾಜ್ಯಘಟನೆಯನ್ನು ಸಂರಕ್ಷಿಸುವ ಹೊಣೆಹೊತ್ತಿವೆ. ಶಾಸನಾಂಗ ಮತ್ತು ಕಾರ್ಯಾಂಗಗಳು ಆ ದೇಶಗಳಲ್ಲಿ ಘಟನೆಗೆ ವಿರೋಧವಾಗಿ ಏನನ್ನೂ ಮಾಡಲಾರವು. ಒಂದು ವೇಳೆ ಶಾಸ ನಾಂಗವು ರಾಜ್ಯಘಟನೆಯಿಂದ ತನಗೆ ದೊರತಿರುವ ಅಧಿಕಾರ ಮೀರಿ ಕಾಯ್ದೆ ಮಾಡಿದರೆ, ಆ ಕಾಯ್ದೆಯನ್ನು ನ್ಯಾಯಾಂಗವು ಘಟನಾಬಾಹಿರವೆಂದು ಸಾರುತ್ತದೆ. ನಾಗರಿಕರ ಹಕ್ಕು ಬಾಧ್ಯತೆಗಳನ್ನು ಹತ್ತಿಕ್ಕುವ ಕಾಯ್ದೆಗಳನ್ನು ನ್ಯಾಯಾಂಗವು ಈ ರೀತಿ ರದ್ದುಪಡಿಸಬಹುದು. ಕೆಲವು ಸಲ ಈ ಅಧಿಕಾರದ ದುರುಪಯೋಗ ಮಾಡಿ ಅವಶ್ಯಕ ಸುಧಾರಣೆಗಳನ್ನು ತಡೆಯಬಹುದು. ಆದರೆ ಜನರಲ್ಲಿ ಘಟನೆಯ ಬಗ್ಗೆ ಆದರವಿರುವ ವರೆಗೆ ಅವರು ನ್ಯಾಯಾಂಗದ ಇಂತಹ ಕೊರತೆಗಳನ್ನು ಔದಾರ್ಯದಿಂದ ಕಾಣುವರು.

**೧೫. ಶಾಸನ ಪ್ರಾಧಾನ್ಯ ನ್ಯಾಯಪದ್ಧತಿ.**

ಹಲವು ಲೋಕಸತ್ತಾತ್ಮಕ ರಾಜ್ಯಗಳಲ್ಲಿ ಶಾಸನ ಪ್ರಾಧಾನ್ಯ ನ್ಯಾಯ ಪದ್ಧತಿಯು ಅಸ್ತಿತ್ವದಲ್ಲಿದೆ ಈ ಪದ್ಧತಿಯ ಮುಖ್ಯ ಅಂಶಗಳನ್ನು ಈ ರೀತಿ ವಿವರಿಸಬಹುದು:—

(೧) ದೇಶದ ಸಾಮಾನ್ಯ ನ್ಯಾಯಾಲಯಗಳಲ್ಲಿ ಸಿದ್ಧವಾದ ಅಪರಾಧ ಕ್ಕಾಗಿಯಲ್ಲದೆ ಬೇರೆ ಯಾವ ಕಾರಣಗಳಿಗಾಗಿಯೂ ಯಾವ ನಾಗರಿಕನನ್ನೂ ಗುರಿಪಡಿಸಕೂಡದು.

(೨) ಕಾಯ್ದೆಗಿಂತಲೂ ಶ್ರೇಷ್ಠ ವ್ಯಕ್ತಿಯೊಬ್ಬನೂ ರಾಜ್ಯದಲ್ಲಿ ಇರ ಕೂಡದು.

(೩) ವ್ಯಕ್ತಿಯ ಸ್ಥಾನಮಾನಗಳೇನೇ ಇರಲಿ. ಪ್ರತಿಯೊಬ್ಬನೂ ದೇಶದ ಸಾಮಾನ್ಯ ಕಾಯ್ದೆಗಳಿಗೆ ಮತ್ತು ನ್ಯಾಯಾಲಯಗಳಿಗೆ ಅಂಕಿತ ವಾಗಿರಬೇಕು.

(೪) ದೇಶದಲ್ಲಿ ವಿಶಿಷ್ಟ ನ್ಯಾಯಾಲಯಗಳಿರಕೂಡದು. ಮತ್ತು ವಿಶಿಷ್ಟ ಕಾಯ್ದೆಗಳಿರಕೂಡದು.

ಈ ತತ್ವಗಳನ್ನೊಳಗೊಂಡ ನ್ಯಾಯಪದ್ಧತಿಯು ನಾಗರಿಕ ಸ್ವಾತಂತ್ರ್ಯದ ದೃಷ್ಟಿಯಿಂದ ಒಳ್ಳೆಯದೆಂದು ತಿಳಿದುಬಂದಿದೆ. ಈ ನ್ಯಾಯ ಪದ್ಧತಿಯು ಕೆಲವು ನಿರ್ದಿಷ್ಟ ವಿಧಾನಗಳ ಮೂಲಕ ನಾಗರಿಕರನ್ನು ಆಡಳಿತೆಗಾರರ ದರ್ಪದಿಂದ ಸಂರಕ್ಷಿಸುತ್ತದೆ. ಆ ವಿಧಾನಗಳು ಇಂತಿವೆ–

(೧) ಸರಕಾರಿ ಅಧಿಕಾರಿಯೊಬ್ಬನು ನಾಗರಿಕನನ್ನು ಕೇವಲ ಸಂಶಯದ ಮೇಲೆ ಬಂಧಿಸಿದಾಗ ಯಾರಾದರೂ ಆ ನಾಗರಿಕನ ಪರವಾಗಿ ನ್ಯಾಯಾಲಯಕ್ಕೆ ಬಿನ್ನವಿಸಿಕೊಂಡರೆ, ಆ ನಾಗರಿಕನನ್ನು ಏಕೆ ಬಿಡುಗಡೆ ಮಾಡಬಾರದೆಂಬ ಬಗ್ಗೆ ಸಕಾರಣ ತೋರಿಸಲು ಆ ಅಧಿಕಾರಿಗೆ ಅದು ಆಜ್ಞಾಪಿಸುತ್ತದೆ. ಒಂದುವೇಳೆ ಅಧಿಕಾರಿಯು ಸಕಾರಣ ತೋರಿಸದಿದ್ದರೆ ಆ ನಾಗರಿಕನನ್ನು ಬಂಧಮುಕ್ತ ಮಾಡಬೇಕೆಂಬ ಆದೇಶವನ್ನು ಅಧಿಕಾರಿಗೆ ಕಳಿಸುತ್ತದೆ. ಈ ಆದೇಶವನ್ನು ಮೀರಿದ ಅಧಿಕಾರಿಯನ್ನು ಅದು ದಂಡಿಸುತ್ತದೆ. (Writ of Habeas Corpus.)

(೨) ಕೆಲವು ಸಲ ನಾಗರಿಕನ ಬಿನ್ನಹದ ಮೇರೆಗೆ ಅವನ ವಿತ್ತ ಜೀವಿತಗಳಿಗೆ ಧಕ್ಕೆ ತಗಲುವಂತಹ ಕಾರ್ಯ ಮಾಡದಂತೆ ಸರಕಾರೀ ಅಧಿಕಾರಿಯನ್ನು ನಿರ್ಬಂಧಿಸುವ ಆಜ್ಞೆಯನ್ನು ನ್ಯಾಯಾಲಯವು ಕೊಡುತ್ತದೆ. (Writ of Prohibition.)

(೩) ಕೆಲವು ಸಲ ಅದು ನಾಗರಿಕನ ಬಿನ್ನಹದ ಮೇರೆಗೆ ಸರಕಾರಿ ಅಧಿಕಾರಿಯ ಹತ್ತರ ಇರುವ ಕಾಗದ ಪತ್ರಗಳನ್ನು ಸಾದರ ಪಡಿಸಬೇಕೆಂಬ ಆಜ್ಞೆ ವಿಧಿಸುತ್ತದೆ. (Writ of Certiorari.)

(೪) ಒಬ್ಬ ನಾಗರಿಕನ ಹಿತಕ್ಕಾಗಿ ಕಾರ್ಯಮಾಡಲು ಕಾಯ್ದೆಯಿಂದ ಬದ್ಧನಾದ ಸರಕಾರಿ ಅಧಿಕಾರಿಯು ಆ ಕಾರ್ಯ ಮಾಡದೆ ಇರುವಾಗ ಅವನಿಗೆ ನ್ಯಾಯಾಲವು ಆ ಕಾರ್ಯಮಾಡಿ ಮುಗಿಸುವಂತೆ ಆಜ್ಞೆಮಾಡುತ್ತದೆ. (Writ of Mandamus.)

(೫) ಸರಕಾರವು ತನ್ನ ಕರ್ತವ್ಯ ಪಾಲಿಸುವಾಗ ಸದ್ಭಾವನೆಯಿಂದ ಯಾವನೊಬ್ಬ ನಾಗರಿಕನ ವಿತ್ತಜೀವಿತಗಳಿಗೆ ಧಕ್ಕೆಯುಂಟು ಮಾಡಿದ್ದರೆ, ಆ ನಾಗರಿಕನಿಗೆ ಸರಕಾರವು ಪರಿಹಾರ ಕೊಡಬೇಕೆಂದು ನ್ಯಾಯಾಲಯವು ವಿಧಿಸುತ್ತದೆ. (Compensation.)

ಶಾಸನ ಪ್ರಾಧಾನ್ಯ ನ್ಯಾಯಪದ್ಧತಿಯ ಈ ತತ್ವಗಳು ಮತ್ತು ಪರಿಹಾರಗಳು ಶಾಂತತೆಯ ಕಾಲದಲ್ಲಿ ಸಾರ್ವತ್ರಿಕವಾಗಿರುವುದು ನಿಜ. ಆದರೆ ದೇಶಕ್ಕೆ ಗಂಡಾಂತರವೊದಗಿದ ಸಮಯದಲ್ಲಿ ಇವುಗಳನ್ನು ಯಾವ ರಾಷ್ಟ್ರವೂ ಮನ್ನಿಸುವುದಿಲ್ಲ. ದೇಶದ ಅಸ್ತಿತ್ವಕ್ಕೆ ಧಕ್ಕೆಬಂದಾಗ ನಾಗರಿಕರ ಸಾಮಾನ್ಯ ಹಕ್ಕುಬಾಧ್ಯತೆಗಳಿಗೂ ಚುತಿಯುಂಟಾಗುವುದು ಅನಿವಾರ್ಯ.

೧೬. ಆಡಳಿತ ಪ್ರಾಧಾನ್ಯ ನ್ಯಾಯಪದ್ಧತಿ.

ಫ್ರಾನ್ಸದಂತಹ ರಾಜ್ಯಗಳಲ್ಲಿ ನಾಗರಿಕರು ಮತ್ತು ಸರಕಾರೀ ಅಧಿಕಾರಿಗಳ ನಡುವಿನ ಕಲಹಗಳ ವಿಚಾರಣೆ ಮಾಡಲು ಪ್ರತ್ತ್ಯೇಕ ನ್ಯಾಯಾಲಯಗಳಿವೆ. ಈಗೀಗ ಎಲ್ಲ ದೇಶಗಳಲ್ಲಿ ಒಂದಿಲ್ಲೊಂದು ಬಗೆಯ ವಿಶಿಷ್ಟ ನ್ಯಾಯಾಲಯಗಳು ತಲೆಯೆತ್ತಿವೆ. ಇಂತಹ ಆಡಳಿತದ ನ್ಯಾಯಾಲಯಗಳು ನಾಗರಿಕ ಸ್ವಾಂತಂತ್ರ್ಯವನ್ನು ಅಪಹರಿಸುತ್ತವೆಂಬ ಕೂಗು ಕೇಳಬರುತ್ತದೆ. ಆದರೆ ವಸ್ತುಸ್ಥಿತಿಯು ಹೀಗಿಲ್ಲ. ಸಾಮಾನ್ಯ ನ್ಯಾಯಾಲಯಗಳು ಬಹಳ ಶ್ರಮ, ಹಣ ಮತ್ತು ಸಮಯ ಹರಣಮಾಡಿ ಕೊಡದೆ ಇರುವ ನ್ಯಾಯವನ್ನು ನಾಗರಿಕನಿಗೆ ಆಡಳಿತದ ನ್ಯಾಯಾಲಯಗಳು ಸುಲಭವಾಗಿ ಮತ್ತು ಸ್ವಲ್ಪೇ ವೆಚ್ಚದಲ್ಲಿ ಕೊಡಬಲ್ಲವು. ಅವು ಸರಕಾರದ ಅಧಿಕಾರಿಗಳನ್ನು ಕಾಯ್ದೆಯ ಹಿಡಿತದಿಂದ ಸಂರಕ್ಷಿಸುವುದಿಲ್ಲ. ಅವು ಸಾಮಾನ್ಯ ನ್ಯಾಯಾಲಯಗಳ ಕಾರ್ಯಕ್ಷೇತ್ರವನ್ನು ಕಸಿದುಕೊಂಡಿಲ್ಲ. ಅವು ಆಡಳಿತೆ ಸಾಗಿಸುವ ಬೇರೊಂದು ವಿಧಾನ ಮಾತ್ರ. ಕೆಳಗಿನ ನ್ಯಾಯಾಲಯಗಳ ತೀರ್ಪುಗಳನ್ನು ಉಚ್ಚ ನ್ಯಾಯಾಲಯಗಳು ಪುನಃ ಪರಿಶೀಲಿಸುವಂತೆ, ಆಡಳಿತದ ನ್ಯಾಯಾಲಯಗಳು ಸರಕಾರೀ ಅಧಿಕಾರಿಗಳ ಕೃತಿಗಳ ನ್ಯಾಯಾನ್ಯಾಯವನ್ನು ಪುನಃ ಪರಿಶೀಲಿಸುತ್ತವೆ. ಅಂದ ಮೇಲೆ ಈ ನ್ಯಾಯ ಪದ್ಧತಿಯು ಶಾಸನ ಪ್ರಾಧಾನ್ಯ ಪದ್ಧತಿಗೆ ಪೋಷಕವಾಗಿದೆಯೆಂದೇ ಹೇಳಬೇಕು.

೧೭. ಕಾಯ್ದೆಯ ಉಗಮ ಮತ್ತು ಸ್ವರೂಪ.

ರಾಜ್ಯವು ವಿಧಿಸುವ ಅಪ್ಪಣೆಯೇ ಕಾಯ್ದೆಯೆಂದು ಆಸ್ಟಿನ್ ಎಂಬವರು ಹೇಳಿದ್ದಾರೆ. ಕಾಯ್ದೆಯು ಕೇವಲ ಸಾರ್ವಭೌಮತ್ವದ ಬಲದಿಂದ ಹೊರಬಿದ್ದ ಕಟ್ಟಳೆಯೆಂದು ತಿಳಿದರೆ, ಕಾಯ್ದೆಗೂ ನೀತಿಗೂ ಯಾವ ಸಂಬಂಧವೂ ಉಳಿಯುವದಿಲ್ಲ. ಇದು ಸರಿಯಲ್ಲ. ಆಳಸರು ತಮ್ಮ ಸ್ವಾರ್ಥ ಸಾಧನೆಗಾಗಿ

ಜನರ ಮೇಲೆ ಬಲುಮೆಯಿಂದ ಹೇರಿದ ಕೆಲವು ಅನೀತಿಪರ ಕಾಯ್ದೆಗಳಿರುವು ದೇನೋನಿಜ. ಅವು ರಾಜ್ಯದ ಅಪರಿಪೂರ್ಣತೆಯನ್ನು ಪ್ರಕಟಪಡಿಸುತ್ತವೆಂದು ತಿಳಿಯಬೇಕಲ್ಲದೆ ಕಾಯ್ದೆಯ ನಿಜ ಸ್ವರೂಪವನ್ನು ಪ್ರಕಟಪಡಿಸುತ್ತವೆಂದು, ತಿಳಿಯಕೂಡದು. ಅನೀತಿಪರ ಕಾಯ್ದೆಗಳಿಂದ ಪೂರಿತವಾದ ರಾಜ್ಯಗಳು ಬಹುದಿನ ಬಾಳಲಾರವೆಂದು ಇತಿಹಾಸವು ತಿಳಿಸುತ್ತದೆ. ಈ ಐತಿಹಾಸಿಕ ಸತ್ಯವು ಕಾಯ್ದೆ ಮತ್ತು ನೀತಿಗಳ ನಡುವಿನ ನಿಕಟಸಂಬಂಧವನ್ನು ವ್ಯಕ್ತಪಡಿಸುತ್ತದೆ.

ಪ್ರತಿಯೊಬ್ಬನೂ ನ್ಯಾಯಾನ್ಯಾಯ ವಿಚಾರಗಳಿಂದ ಪರಿಪೂರಿತನಾಗಿ ರುತ್ತಾನೆ; ತನ್ನ ವಿಚಾರಗಳೇ ಸರಿಯೆಂಬ ಭಾವನೆಯಿಂದ ಪ್ರೇರಿತನಾಗಿರು ತ್ತಾನೆ. ಜೀವನದ ಎಲ್ಲ ವ್ಯವಹಾರಗಳೂ ತನ್ನ ವಿಚಾರದಂತೆ ನಡೆಯು ಬೇಕೆಂದು ಬಯಸುತ್ತಾನೆ. ಒಬ್ಬನ ವಿಚಾರ, ಭಾವನೆ ಮತ್ತು ಬಯಕೆ ಗಳು ಇನ್ನೊಬ್ಬನ ವಿಚಾರ, ಭಾವನೆ ಮತ್ತು ಬಯಕೆಗಳಂತೆಯೇ ಇರುವು ದಿಲ್ಲ. ಅವು ಕೆಲವು ಅಂಶಗಳಲ್ಲಿ ಪರಸ್ಪರ ಹೋಲುತ್ತಿರಬಹುದು ; ಇನು ಕೆಲವು ಅಂಶಗಳಲ್ಲಿ ಪರಸ್ಪರ ವ್ಯತ್ಯಾಸವಿರಬಹುದು. ಪರಸ್ಪರ ಹೋಲಿಕೆ ಯಿರುವ ವಿಚಾರಗಳು, ಭಾವನೆಗಳು ಮತ್ತು ಬಯಕೆಗಳು ಬಹುಜನರಿಗೆ ಒಪ್ಪಿತವಾಗಬಹುದು. ಕೆಲವು ಸಲ ಸಾಹಸಿಗಳು, ಚತುರರು, ಪ್ರಾಮಾಣಿ ಕರು, ಕಾರ್ಯಧುರೀಣರು, ಸಾಧುಸಂತರು ಬಿತ್ತರಿಸುವ ವಿಚಾರಗಳು ಸಮಾಜದಲ್ಲಿ ಸಾರ್ವತ್ರಿಕವಾಗಬಹುದು. ಇವೇ ಸಮಾಜನ ನೀತಿನಿಯಮ ಗಳಾಗಿ ಪರಿಣಮಿಸುವವು. ಇಂತಹ ಕೆಲವು ನಿಯಮಗಳು ಸಮಾಜದ ಭದ್ರತೆಗೆ ಅತ್ಯವಶ್ಯವೆಂದು ಕಂಡುಬಂದಾಗ, ಅವುಗಳನ್ನು ಮುರಿಯದಂತೆ ನಿರ್ಬಂಧಿಸುವ ಆವಶ್ಯಕತೆಯುಂಟಾಗುತ್ತದೆ. ಕೆಲವು ನೀತಿನಿಯಗಳನ್ನು ಬಾಹ್ಯ ನಿರ್ಬಂಧನೆಯಿಂದ ಪಾಲಿಸುವಂತೆ ಮಾಡಬಹುದು. ಇನ್ನು ಕೆಲವು ನೀತಿನಿಯಮಗಳನ್ನು ಹೀಗೆ ಬಾಹ್ಯ ನಿರ್ಬಂಧನೆಯಿಂದ ಪಾಲಿಸುವಂತೆ ಮಾಡಲು ಬರುವದಿಲ್ಲ. ಒಬ್ಬನನ್ನು ಭಾಷಣ ಮಾಡಬಾರದೆಂದು ನಿರ್ಬಂಧಿಸ ಬಹುದು; ಆದರೆ ಅವನು ಭಾಷಣ ಮಾಡಲೇಬೇಕೆಂದು ನಿರ್ಬಂಧಿ ಸುವುದು ಅಶಕ್ಯ. ಆದುದರಿಂದ ಬಾಹ್ಯ ನಿರ್ಬಂಧನೆಯಿಂದ ಒತ್ತಾಯಪಡಿ ಸಬಲ್ಲ ಆತ್ಯವಶ್ಯಕ ಸಾಮಾಜಿಕ ನೀತಿನಿಯಮಗಳನ್ನೇ ರಾಜ್ಯವು ಬಹುತರ ವಾಗಿ ಕಾಯ್ದೆಯ ತಳಹದಿಯೆಂದು ಸ್ವೀಕರಿಸುತ್ತದೆ.

ಜನರ ವಿಚಾರ, ಭಾವನೆ ಮತ್ತು ಬಯಕೆಗಳು ಸದಾ ಬದಲಾವಣೆ ಹೊಂದುತ್ತಿರುತ್ತವೆ. ಅದರಂತೆ ಅವರ ನೀತಿಯೂ ಬದಲಾಗುತ್ತದೆ. ಒಂದು ಕಾಲಕ್ಕೆ ಸಾರ್ವತ್ರಿಕ ನೀತಿಯಿಂದ ಉದ್ಭವಿಸಿದ ಕಾಯ್ದೆಯು ಬರಬರುತ್ತ ಜನರ ಬದಲಾದ ನೀತಿಗೆ ವಿರೋಧವಾಗಿ ಪರಿಣಮಿಸಬಹುದು. ಆಗ ಜನರ ವಿರೋಧ ಕಟ್ಟಿಕೊಂಡ ಹಳೆಯ ಕಾಯ್ದೆಯ ಬದಲು ಹೊಸ ನೀತಿಗೆ ಹೊಂದಿಕೊಂಡ ಹೊಸ ಕಾಯ್ದೆಯು ತಲೆಯೆತ್ತುವುದು. ಆದುದರಿಂದ ಕಾಯ್ದೆಯ ಬಗ್ಗೆ ವಿಚಾರ ಮಾಡುವಾಗ ಅದು ಶಾಶ್ವತವಾದದೆಂಬ ಕಲ್ಪನೆಯನ್ನು ತಲೆಯಲ್ಲಿ ತರಕೂಡದು.

ನ್ಯಾಯಾಲಯಗಳು ನಾಗರಿಕರನ್ನು ಒತ್ತಾಯಪಡಿಸಿ ಪಾಲಿಸುವಂತೆ ಮಾಡಬಲ್ಲ ಎಲ್ಲ ನೀತಿನಿಯಮಗಳಿಗೂ ಕಾಯ್ದೆಯೆಂದು ಹೇಳಬೇಕು. ಅವುಗಳು ಶಾಸನ ಸಭೆಗಳಿಂದ ಮಾಡಲ್ಪಟ್ಟಿರಬಹುದು ಇಲ್ಲವೆ ಆಡಳಿತೆಗಾರರ ಆಜ್ಞೆಗಳಲ್ಲಿ ಅಡಕವಾಗಿರಬಹುದು; ಜನರ ರೂಢಿಯಲ್ಲಿ ಅವು ಸ್ಥಾಪಿತವಾಗಿರಬಹುದು. ಇಲ್ಲವೆ ನ್ಯಾಯಾಧೀಶರ ಪ್ರಾಚೀನ ತೀರ್ಪುಗಳಲ್ಲಿ ಅಡಕವಾಗಿರಬಹುದು. ಒಟ್ಟಿನ ಮೇಲೆ ನ್ಯಾಯದಾನಕ್ಕೆ ಯೋಗ್ಯವೆಂದು ನ್ಯಾಯಾಲಯಗಳು ಸ್ವೀಕರಿಸುವ ಎಲ್ಲ ನಿಯಮಗಳೂ ಕಾಯ್ದೆಯೆಂದು ಹೇಳಬಹುದು.

ಪ್ರಾಚೀನ ಕಾಲದಲ್ಲಿ ಜನರ ರೂಢಿಗಳೇ ಕಾಯ್ದೆಗಳಾಗಿದ್ದವು. ಆಗ ಬಹುತರವಾಗಿ ಅರಸರು ರೂಢಿಗಳನ್ನು ಬದಲು ಮಾಡುತ್ತಿರಲಿಲ್ಲ. ಸಾಮ್ರಾಟ ಅಶೋಕನಂತಹ ಪ್ರಭಾವಿ ವ್ಯಕ್ತಿಗಳು ಮಾತ್ರ ಜನಸಾಮಾನ್ಯರ ನೀತಿಯನ್ನು ತಿದ್ದಲು ಪ್ರಯತ್ನಿಸಿರಬಹುದು. ಆದರೆ ಇಂತಹ ಪ್ರಯತ್ನಗಳು ನಡೆದುದು ವಿರಳ. ಹಿಂದುಸ್ತಾನದಲ್ಲಿ ಋಷಿವರ್ಯರು, ಸೂತ್ರಕಾರರು ಮತ್ತು ಧರ್ಮಶಾಸ್ತ್ರಜ್ಞರು ಮೊದಲಾದವರಿಂದ ಅಂದಿನ ಕಾಯ್ದೆಯು ನಿರ್ಮಾಣವಾಯಿತಲ್ಲದೆ ಅರಸರಿಂದಲ್ಲ. ಅರಸರು ಕಾಯ್ದೆ ಮಾಡಹತ್ತಿದುದು ಇತ್ತೀಚೆಗೆ.

ಶಾಸನಾಂಗ ಮತ್ತು ಕಾರ್ಯಾಂಗಗಳಿಂದ ಹೊರಬೀಳುವ ಕಾಯ್ದೆಗಳೇ ಎಲ್ಲೆಡೆಯಲ್ಲಿ ಕಂಡುಬರುವ ಇಂದಿನ ಯುಗದಲ್ಲಿ ಜನರ ರೂಢಿಗಳಿಗೆ ನ್ಯಾಯಾಲಯಗಳಲ್ಲಿ ಸ್ಥಾನವಿದೆಯೇ ಎಂದು ಸಂದೇಹ ಪಡಬಹುದು. ಇಂತಹ ಸಂದೇಹಕ್ಕೆ ಕಾರಣವಿಲ್ಲ. ಕುಟುಂಬ ಪದ್ಧತಿ, ವಿವಾಹ ಪದ್ಧತಿ, ವಾರಸಾ ಪದ್ಧತಿ, ಮಠಗಳ ವ್ಯವಸ್ಥಾಪನೆ ಮೊದಲಾದ ಹಿಂದೂ ಸಮಾಜದ

ವಿಷಯಗಳಲ್ಲಿ ಹಿಂದುಸ್ಥಾನದ ನ್ಯಾಯಾಲಯಗಳು ಬಹುತರವಾಗಿ ಜನರ ರೂಢಿಗಳನ್ನೇ ಅನುಸರಿಸುತ್ತವೆ. ಮಿತಾಕ್ಷರ, ದಾಯಭಾಗ ಮತ್ತು ಶರೀಯತಗಳಂತಹ ಪ್ರಾಚೀನ ಕಾಯ್ದೆ ಗ್ರಂಥಗಳಿಗೂ ನ್ಯಾಯಾಲಯಗಳಲ್ಲಿ ಮನ್ನಣೆಯಿದೆ. ವೈಜ್ಞಾನಿಕ ಶಾಸ್ತ್ರಗಳ ಸಿದ್ಧಾಂತಗಳಿಗೂ ನ್ಯಾಯಾಲಯಗಳಲ್ಲಿ ಮನ್ನಣೆಯಿದೆ.

ನ್ಯಾಯಾಧೀಶರೂ ಕಾಯ್ದೆ ನಿರ್ಮಾಣ ಮಾಡುತ್ತಾರೆ; ಆದರೆ ಅವರು ಕಾಯ್ದೆ ನಿರ್ಮಾಣ ಮಾಡುವ ರೀತಿಯಲ್ಲಿ ವೈಶಿಷ್ಟ್ಯವಿದೆ. ಶಾಸನಾಂಗ ಮತ್ತು ಕಾರ್ಯಾಂಗಗಳು ಮಾಡಿದ ಕಾಯ್ದೆಗಳ ಅರ್ಥವನ್ನು ಗೊತ್ತು ಹಚ್ಚುವಾಗ ಅನೇಕ ಸಂದೇಹಗಳು ಉದ್ಭವಿಸುವುದು ಅನಿವಾರ್ಯ. ಮನುಷ್ಯನು ಮಾಡಿದ ಯಾವ ಕಾಯ್ದೆಯೂ ಪರಿಪೂರ್ಣವಾಗಿರುವುದಿಲ್ಲ. ಸಂದೇಹಾಸ್ಪದ ಮಾತುಗಳ ಅರ್ಥವನ್ನು ಗೊತ್ತುಹಚ್ಚುವಾಗ ನ್ಯಾಯಾಧೀಶರು ತಮ್ಮ ಹಿಂದಿನ ನಿರ್ಣಯಗಳ ತತ್ವಸರಣಿಯನ್ನೇ ಅನುಸರಿಸುತ್ತಾರೆ. ಒಂದು ವೇಳೆ ಹಿಂದಿನ ನಿರ್ಣಯಗಳು ಬೆಳಕು ಕೆಡಹದಿದ್ದರೆ, ಅವರು ಶಾಸನ ಸಭೆಯ ಉದ್ದೇಶವೇನಿರಬಹುದೆಂಬುದನ್ನು ಊಹಿಸಬೇಕಾಗುತ್ತದೆ. ನಿಜವಾಗಿ ನೋಡಿದರೆ ಈ ಊಹೆ ನ್ಯಾಯಾಧೀಶರದೆ. ಅವರು ಊಹೆ ಮಾಡುವಾಗ ತಮ್ಮ ವಿವೇಕವನ್ನೇ ಉಪಯೋಗಿಸುತ್ತಾರೆ. ಅವರ ಊಹೆ ತಪ್ಪಿರಲಿ ಒಪ್ಪಿರಲಿ, ಅದು ಮುಂದೆ ಕಾಯ್ದೆಯ ಸ್ವರೂಪ ತಾಳುತ್ತದೆ. ಹೀಗೆ ಹಿಂದುಸ್ತಾನದ ಸಂವಿಧಾನದ ಹಲವು ಸಂದೇಹಾಸ್ಪದ ಮಾತುಗಳ ಬಗ್ಗೆ ಅತ್ಯುಚ್ಚತಮ ನ್ಯಾಯಾಲಯವು ಕೊಟ್ಟ ತೀರ್ಪುಗಳು ಹೊಸ ಕಾಯ್ದೆಯೆಂದೇ ತಿಳಿಯಲ್ಪಡುತ್ತವೆ.

**೧೪. ಕಾಯ್ದೆಯ ಪ್ರಕಾರಗಳು.**

ಕಾಯ್ದೆಗಳನ್ನು ವಿವಿಧ ಬಗೆಯಿಂದ ವಿಂಗಡಿಸಬಹುದು. ಮೊದಲನೆದಾಗಿ ಅವುಗಳನ್ನು ನಾಗರಿಕ ಕಾಯ್ದೆ ಮತ್ತು ಆಡಳಿತ ಕಾಯ್ದೆಗಳೆಂದು ವಿಂಗಡಿಸುತ್ತಾರೆ. ನಾಗರಿಕ ಕಾಯ್ದೆಯು ಕೇವಲ ನಾಗರಿಕರ ಪರಸ್ಪರ ಹಿತಸಂಬಂಧಗಳಿಗೆ ಅನ್ವಯಿಸುತ್ತದೆ. ಆಡಳಿತಗಾರರು ತಮ್ಮ ಕರ್ತವ್ಯ ಪಾಲಿಸುತ್ತಿರುವಾಗ ನಾಗರಿಕರೊಡನೆ ವ್ಯವಹರಿಸುವ ಎಲ್ಲ ಬಗೆಗಳಿಗೆ ಆಡಳಿತ ಕಾಯ್ದೆಯು ಅನ್ವಯಿಸುತ್ತದೆ. ಇಂಗ್ಲಂಡ, ಹಿಂದುಸ್ತಾನಗಳಲ್ಲಿ ಪ್ರತ್ಯೇಕ ಆಡಳಿತ ಕಾಯ್ದೆ ಇಲ್ಲ. ಅಲ್ಲಿ ಸಾಮಾನ್ಯ ಕಾಯ್ದೆಗಳೇ ನಾಗರಿಕರ ಮತ್ತು

ಸರಕಾರೀ ನೌಕರದಾರರ ನಡುವಿನ ಸಂಬಂಧಗಳಿಗೂ ಅನ್ವಯಿಸುತ್ತವೆ. ಫ್ರಾನ್ಸ ಜರ್ಮನಿಗಳಲ್ಲಿ ಪ್ರತ್ಯೇಕ ಆಡಳಿತ ಕಾಯ್ದೆಗಳಿವೆ. ನಾಗರಿಕರ ದೃಷ್ಟಿಯಿಂದ ಎರಡೂ ಪದ್ಧತಿಗಳು ಅಷ್ಟೇ ಸಾಧುವಾಗಿವೆ.

ಎರಡನೆಯದಾಗಿ ಕಾಯ್ದೆಗಳನ್ನು ತತ್ವನಿರೂಪಣೆಯ ಕಾಯ್ದೆ ಮತ್ತು ವಿಧಾನ ನಿರೂಪಣೆಯ ಕಾಯ್ದೆಗಳೆಂದು ವಿಭಾಗಿಸುವುದುಂಟು. ತತ್ವ ನಿರೂಪಣೆಯ ಕಾಯ್ದೆಗಳು ಅತ್ಯಂತ ಮಹತ್ವವಾದವುಗಳು. ನಾಗರಿಕರ ಹಕ್ಕು ಬಾಧ್ಯತೆ, ವೈಯಕ್ತಿಕ ವ್ಯವಹಾರ ಮೊದಲಾದವುಗಳ ಬಗ್ಗೆ ವ್ಯಾಖ್ಯೆ ಕೊಡುವ ಕಾಯ್ದೆಗಳೇ ತತ್ವ ನಿರೂಪಣೆಯ ಕಾಯ್ದೆಗಳು. ಈ ಕಾಯ್ದೆಗಳಲ್ಲಿ ಅಡಕವಾಗಿರುವ ಹಕ್ಕು ಬಾಧ್ಯತೆಗಳನ್ನು ನ್ಯಾಯಾಲಯದಲ್ಲಿ ಸಿದ್ಧಪಡಿಸಲು ನಿಶ್ಚಿತ ನಿಯಮಗಳು ಅವಶ್ಯ. ಈ ಅವಶ್ಯಕತೆಯನ್ನು ಪೂರೈಸುವ ಕಾಯ್ದೆಗಳೇ ವಿಧಾನ ನಿರೂಪಣೆಯ ಕಾಯ್ದೆಗಳು.

ಮೂರನೆಯದಾಗಿ ಆಸ್ತಿಪಾಸ್ತಿಯ ಕಾಯ್ದೆ ಮತ್ತು ವೈಯಕ್ತಿಕ ಕಾಯ್ದೆಗಳೆಂದು ವಿಭಾಗಿಸುತ್ತಾರೆ. ವೈಯಕ್ತಿಕ ಕಾಯ್ದೆಗಳು ವಿವಾಹ, ವಾರಸಾ, ದತ್ತಕ, ವ್ಯುತ್ಪತ್ರ ಮೊದಲಾದವುಗಳ ಬಗ್ಗೆ ಇರುತ್ತವೆ. ಈ ವಿಭಜನೆಯು ಅಷ್ಟು ಮಹತ್ವದ್ದಾಗಿಲ್ಲ.

ನಾಲ್ಕನೆಯದಾಗಿ ಕಾಯ್ದೆಗಳನ್ನು ದಿವಾಣಿ ಕಾಯ್ದೆ ಮತ್ತು ಫೌಜದಾರಿ ಕಾಯ್ದೆಗಳೆಂದು ವಿಭಾಗಿಸುತ್ತಾರೆ. ಕೊಡಕೊಳ್ಳುವ ವ್ಯವವಾರ, ದಿವಾಳಿಯ ವ್ಯವಹಾರ, ಆಸ್ತಿಪಾಸ್ತಿಯ ಹಕ್ಕು ಬಾಧ್ಯತೆ ಮತ್ತು ನಾಗರಿಕತ್ವದ ಅಪರಾಧ ಮೊದಲಾದವುಗಳ ಬಗ್ಗೆ ಇರುವ ಕಾಯ್ದೆಗಳು ದಿವಾಣಿ ಕಾಯ್ದೆಗಳು. ಫೌಜದಾರಿ ಕಾಯ್ದೆಯು ಮನುಷ್ಯನ ಅಂಗಾಂಗ, ನಾಚಿಕೆ, ಗೌರವಗಳಿಗೆ ಧಕ್ಕೆ ತರುವ ಮತ್ತು ರಾಜ್ಯದ ಭದ್ರತೆಗೆ ಧಕ್ಕೆ ತರುವ ಎಲ್ಲ ಕೃತಿಗಳನ್ನು ನಿಯಂತ್ರಿಸುತ್ತದೆ. ಫೌಜದಾರಿ ಅಪರಾಧವನ್ನೆಸಗಿದ ವ್ಯಕ್ತಿಯು ರಾಜ್ಯದ ವೈರಿಯೆಂದು ತಿಳಿಯಲ್ಪಡುತ್ತಾನೆ. ಆರೋಪಿತನನ್ನು ನ್ಯಾಯಾಲಯದ ಎದುರಿಗೆ ಸರಕಾರವೇ ಒಯ್ದು ನಿಲ್ಲಿಸುತ್ತದೆ. ಈ ತತ್ವವು ದೇಶದ ಶಾಂತಿ ಸುವ್ಯವಸ್ಥೆಗಳನ್ನು ಕಾಯ್ದುಕೊಂಡು ಹೋಗುವ ಹೊಣೆಯನ್ನು ಸರಕಾರದ ಮೇಲೆ ಹೊರಿಸುತ್ತದೆ. ಈ ಹೊಣೆಯನ್ನು ವ್ಯಕ್ತಿಗಳಿಗೆ ಬಿಟ್ಟುಕೊಟ್ಟರೆ ನಾಗರಿಕರ ಅನಾಸ್ಥೆಯ ಮೂಲಕ ಅಪರಾಧಿಗಳು ನ್ಯಾಯಾಲಯದ

ಎದುರಿಗೆ ತರಲ್ಪಡದೆ ಪಾರಾಗುವ ಸಂಭವವಿದೆ. ಶಾರದಾ ಕಾಯ್ದೆಯ ಅನುಭವವು ಈ ಮಾತಿಗೆ ಪುಷ್ಟಿ ಕೊಡುತ್ತಿದೆ. ದಿವಾಣಿ ಸ್ವರೂಪದ ಕಲಹಗಳನ್ನು ಆಯಾ ಪಕ್ಷಗಳೇ ನ್ಯಾಯಾಲಯಗಳ ಎದುರಿಗೆ ತರಬೇಕಾಗುತ್ತದೆ. ಈಚೆಗೆ ನಾಗರಿಕರು ಸಹ ಸರಕಾರದ ವಿರುದ್ಧ ದಿವಾಣಿ ಸ್ವರೂಪದ ನ್ಯಾಯಗಳನ್ನು ನ್ಯಾಯಾಲಯಗಳ ಎದುರಿಗೆ ತರುವ ಅಧಿಕಾರವನ್ನು ಪಡೆದಿದ್ದಾರೆ.

ಐದನೆಯದಾಗಿ ಕಾಯ್ದೆಗಳನ್ನು ಸ್ಥಳಿಕ ಕಾಯ್ದೆ ಮತ್ತು ಸಾರ್ವತ್ರಿಕ ಕಾಯ್ದೆಗಳೆಂದು ವಿಭಾಗಿಸುತ್ತಾರೆ. ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು ಮಾಡುವ ಕಾಯ್ದೆಗಳೂ, ಸಂಯುಕ್ತ ರಾಜ್ಯದಲ್ಲಿ ಆಯಾ ಘಟಕಗಳು ಮಾಡುವ ಕಾಯ್ದೆಗಳೂ ಸ್ಥಳಿಕ ಕಾಯ್ದೆಗಳೆನಿಸುತ್ತವೆ. ಕೇಂದ್ರ ಶಾಸನಸಭೆಗಳು ಮಾಡುವ ಕಾಯ್ದೆಗಳು ಸಾರ್ವತ್ರಿಕ ಕಾಯ್ದೆಗಳೆನಿಸುತ್ತವೆ.

ಸಂವಿಧಾನವು ಕೇವಲ ಕಾಯ್ದೆಂದು ತಿಳಿಯುವುದು ಅಸಮಂಜಸ. ಚುನಾವಣೆಯ ಪದ್ಧತಿಯನ್ನು ನಿರ್ದೇಶಿಸುವ ಕಾಯ್ದೆಯು ಸಹ ಮೇಲೆ ಕಾಣಿಸಿದ ಯಾವ ವಿಭಜನೆಯಲ್ಲಿಯೂ ಬರುವುದಿಲ್ಲ. ಕಾಯ್ದೆಯ ಸ್ವರೂಪವನ್ನು ಸುಲಭವಾಗಿ ಗುರುತಿಸುವ ಉದ್ದೇಶದಿಂದ ವಿಭಜನೆ ಮಾಡುತ್ತಾರೆ. ಆದರೆ ಎಲ್ಲ ಕಾಯ್ದೆಗಳೂ ಆಯಾ ಸಂದರ್ಭಾನುಸಾರ ಉಪಯುಕ್ತವಾಗಿರುತ್ತವೆ.

**೧೯. ಕಾಯ್ದೆ ಮತ್ತು ನಾಗರಿಕ ಸ್ವಾತಂತ್ರ್ಯ.**

ನಾಗರಿಕನ ವಿತ್ತಜೀವಿತಗಳನ್ನು ರಕ್ಷಿಸುವುದೇ ರಾಜ್ಯದ ಗುರಿ. ಈ ಗುರಿ ಸಾಧನೆಗಾಗಿ ರಾಜ್ಯವು ಹಲವಾರು ಕಾಯ್ದೆಗಳನ್ನು ಮಾಡುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಕಾಯ್ದೆಗಳು ನಾಗರಿಕನ ಸ್ವಾತಂತ್ರ್ಯ ರಕ್ಷಣೆ ಮಾಡುವಂತೆ ಕಾಣುತ್ತವೆ. ಇದು ನಿಜ. ನಾಗರಿಕನ ದೇಹ ಪವಿತ್ರವಾದುದೆಂದು ಕಾಯ್ದೆಯು ಭಾವಿಸುತ್ತದೆ. ಆದುದರಿಂದ ಅದು ಒಬ್ಬನು ಇನ್ನೊಬ್ಬನ ಜೀವಕ್ಕೆ ಧಕ್ಕೆ ತರುವ ಎಲ್ಲ ಕೃತಿಗಳು ಅಪರಾಧಗಳೆಂದು ಸಾರುತ್ತದೆ. ನಾಗರಿಕನ ದೇಹದಷ್ಟೇ ಅವನ ಮಾನವೂ ಪವಿತ್ರವಾದುದೆಂದು ಕಾಯ್ದೆಯು ಭಾವಿಸುತ್ತದೆ. ಒಬ್ಬನು ಇನ್ನೊಬ್ಬನ ಅಪಮಾನ ಮಾಡುವಂತಹ ಕೃತಿಯನ್ನೆಸಗಿದರೆ ಕಾಯ್ದೆಯು ಅಪಮಾನಿತ ವ್ಯಕ್ತಿಯ ಸಹಾಯಕ್ಕೆ ಬರುತ್ತದೆ. ಅಪಮಾನಿತ ವ್ಯಕ್ತಿಗೆ ಕಾಯ್ದೆಯು ಪರಿಹಾರ ಕೊಡದೆ ಹೋದರೆ ಜನರು

ಗೌರವದಿಂದ ಬಾಳುವುದು ಕಠಿಣ. ನಾಗರಿಕರು ನಾಚಿಕೆಪಟ್ಟುಕೊಳ್ಳುವಂತಹ ಹೇಯ ಕೃತಿಗಳಾಗದಂತೆಯೂ ಕಾಯ್ದೆಯು ಪ್ರಯತ್ನಿಸುತ್ತದೆ.

ಜನರು ತಮ್ಮ ಆಸ್ತಿಪಾಸ್ತಿಯನ್ನು ಉಪಭೋಗಿಸಬಲ್ಲ ವಾತಾವರಣವನ್ನು ಕಾಯ್ದೆಯು ಉಂಟುಮಾಡುತ್ತದೆ. ನಾಗರಿಕರ ಆಸ್ತಿಯನ್ನು ಅದು ಕಳ್ಳಕಾಕರಿಂದ, ದರೋಡೆಗಾರರಿಂದ, ಮೋಸಗಾರರಿಂದ, ಜೂಜುಗಾರರಿಂದ, ವಿನಾಶಕರಿಂದ ಮತ್ತು ಲಂಚಬಡಕರಿಂದ ರಕ್ಷಿಸುತ್ತದೆ. ಅವರ ಹೊಲಮನೆಗಳ ಒಡೆತನವನ್ನು ಕಾಪಾಡುತ್ತದೆ. ಒಡೆಯನ ಮನಸ್ಸಿನ ವಿರುದ್ಧ ಬಲವಂತಿಕೆಯಿಂದ ಇತರರು ಅವನ ಹೊಲಮನೆಗಳಲ್ಲಿ ನುಗ್ಗದಂತೆ ನೋಡಿಕೊಳ್ಳುತ್ತದೆ. ನಾಗರಿಕರು ಬ್ಯಾಂಕು, ಕಂಪನಿ, ವಿಮೆ ಮತ್ತು ಉದ್ಯಮಗಳಲ್ಲಿ ತೊಡಗಿಸಿದ ಹಣದ ಭದ್ರತೆಯನ್ನು ನೋಡಿಕೊಳ್ಳುತ್ತದೆ. ದಿವಾಳಿಖೋರರಿಂದ ಜನರ ಆಸ್ತಿಗೆ ಒದಗಬಹುದಾದ ಗಂಡಾಂತರವನ್ನು ಕಡಮೆ ಮಾಡುತ್ತದೆ. ಈ ಬಗೆಯ ಕಾಯ್ದೆಯ ನೆರವಿಲ್ಲದೆ ಆಸ್ತಿಯ ಶಾಂತ ಉಪಭೋಗವು ಕಠಿಣವಾಗುತ್ತಿತ್ತು.

ಜನರ ಕೌಟುಂಬಿಕ, ವೈವಾಹಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನವು ನೆಮ್ಮದಿಯಿಂದ ಸಾಗುವಂತೆ ಕಾಯ್ದೆಯು ತಕ್ಕ ವಾತಾವರಣವನ್ನು ಕಲ್ಪಿಸುತ್ತದೆ. ಕುಟುಂಬದ ಹಿರಿಯರ ಸ್ಥಾನವನ್ನು ರಕ್ಷಿಸುವುದಲ್ಲದೇ ಕಿರಿಯರ ಹಕ್ಕುಗಳನ್ನೂ ಅದು ರಕ್ಷಿಸುತ್ತದೆ. ಪತಿ–ಪತ್ನಿಯರ ಹಿತಸಂಬಂಧಗಳನ್ನೂ ಅದು ರಕ್ಷಿಸುತ್ತದೆ. ಒಬ್ಬನ ಧಾರ್ಮಿಕ ಭಾವನೆಗೆ ಆತಂಕವುಂಟಾಗದಂತೆ ಅದು ನೋಡಿಕೊಳ್ಳುತ್ತದೆ. ಕಲಾವಿದರೂ ವೈಜ್ಞಾನಿಕರೂ ತಮ್ಮ ತಮ್ಮ ಚಟುವಟಿಕೆಗಳಲ್ಲಿ ನಿರತರಾಗಲು ಅವಕಾಶವನ್ನು ಕಲ್ಪಿಸುತ್ತದೆ. ಹೀಗೆ ಜೀವನದ ಎಲ್ಲ ರಂಗಗಳಲ್ಲಿಯೂ ಕಾಯ್ದೆಯು ನಾಗರಿಕ ಜೀವನಕ್ಕೆ ತಕ್ಕ ವಾತಾವರಣವನ್ನು ಕಾಪಾಡುತ್ತದೆ.

ಕಾಯ್ದೆಯು ನಾಗರಿಕರನ್ನು ಸರಕಾರೀ ಅಧಿಕಾರಿಗಳ ದರ್ಪದಿಂದ ಕಾಪಾಡುತ್ತದೆ. ಒಂದು ವೇಳೆ ಅಧಿಕಾರಿಗಳು ಮನಬಂದಂತೆ ವರ್ತಿಸಹತ್ತಿದರೆ ನಾಗರಿಕ ಸ್ವಾತಂತ್ರ್ಯವೆಂಬುದೇ ಸಾಧ್ಯವಿಲ್ಲ. ತೈಮೂರಲಿಂಗನ ರಾಜ್ಯದ ಹಿಂಸಾಮಯ ಸ್ಥಿತಿಗತಿಗಳೇ ಎಲ್ಲೆಡೆಯಲ್ಲಿಯೂ ಉಂಟಾಗಬಹುದು. ಸರಕಾರೀ ಅಧಿಕಾರಿಗಳು ನಿಷ್ಕಾರಣವಾಗಿ ನಾಗರಿಕರನ್ನು ಬಂಧಿಸಲಾರರು,

ಭಾಷಣ ಮಾಡದಂತೆ ಪ್ರತಿಬಂಧಿಸಲಾರರು, ಅತ್ತಿತ್ತ ಅಲೆಯದಂತೆ ನಿರ್ಬಂಧಿಸಲಾರರು, ಅವರ ಆಸ್ತಿಯನ್ನು ಕಸಿದುಕೊಳ್ಳಲಾರರು, ಅವರ ಧರ್ಮವನ್ನು ಹಾಳುಮಾಡಲಾರರು, ಇಲ್ಲವೆ ಸಾಂಸ್ಕೃತಿಕ ಚಟುವಟಿಕೆಗಳನ್ನು ತಡೆಯಲಾರರು. ಕಾಯ್ದೆಯ ಇಂತಹ ಸಂರಕ್ಷಣೆ ಇದ್ದಾಗಲೇ ನಾಗರಿಕ ಸ್ವಾತಂತ್ರ್ಯ ಸಾಧಿಸುತ್ತದೆ.

ಕಾಯ್ದೆಗಳು ಜನರ ಸ್ವಾತಂತ್ರ್ಯ ರಕ್ಷಣೆ ಮಾಡುತ್ತಿರುವುದೇನೋ ನಿಜ. ಆದರೆ ಇನ್ನೊಂದು ದೃಷ್ಟಿಯಿಂದ ನೋಡಿದಾಗ ಅವು ನಾಗರಿಕರ ಸ್ವೇಚ್ಛಾ ವೃತ್ತಿಯನ್ನು ನಿರ್ಬಂಧಿಸುವಂತೆ ಕಾಣುತ್ತವೆ. ಪರರ ಜೀವ ಮತ್ತು ಗೌರವಗಳ ಮೇಲೆ ಹಲ್ಲೆ ಮಾಡದಂತೆ ದುಷ್ಟನನ್ನು ನಿಗ್ರಹಿಸುತ್ತವೆ. ಕಳ್ಳನು ಇತರರ ವಸ್ತುಗಳನ್ನು ಕದ್ದೊಯ್ಯದಂತೆ ಪ್ರತಿಬಂಧಿಸುತ್ತವೆ. ವಂಚಕನ ವಂಚನೆಯನ್ನು ತಡೆಯುತ್ತವೆ. ದಿವಾಳಿಖೋರರು ಇತರರ ಆಸ್ತಿಯನ್ನು ಎತ್ತಿಹಾಕದಂತೆ ನೋಡುತ್ತವೆ. ಜನರನ್ನು ಹಿಂಸಾತ್ಮಕ ಕೃತಿಗಾಗಿ ಉದ್ರೇಕಿಸದಂತೆ ರಾಜಕಾರಣಿಯನ್ನು ನಿರ್ಬಂಧಿಸುತ್ತವೆ. ಹಿಂಸಾತ್ಮಕ ಉದ್ದೇಶದಿಂದ ಜನರು ಸಂಘಟಿತರಾಗುವುದನ್ನು ತಡೆಯುತ್ತವೆ. ಸರಕಾರೀ ಅಧಿಕಾರಿಗಳ ಕಾಯ್ದೆಬಾಹಿರ ದರ್ಪವನ್ನು ತಡೆಯುತ್ತವೆ. ಪತಿಯು ಪತ್ನಿಯನ್ನು ನಿಷ್ಕಾರಣವಾಗಿ ಅಗಲಿಸುವುದನ್ನು ತಡೆಯುತ್ತವೆ. ಬಹಿಷ್ಕಾರದ ಮೂಲಕ ನಾಗರಿಕನ ಮೇಲೆ ಒತ್ತಾಯ ತರುವ ಸಮಾಜದ ಕೃತಿಯನ್ನು ಪ್ರತಿಬಂಧಿಸುತ್ತವೆ. ಹೀಗೆ ಕಾಯ್ದೆಗಳು ವಿಧಿಸುವ ಪ್ರತಿಬಂಧನೆಗಳಿಗೆ ಕೊನೆಮೊದಲಿಲ್ಲ. ಸೂಕ್ಷ್ಮವಾಗಿ ವಿಚಾರಮಾಡಿ ನೋಡಿದರೆ ಈ ಬಗೆಯ ಪ್ರತಿಬಂಧನೆಗಳೆಲ್ಲ ನಾಗರಿಕ ಸ್ವಾಂತ್ರ್ಯದ ಹಿತದ ದೃಷ್ಟಿಯಿಂದ ವಿಧಿಸಲ್ಪಟ್ಟಿವೆಯೆಂದು ಅನಿಸದೆ ಇರದು.

ದಟ್ಟ ಜನವಸತಿಯಿರುವ ಸ್ಥಳದಲ್ಲಿ ಇರುವ ಒಂದು ಸಂಗೀತ ಶಾಲೆಯ ನಿದರ್ಶನವನ್ನು ಇಲ್ಲಿ ತೆಗೆದುಕೊಳ್ಳಬಹುದು. ಸಂಗೀತವೇನೋ ಒಳ್ಳೆಯದು. ಮನುಷ್ಯನು ಪ್ರಶಾಂತನಾಗಿದ್ದಾಗ ಅದರಿಂದ ಉತ್ಕಟ ಆನಂದ ಪಡೆಯಬಲ್ಲನು. ಆದರೆ ಸಂಗೀತ ಶಾಲೆಯ ನೆರೆಹೊರೆಯಲ್ಲಿರುವ ಗ್ರಹಸ್ಥರು ಹಗಲಿರುಳೂ ಸಂಗೀತವನ್ನೇ ಕೇಳುವ ಪ್ರಸಂಗಬಂದರೆ ಅವರ ಜೀವನ ಶಾಂತಿಯೇ ಹಾಳಾಗಿ ಹೋಗಬಹುದು. ಸಂಗೀತಶಾಲೆ ನಡೆಸಲು ಸಂಗೀತಗಾರನಿಗೆ ಸ್ವಾತಂತ್ರ್ಯವಿರುವುದೇನೋ ನಿಜ. ಆದರೆ ಅದರ ಜೊತೆಗೆ ನೆರೆ

ಹೊರೆಯವರ ಶಾಂತಿ ಹಾಳಾಗಿ ಹೋಗದಂತೆ ನೋಡಿಕೊಳ್ಳುವ ಹೊಣೆಯೂ ಆವನ ಮೇಲಿದೆ. ಹೊಣೆಯರಿತ ಸ್ವಾತಂತ್ರ್ಯವೇ ನಿಜವಾದ ಸ್ವಾತಂತ್ರ್ಯ. ಹೊಣೆಗೆಟ್ಟ ಸ್ವಾತಂತ್ರ್ಯ ಸ್ವೇಚ್ಛಾಚಾರ ಸಂಗೀತಗಾರನ ಸಂಗೀತಶಾಲೆಯ ಅವಧಿಯನ್ನು ಕಾಯ್ದೆಯು ನಿಯಂತ್ರಿಸುವುದಲ್ಲದೆ ಅವನ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವುದಿಲ್ಲ. ಕಾಯ್ದೆಯು ಸ್ವೇಚ್ಛಾಚಾರವನ್ನು ಪ್ರತಿಬಂಧಿಸುತ್ತದೆಯಲ್ಲದೆ ನಿಜವಾದ ಸ್ವಾತಂತ್ರ್ಯವನ್ನಲ್ಲ.

**೨೦. ಕಾಯ್ದೆಯ ಹಿನ್ನೆಲೆಯಲ್ಲಿರುವ ಬಲಗಳು.**

ಕಾಯ್ದೆಯ ಹಿನ್ನಲೆಯಲ್ಲಿ ರಾಜಕೀಯ ಬಲದ ಅಟ್ಟಹಾಸವಿದ್ದೇ ಇರುತ್ತದೆ. ಅದನ್ನು ಮುರಿದ ಸಂಗತಿಯು ನ್ಯಾಯಾಲಯದಲ್ಲಿ ಸಿದ್ಧವಾದರೆ ನಾಗರಿಕನು ಒಂದಿಲ್ಲೊಂದು ಬಗೆಯ ದಂಡನೆಗೆ ಗುರಿಯಾಗುತ್ತಾನೆ. ಆದರೆ ಈ ಬಗೆಯ ದಂಡನೆಯ ಭಯದಿಂದಲೇ ನಾಗರಿಕರು ಕಾಯ್ದೆಯನ್ನು ಪಾಲಿಸುತ್ತಾರೆಂದು ಯಾರೂ ತಿಳಿಯಕೂಡದು. ಸರಕಾರೀ ಅಧಿಕಾರಿಗಳಿಗೆ ತಿಳಿದೂ ತಿಳಿಯದೆಯೂ ಎಷ್ಟೋ ಕಾಯ್ದೆ ವಿರೋಧೀ ಕೃತಿಗಳನ್ನು ಜನರು ಮಾಡುತ್ತಲೇ ಇರುತ್ತಾರೆ. ಅಂತಹ ಕೃತಿಗಳ ಬಗ್ಗೆ ಸಾಕಷ್ಟು ಪುರಾವೆಗಳು ದೊರೆಯುವ ವರೆಗೆ ಅವು ನ್ಯಾಯಾಲಯಗಳ ಎದುರಿಗೆ ಬರುವುದಿಲ್ಲ. ಅಂದ ಮೇಲೆ ಜನರ ಕಾಯ್ದೆಬದ್ಧ ನಡತೆಗೆ ದಂಡನೆಯ ಭಯವಲ್ಲದೆ ಬೇರೆ ಕೆಲವು ಕಾರಣಗಳಿರಲೇಬೇಕು.

ಕಾಯ್ದೆಯು ಪರಿಪೂರ್ಣವಿರುವುದಿಲ್ಲ. ಜನರು ಅದಕ್ಕೆ ಸಮ್ಮತಿಸಿ ಅದರಂತೆ ನಡೆದಾಗ ಅದು ಪರಿಪೂರ್ಣತೆಯನ್ನು ಪಡೆಯುತ್ತದೆ. ದಂಡನೆಯ ಪರವೆಯಿಲ್ಲದೆ ಯಾವುದೊಂದು ದುಷ್ಕೃತ್ಯಮಾಡಲು ಅಣಿಯಾದವನಿಗೆ ಕಾಯ್ದೆಯ ಭಯವು ನಿಷ್ಪ್ರಯೋಜಕ. ದಂಡನೆಯು ನಾಗರಿಕನ ಪಾಪದ ಕೃತಿಯನ್ನು ಅಳಿಸಲಾರದು. ಯಾವುದೊಂದು ಕಾಯ್ದೆಗೆ ಇಡೀ ಜನಾಂಗದ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷ ಪ್ರತಿಭಟನೆಯು ಪ್ರಾಪ್ತವಾದರೆ ಅದು ತನ್ನ ಫಲಕಾರಿತ್ವವನ್ನು ಕಳೆದುಕೊಳ್ಳುತ್ತದೆ. ಗಾಂಧೀಜಿಯವರ ನೇತೃತ್ವದಲ್ಲಿ ಸಾಗಿದ ಉಪ್ಪಿನ ಕರನಿರಾಕರಣೆಯ ಅಂದೋಲನವು ಉಪ್ಪಿನಕರ ಕಾಯ್ದೆಯನ್ನು ಪುಸ್ತಕದೊಳಗಿನ ಕಾಯ್ದೆಯನ್ನಾಗಿ ಮಾಡಿತು. ಅಮೇರಿಕೆಯ ಒಂದು ಕಾಲದ ಮದ್ಯಪಾನ ನಿರೋಧ ಕಾಯ್ದೆಗೆ ಇದೇ ಗತಿಯೊದಗಿತ್ತು. ಅಂದ ಮೇಲೆ ಕೇವಲ ರಾಜಕೀಯ ಬಲದ ಪ್ರಭಾವದಿಂದ ಕಾಯ್ದೆಯನ್ನು ಅಸ್ತಿತ್ವ

ದಲ್ಲಿಡುವುದು ಅಷ್ಟೊಂದು ಜಾಣತನವಲ್ಲ. ಜನರ ಸಮ್ಮತಿಯ ಬಲದ ಮೇಲೆ ನಿಂತ ಕಾಯ್ದೆಯು ಮಾತ್ರ ಬಹುಕಾಲ ಬಾಳಬಲ್ಲದು.

ಸಾಮಾನ್ಯವಾಗಿ ನಾಗರಿಕರು ಕಾಯ್ದೆಯನ್ನು ಬಹಿರಂಗವಾಗಿ ಎದುರಿಸುವುದಿಲ್ಲ. ತಮಗೆ ಅಹಿತಕಾರಿಯೆನಿಸಿದ ಒಂದೆರಡು ಕಾಯ್ದೆಗಳ ಜೊತೆಗೆ ಹಲವಾರು ಉಪಯುಕ್ತ ಕಾಯ್ದೆಗಳಿದ್ದರೆ ಜನರು ಕಾಯ್ದೆಬದ್ಧವಾಗಿ ವರ್ತಿಸಲು ಪ್ರಯತ್ನಿಸುತ್ತಾರೆ. ಮೇಲಾಗಿ ಜನರು ಕಾಯ್ದೆಯ ನಿರ್ಬಂಧನೆಗಿಂತಲೂ ಅರಾಜಕತೆಯನ್ನು ಹೆಚ್ಚು ದ್ವೇಷಿಸುತ್ತಾರೆ. ಜನಸಾಮಾನ್ಯರ ಇಂತಹ ಭಾವನೆಗಳೇ ಕಾಯ್ದೆಯ ಪರಿಪೂರ್ಣತೆಗೆ ಪೋಷಕವಾದ ಸಂಗತಿಗಳು. ಸರಕಾರವು ಇಂತಹ ಭಾವನೆಗಳ ಸಹಾಯ ಪಡೆದು ಕಾಯ್ದೆಯ ಪರಿಣಾಮಕಾರಿತ್ವವನ್ನು ಹೆಚ್ಚಿಸಬಲ್ಲದು.

ಎಷ್ಟೋ ಸಲ ಜನರು ವ್ಯಾವಹಾರಿಕ ಅನುಕೂಲತೆಗಾಗಿ ಕಾಯ್ದೆಯನ್ನು ಪಾಲಿಸುತ್ತಾರೆ. ದೊಡ್ಡ ಪಟ್ಟಣಗಳಲ್ಲಿ ವಾಹನಗಳ ಓಡಾಟವನ್ನು ನಿಯಂತ್ರಿಸುವ ಕಾಯ್ದೆಯ ನಿದರ್ಶನವನ್ನು ಇಲ್ಲಿ ತೆಗೆದುಕೊಳ್ಳಬಹುದು. ವಾಹನಗಳು ರಸ್ತೆಯ ಎಡಬದಿಗೆ ಹೋಗಬೇಕೆಂಬ ನಿಯಮವಿದೆ. ಈ ನಿಯಮವಿಲ್ಲದಿದ್ದರೆ ಜನರು ಅಪಘಾತಗಳಿಗೆ ತುತ್ತಾಗುವುದು ಸಹಜ. ಅಂದ ಮೇಲೆ ಈ ನಿಯಮವನ್ನು ಜನರು ಪೋಲೀಸನ ಅಂಜಿಕೆಯಿಂದ ಪಾಲಿಸುತ್ತಾರೆಂದು ತಿಳಿಯುವುದಕ್ಕಿಂತಲೂ ಅನುಕೂಲತೆಯ ದೃಷ್ಟಿಯಿಂದ ಅದನ್ನು ಪಾಲಿಸುತ್ತಾರೆಂದು ಹೇಳುವುದು ಹೇಳುವುದು ಹೆಚ್ಚು ಸಮರ್ಪಕವಾಗಿದೆ.

ಕಾಯ್ದೆಯ ಎಷ್ಟೋ ಅಂಶಗಳನ್ನೂ ಜನರು ರೂಢಿಯ ಬಲದಿಂದ ಪಾಲಿಸುತ್ತಿರುತ್ತಾರೆ. ಸಾಮಾಜಿಕ ಜೀವನದಲ್ಲಿ ಜನರು ಹುಟ್ಟಿದಂದಿನಿಂದ ಕಲಿತುಕೊಳ್ಳುವ ನೀತಿ ನಿಯಮಗಳು ಅವರ ನಿತ್ಯದ ವರ್ತನೆಯ ತಳಹದಿಯಾಗಿರುತ್ತವೆ. ಒಬ್ಬನು ತನ್ನ ನೆಮ್ಮದಿಗೆ ಉತ್ತಮಪ್ರದವೆಂದು ಬಗೆದ ಆಚರಣೆಗಳು ಇತರರ ನೆಮ್ಮದಿಗೂ ಅವಶ್ಯಕವೆಂಬ ಅನುಭವವು ನೀತಿಗೆ ಕಾರಣವಾಗಿದೆ. ಈ ನೀತಿಯನ್ನು ಜನರು ಕಾಯ್ದೆಯಿಂದ ಕಲಿಯುವುದಿಲ್ಲ. ಎಷ್ಟೋ ಜನರಿಗೆ ತಮ್ಮ ನಿತ್ಯದ ಕೃತಿಗಳ ಬಗ್ಗೆ ಕಾಯ್ದೆ ಏನು ಹೇಳುತ್ತಿದೆಯೆಂಬುದರ ಕಲ್ಪನೆ ಕೂಡಾ ಇರುವುದಿಲ್ಲ. ಅವರ ಸಹಜ ಆಚರಣೆಯು ಕಾಯ್ದೆಬದ್ಧವಾಗಿಯೇ ಇರುತ್ತದೆ. ಏಕೆಂದರೆ, ಕಾಯ್ದೆಯು ಬಹುತರವಾಗಿ ಜನರ ರೂಢಿಯ ಮೇಲಿಂದ ಬಂದ ನಿಯಮವಾಗಿದೆ. ಆದುದರಿಂದ ಜನರ ರೂಢಿಯೇ ಕಾಯ್ದೆಯ ಹಿನ್ನೆಲೆಯಲ್ಲಿರುವ ಮಹಾಶಕ್ತಿ.

ಸಹಾಯಕ ಗ್ರಂಥಗಳು—


1. Grammar of Politics By H. J Laski.
2. Hindu Polity. By K. P. Jayaswal.
3. Cabinet Govt. By Sir Ivor Jennings.
4. An Introduction to the Study of public Administration By L. D. White.
5. English Constitutional Law. By. A. V Dicey.
6. Jurisprudence. By Salmond.

## ಪ್ರಕರಣ ೪. ರಾಜ್ಯಘಟನೆಗಳು

೧. ರಾಜ್ಯಘಟನೆಗಳನ್ನು ವಿಂಗಡಿಸುವ ತತ್ವಗಳು.
೨. ಏಕತ್ರ ರಾಜ್ಯ ಮತ್ತು ಸಂಯುಕ್ತ ರಾಜ್ಯ.
೩. ಶಿಥಿಲ ಮತ್ತು ಅಶಿಥಿಲ ರಾಜ್ಯಘಟನೆಗಳು.
೪. ಅಧ್ಯಕ್ಷಕೀಯ ಮತ್ತು ಮಂತ್ರಿ ಪರಿಷತ್ತಿನ ರಾಜ್ಯ.
೫. ಶಾಸನೀಯ ನ್ಯಾಯ ಪದ್ಧತಿಯ ರಾಜ್ಯ ಮತ್ತು ಆಡಳಿತನ್ಯಾಯ ಪದ್ಧತಿಯ ರಾಜ್ಯ.
೬. ರಾಜ್ಯಘಟನೆಯಲ್ಲಿ ಪ್ರಾತಿನಿಧ್ಯದ ಸಮಸ್ಯೆಗಳು.
೭. ಹಿಂದುಸ್ತಾನದ ರಾಜ್ಯಘಟನೆಯ ಸ್ವರೂಪ.

## ಪ್ರಕರಣ ೪.

# ರಾಜ್ಯಘಟನೆಗಳು.

### ೧. ರಾಜ್ಯಘಟನೆಗಳನ್ನು ವಿಂಗಡಿಸುವ ತತ್ವಗಳು.

ಅರಿಸ್ಟಾಟಲನೆಂಬ ಗ್ರೀಸ ದೇಶದ ತತ್ವಜ್ಞಾನಿಯು ರಾಜ್ಯಗಳನ್ನು ರಾಜಪ್ರಭುತ್ವ, ಮನ್ನೆಯರ ಪ್ರಭುತ್ವ ಮತ್ತು ಜನತಾ ಪ್ರಭುತ್ವಗಳೆಂದು ವಿಂಗಡಿಸಿದ್ದಾನೆ. ನಿಜವಾಗಿ ನೋಡಿದರೆ ಎರಡೇ ಪ್ರಕಾರಗಳಿವೆ. ಹಿಂದಿನಕಾಲದ ಪ್ರತಿಯೊಂದು ರಾಜಪ್ರಭುತ್ವದ ಬೆಂಬಲಕ್ಕಾಗಿ ಒಂದು ಮನ್ನೆಯರ ವರ್ಗವು ಇದ್ದೇ ಇತ್ತು. ಆ ಕಾಲದಲ್ಲಿ ಮನ್ನೆಯರ ವಿಶ್ವಾಸವನ್ನು ಕಳೆದುಕೊಂಡ ಅರಸನು ಬಹುದಿನ ಅರಸನಾಗಿ ಉಳಿಯುವುದು ಸಾಧ್ಯವಿದ್ದಿಲ್ಲ. ಅರಸನಿದ್ದ ರಾಜ್ಯದಲ್ಲಿಯೂ ಮನ್ನೆಯರ ಪ್ರಭುತ್ವವೇ ಇತ್ತು. ಆದುದರಿಂದ ಅಂದಿನ ರಾಜಪ್ರಭುತ್ವಗಳನ್ನು ಮನ್ನೆಯರ ಪ್ರಭುತ್ವಗಳೆಂದು ಕರೆದರೆ ತಪ್ಪಾಗದು.

ಕ್ರಿ. ಶ. ಪೂರ್ವ ೫ ನೆಯ ಶತಮಾನದ ಸುಮಾರಿಗೆ ಬರೆಯಲ್ಪಟ್ಟ ಜಾತಕ ಸಾಹಿತ್ಯದಲ್ಲಿ ಕೆಲವು ರಾಜ್ಯಗಳು ರಾಜರ ಆಧೀನವಾಗಿದ್ದುವೆಂದೂ ಇನ್ನು ಕೆಲವು ರಾಜ್ಯಗಳು ಗಣಾಧೀನವಾಗಿದ್ದುವೆಂದೂ ಉಲ್ಲೇಖ ಬರುತ್ತಿದೆ. ಅಥರ್ವವೇದದಲ್ಲಿ ರಾಜ್ಯ, ಮಹಾರಾಜ್ಯ, ದ್ವೈರಾಜ್ಯ, ವೈರಾಜ್ಯ, ಭೌಜ್ಯ, ಅರಾಜಕ ಮೊದಲಾದ ರಾಜ್ಯಗಳಿದ್ದವೆಂಬ ಉಲ್ಲೇಖವಿದೆ. ಇವುಗಳಲ್ಲಿ ಕೆಲವು ರಾಜಪ್ರಭುತ್ವಗಳಿರಬೇಕು. ಇನ್ನು ಕೆಲವು ಜನತಾ ಪ್ರಭುತ್ವಗಳಿರಬೇಕು.

ಇಂದಿನ ಕಾಲದಲ್ಲಿ ಯಾವುದೊಂದು ರಾಜ್ಯವನ್ನು ರಾಜಪ್ರಭುತ್ವವೆಂದು ಕರೆಯುವುದರಲ್ಲಿ ಅರ್ಥವಿಲ್ಲ. ಇಂಗ್ಲಂಡವನ್ನು ರಾಜಪ್ರಭುತ್ವವೆಂದೂ ಸೋವ್ಹಿಯಟ್ ರಸಿಯಾವನ್ನು ಜನತಾಪ್ರಭುತ್ವವೆಂದೂ ಕರೆಯುವುದು ವಸ್ತುಸ್ಥಿತಿಯನ್ನು ವಿಪರ್ಯಾಸಗೊಳಿಸಿದಂತೆಯೇ ಸರಿ. ಏಕೆಂದರೆ, ಇಂಗ್ಲಂಡದೊಳಗೆ ನಿಜವಾದ ರಾಜಕೀಯ ಅಧಿಕಾರ ಜನತೆಯ ಕೈಯೊಳಗಿದೆ; ಸೋವ್ಹಿಯಟ್ ರಸಿಯದೊಳಗೆ ನಿಜವಾದ ರಾಜಕೀಯ ಅಧಿಕಾರ ಹಿಂದಿನ ಕಾಲದ ಮನ್ನೆಯರ ವರ್ಗವನ್ನು ಹೋಲುವ ಕಮ್ಯುನಿಷ್ಟ ಪಕ್ಷದ ಕೈಯಲ್ಲಿದೆ. ಹೀಗೆ ರಾಜನಿದ್ದ ಜನತಾಪ್ರಭುತ್ವಗಳಿವೆ; ರಾಜನಿಲ್ಲದ ಮನ್ನೆಯರ ಪ್ರಭುತ್ವ

ಗಳಿವೆ. ಮನ್ಯೆಯರ ಪ್ರಭುತ್ವಗಳನ್ನು ಇಂದು ಸರ್ವಾಧಿಕಾರಿತ್ವಗಳೆಂದು ಕರೆಯುತ್ತಾರೆ.

ಸರ್ವಾಧಿಕಾರಿತ್ವ ರಾಜ್ಯದಲ್ಲಿ ರಾಜಕೀಯ ಅಧಿಕಾರವು ಒಂದೇ ಒಂದು ರಾಜಕೀಯ ಪಕ್ಷದ ಕೈಯೊಳಗಿರುತ್ತದೆ. ಈ ರಾಜ್ಯದಲ್ಲಿ ಜನತಾ ರಾಜ್ಯಗಳಲ್ಲಿರಬೇಕಾದ ಎಲ್ಲ ರಾಜಕೀಯ ಸಂಸ್ಥೆಗಳೂ ಇರಬಹುದು. ಅಲ್ಲಿ ಚುನಾವಣೆಗಳು ನಡೆಯಬಹದು; ಶಾಸನಸಭೆಗಳಿರಬಹುದು; ಮೇಲ್ಮನೆ ಕೆಳಮನೆಗಳಿರಬಹುದು; ನ್ಯಾಯಾಲಯಗಳಿರಬಹುದು; ಇತರ ಸಂಘ ಸಂಸ್ಥೆಗಳಿರಬಹುದು. ಆದರೆ ಅಲ್ಲಿ ಅಧಿಕಾರರೂಢವಾದ ರಾಜಕೀಯ ಪಕ್ಷದ ಕೈವಾಡವಿಲ್ಲಧ ಸಂಘಸಂಸ್ಥೆಗಳೊಂದೂ ಇರುವುದಿಲ್ಲ; ಅದಕ್ಕೆ ಸಮ್ಮತವಿಲ್ಲದ ಯಾವನೂ ಚುನಾವಣೆಗೆ ನಿಲ್ಲಲು ಸಾಧ್ಯವಿಲ್ಲ; ಅದರ ಅಭಿಪ್ರಾಯವನ್ನು ಸಮರ್ಥಿಸದ ಪ್ರಚಾರ ಸಂಸ್ಥೆಗಳಿರುವುದಿಲ್ಲ; ಅದು ಮಂಡಿಸಿದ ವಿಧೇಯಕಗಳಿಗೆ ಒಪ್ಪಿಗೆ ಕೊಡದ ಶಾಸನಸಭೆಯಿರುವುದಿಲ್ಲ; ಅದರ ಆದೇಶವನ್ನು ಈಡೇರಿಸದ ಸರಕಾರೀ ಅಧಿಕಾರಿಗಳಿರುವುದಿಲ್ಲ; ಅದು ಆರೋಪಿಸಿದ ವ್ಯಕ್ತಿಯನ್ನು ದಂಡಿಸದ ನ್ಯಾಯಾಲಯವಿರುವುದಿಲ್ಲ. ಆಂದಮೇಲೆ ಸರ್ವಾಧಿಕಾರಿತ್ವ ರಾಜ್ಯದ ರೂಪರೇಷೆಗಳನ್ನು ತಿಳಿದುಕೊಳ್ಳಬಯಸುವಾಗ ಅದರ ರಾಜಕೀಯ ಸಂಸ್ಥೆಗಳ ತೋರಿಕೆಯ ರೂಪಗಳನ್ನು ಪರೀಕ್ಷಿಸುತ್ತ ಹೋಗುವುದು ನಿರುಪಯುಕ್ತ. ಅದಕ್ಕೆ ಬದಲಾಗಿ ಅಲ್ಲಿಯ ಏಕತಂತ್ರ ರಾಜಕೀಯ ಪಕ್ಷದ ಗೊತ್ತು ಗುರಿ ಮತ್ತು ರೀತಿ-ನೀತಿಗಳ ಪರೀಕ್ಷೆಯಿಂದ ಆ ರಾಜ್ಯದ ನಿಜಸ್ವರೂಪ ತಿಳಿದುಕೊಳ್ಳುವುದು ಸುಲಭ. ಇನ್ನು ಮೇಲೆ ಇಲ್ಲಿ ಸರ್ವಾಧಿಕಾರಿತ್ವಗಳ ರಾಜ್ಯಘಟನೆಗಳನ್ನು ವಿಂಗಡಿಸಲು ಪ್ರಯತ್ನಿಸದೆ ಕೇವಲ ಜನತಾ ರಾಜ್ಯಗಳ ರಾಜ್ಯಘಟನೆಗಳ ವೈಶಿಷ್ಟ್ಯಗಳನ್ನು ವಿವರಿಸಲಾಗುವುದು.

ಒಂದು ರಾಜ್ಯದೊಳಗಿನ ಸರಕಾರದ ಅಧಿಕಾರದ ಪರಿಮಿತಿಯನ್ನೂ, ನಾಗರಿಕರ ಹಕ್ಕು ಬಾಧ್ಯತೆಗಳನ್ನೂ, ಸರಕಾರ ಮತ್ತು ನಾಗರಿಕರ ಪರಸ್ಪರ ಸಂಬಂಧಗಳನ್ನೂ ನಿರ್ದೇಶಿಸುವ ರಾಜಕೀಯ ತತ್ವಗಳಿಗೆ ರಾಜ್ಯಘಟನೆಯೆನ್ನುತ್ತಾರೆ ಇಲ್ಲವೆ ಸಂವಿಧಾನವೆನ್ನುತ್ತಾರೆ. ಜಗತ್ತಿನಲ್ಲಿ ಇಂದು ಹಲವು ಬಗೆಯ ರಾಜ್ಯಘಟನೆಗಳಿವೆ. ಅವುಗಳ ತುಲನಾತ್ಮಕ ಅಭ್ಯಾಸದಿಂದ ಕಂಡುಬಂದಿರುವ ಐದು ಸಾಮಾನ್ಯ ವೈಶಿಷ್ಟ್ಯಗಳಿವೆ. ಪ್ರತಿಯೊಂದು ರಾಜ್ಯ ಘಟನೆಯನ್ನು ಈ

ಐದು ವೈಶಿಷ್ಟ್ಯಗಳವೇಲಿಂದ ಅಳೆದು ನೋಡಬೇಕು. ರಾಜಕೀಯ ಅಧಿಕಾರದ ವಿತರಣ, ಘಟನೆಯನ್ನು ಪರಿವರ್ತಿಸುವ ರೀತಿ, ಕಾರ್ಯಾಂಗದ ರಚನೆ, ಶಾಸನಸಭೆಯ ಸ್ವರೂಪ, ನ್ಯಾಯಪದ್ಧತಿಯ ವೈಶಿಷ್ಟ್ಯ ಮೊದಲಾದ ಅಂಶಗಳು ಘಟನೆಯ ಮರ್ಮವನ್ನು ಬಯಲಿಗೆ ತರುತ್ತವೆ. ಇನ್ನು ಮೇಲೆ ಒಂದೊಂದೇ ಅಂಶವನ್ನು ಎತ್ತಿಕೊಂಡು ರಾಜ್ಯಘಟನೆಗಳನ್ನು ಪರೀಕ್ಷಿಸಬಹುದು.

೨. ಏಕತ್ರ ರಾಜ್ಯ ಮತು ಸಂಯುಕ್ತ ರಾಜ್ಯ

ರಾಜಕೀಯ ಅಧಿಕಾರದ ವಿತರಣದ ದೃಷ್ಟಿಯಿಂದ ರಾಜ್ಯಗಳನ್ನು ಏಕತ್ರರಾಜ್ಯ ಮತ್ತು ಸಂಯುಕ್ತರಾಜ್ಯಗಳೆಂದು ವಿಂಗಡಿಸಬಹುದು. ಏಕತ್ರ ರಾಜ್ಯದಲ್ಲಿ ಶಾಸನಾಧಿಕಾರವು ರಾಷ್ಟ್ರೀಯ ಶಾಸನಸಭೆಯಲ್ಲಿ ಕೇಂದ್ರೀಕೃತವಾಗಿರುತ್ತದೆ. ಆ ರಾಜ್ಯದ ಬೇರೆ ಬೇರೆ ಪ್ರಾಂತಗಳು, ಜಿಲ್ಲೆಗಳು, ನಗರಗಳು ಕೇವಲ ಆಡಳಿತೆಯ ವಿಭಾಗಗಳು ಮಾತ್ರ. ಅವುಗಳಿಗೆ ಸ್ವತಂತ್ರ ಶಾಸನಸಭೆಗಳಿರುವುದಿಲ್ಲ. ಇಂಗ್ಲಂಡ, ಫ್ರಾನ್ಸ, ನ್ಯೂಝೀಲಂಡ ಮೊದಲಾದ ರಾಜ್ಯಗಳು ಈ ಬಗೆಯ ಏಕತ್ರ ರಾಜ್ಯಗಳಾಗಿವೆ.

ಸಂಯುಕ್ತ ರಾಜ್ಯದಲ್ಲಿ ಹಲವು ಘಟಕ ರಾಜ್ಯಗಳು ತಮ್ಮೆಲ್ಲವುಗಳಿಗೂ ಅನ್ವಯಿಸುವ ಹಿತಸಂಬಂಧಗಳ ರಕ್ಷಣೆಗಾಗಿ ಒಂದು ಕೇಂದ್ರ ಸರಕಾರದ ಕೆಳಗೆ ಒಂದುಗೂಡಿದ್ದರೂ, ಅವು ತಮ್ಮ ತಮ್ಮ ವಿಶಿಷ್ಟ ಹಕ್ಕುಗಳನ್ನು ಕಾಯ್ದುಕೊಂಡಿರುತ್ತವೆ. ಕೇಂದ್ರ ಶಾಸನ ಸಭೆಯ ಜೊತೆಗೆ ಆಯಾ ಘಟಕ ರಾಜ್ಯಗಳಲ್ಲಿಯೂ ಸ್ವತಂತ್ರ ಶಾಸನಸಭೆಗಳಿರುತ್ತವೆ. ರಾಜಕೀಯ ಅಧಿಕಾರವನ್ನು ಕೇಂದ್ರ ಸರಕಾರ ಮತ್ತು ಘಟಕರಾಜ್ಯ ಸರಕಾರಗಳು ಒಂದು ನಿರ್ದಿಷ್ಟ ರೀತಿಯಲ್ಲಿ ಹಂಚಿಕೊಂಡಿರುತ್ತವೆ. ಈ ರಾಜಕೀಯ ಅಧಿಕಾರದ ಹಂಚುವಿಕೆಯು ಬಹುತರವಾಗಿ ರಾಜ್ಯಘಟನೆಯಲ್ಲಿ ಉಲ್ಲಿಖಿತವಾಗಿರುತ್ತದೆ. ರಾಜ್ಯದ ಸಂರಕ್ಷಣೆ, ವಿದೇಶ ವ್ಯವಹಾರ, ಹಣಕಾಸಿನ ವ್ಯವಸ್ಥೆ, ಸಂಪರ್ಕ ಮೊದಲಾದ ಮಹತ್ವದ ವಿಷಯಗಳು ಬಹುತರವಾಗಿ ಕೇಂದ್ರ ಸರಕಾರದ ಕೈಯೊಳಗಿರುತ್ತವೆ. ಆರೋಗ್ಯ, ಶಿಕ್ಷಣ ಸ್ಥಾನಿಕ ಸ್ವರಾಜ್ಯ ಮೊದಲಾದ ವಿಷಯಗಳು ಘಟಕ ರಾಜ್ಯ ಸರಕಾರಗಳ ಕೈಯೊಳಗಿರುತ್ತವೆ. ಒಂದುವೇಳೆ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳ ನಡುವೆ ಘರ್ಷಣೆಯುಂಟಾದರೆ ಇಲ್ಲವೆ ಆಯಾ ಘಟಕ ರಾಜ್ಯಗಳ ನಡುವೆ ಘರ್ಷಣೆಯುಂಟಾದರೆ, ಅದನ್ನು ಘಟನಾ

ತ್ಮಕವಾಗಿ ಬಗೆಹರಿಸಲು ಒಂದು ಉಚ್ಚ ನ್ಯಾಯಾಂಗವಿರುತ್ತದೆ. ಸಂಯುಕ್ತ ರಾಜ್ಯದಲ್ಲಿ ಸಂವಿಧಾನ ಗೌರವಿಸುವ ಸಾಂಪ್ರದಾಯವಿರುತ್ತದೆ.

ಹಿಂದುಸ್ತಾನ, ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು, ಆಸ್ಟ್ರೇಲಿಯಾ, ಕಾನಡಾ ಮೊದಲಾದವು ಈ ಬಗೆಯ ಸಂಯುಕ್ತ ರಾಜ್ಯಗಳಾಗಿವೆ. ಇಂದು ಪಶ್ಚಿಮ ಯುರೋಪದ ರಾಷ್ಟ್ರಗಳು ಕೂಡಿ ಒಂದು ಸಂಯುಕ್ತರಾಜ್ಯ ರಚಿಸಿಕೊಳ್ಳಬೇಕೆಂಬ ಚಳವಳಿಯೂ ನಡೆದಿದೆ. ದೂರದ ರಾಜಕಾರಣಿಗಳು ಒಂದಿಲ್ಲೊಂದು ದಿನ ಇಡೀ ಜಗತ್ತಿನ ರಾಷ್ಟ್ರಗಳು ಒಂದು ಸಂಯುಕ್ತ ರಾಜ್ಯದಲ್ಲಿ ಕೂಡಲೇಬೇಕೆಂದು ಭವಿಷ್ಯ ನುಡಿಯುತ್ತಿದ್ದಾರೆ. ಆದರೆ ಆ ಕಾಲ ಬಹು ದೂರವಿದ್ದಂತೆ ಅನಿಸುತ್ತದೆ.

**೩. ಶಿಥಿಲ ಮತ್ತು ಅಶಿಥಿಲ ರಾಜ್ಯಘಟನೆಗಳು.**

ಕೆಲವು ರಾಜ್ಯಘಟನೆಗಳು ಬಹುಮಟ್ಟಿಗೆ ಬರೆದಿಟ್ಟ ಶಾಸನದ ರೂಪದಲ್ಲಿವೆ; ಇನ್ನು ಕೆಲವು ಹೆಚ್ಚಾಗಿ ಸಾಂಪ್ರದಾಯದ ಮೇಲೆ ನಿಂತಿವೆ. ಆದರೆ ಎಲ್ಲ ರಾಜ್ಯಘಟನೆಗಳಲ್ಲಿಯೂ ಬರೆದಿಟ್ಟ ಶಾಸನ ಮತ್ತು ಸಾಂಪ್ರದಾಯಗಳ ಹೆಚ್ಚುಕಡಮೆ ಬೆರಕೆಯಿದ್ದೇ ಇರುತ್ತದೆ. ಅವುಗಳ ನಿಜವಾದ ತಾರತಮ್ಯ ಘಟನೆ ತಿದ್ದುಪಡಿಮಾಡುವ ರೀತಿಯಲ್ಲಿದೆ.

ಕೆಲವು ರಾಜ್ಯಘಟನೆಗಳನ್ನು ಸಾಮಾನ್ಯ ಕಾಯ್ದೆ ತಿದ್ದುಪಡೆ ಮಾಡುವ ಸಾಮಾನ್ಯ ವಿಧಾನದಿಂದ ಪರಿವರ್ತಿಸಬಹುದು. ಇನ್ನು ಕೆಲವು ರಾಜ್ಯಘಟನೆಗಳನ್ನು ಒಂದು ವಿಶಿಷ್ಟವಾದ ಕಠಿಣ ರೀತಿಯಿಂದ ಪರಿವರ್ತಿಸಬಹುದು. ಪರಿವರ್ತನೆ ಸುಲಭ ಸಾಧ್ಯವಿರುವ ಘಟನೆಗಳನ್ನು ಶಿಥಿಲ ರಾಜ್ಯಘಟನೆಗಳೆಂದು ಕರೆಯುಬಹುದು; ಪರಿವರ್ತನೆ ಕಠಿಣವಿರುವ ಘಟನೆಗಳನ್ನು ಅಶಿಥಿಲ ರಾಜ್ಯ ಘಟನೆಗಳೆಂದು ಕರೆಯುಬಹುದು. ಶಿಥಿಲ ರಾಜ್ಯಘಟನೆಗಳನ್ನು ಕಾಲಕಾಲಕ್ಕೆ ರಾಜ್ಯದ ಅವಶ್ಯಕತೆಗಳ ಪ್ರಕಾರ ಮಾರ್ಪಾಟು ಮಾಡಿಕೊಳ್ಳಲು ಬರುತ್ತದೆ. ಅಶಿಥಿಲ ರಾಜ್ಯಘಟನೆಗಳು ಅವಸರದ ರಾಜಕೀಯ ಪ್ರವಾಹವನ್ನು ತಡೆಯುಲು ಒಂದುಬಗೆಯ ಸ್ಥಿರತೆಯನ್ನು ಒದಗಿಸುತ್ತವೆ. ಆದರೆ ಪರಿವರ್ತನೆ ಮಾಡಲು ಅಣಿಯಾದ ಜನತೆಯ ಆಕಾಂಕ್ಷೆಯನ್ನು ಮಾತ್ರ ಯಾವ ಅಶಿಥಿಲ ರಾಜ್ಯ ಘಟನೆಯೂ ತಡೆಯಲಾರದು. ನಿಜವಾಗಿ ನೋಡಿದರೆ ಘಟನೆಯ ಶಿಥಿಲತೆ ಇಲ್ಲವೆ ಅಶಿಥಿಲತೆ ಆಯಾ ರಾಜ್ಯದ ಜನತೆಯ ಸ್ವಭಾವದ ಮೇಲೆ ಅವಲಂಬಿಸಿದೆ.

ಕಳೆದ ಒಂದೂವರೆ ನೂರು ವರ್ಷಗಳಲ್ಲಿ ಇಂಗ್ಲಂಡದ ಶಿಥಿಲ ರಾಜ್ಯ ಘಟನೆಯು ಒಂದೆರಡು ಮಹತ್ವದ ಅಂಶಗಳಲ್ಲಿ ಮಾತ್ರ ಪರಿವರ್ತನೆ ಹೊಂದಿದೆ. ಆದರೆ ಅದೇ ಕಾಲದಲ್ಲಿ ಫ್ರಾನ್ಸದ ಅಶಿಥಿಲ ರಾಜ್ಯಘಟನೆಗಳು ಅನೇಕ ಸ್ಥಿತ್ಯಂತರಗಳನ್ನು ಕಂಡಿವೆ.

**೪. ಅಧ್ಯಕ್ಷಕೀಯ ರಾಜ್ಯ ಇಲ್ಲವೆ ಮಂತ್ರಿಪರಿಷತ್ತಿನ ರಾಜ್ಯ**

ಕಾರ್ಯಾಂಗದ ರಚನೆಯ ದೃಷ್ಟಿಯಿಂದ ರಾಜ್ಯಗಳನ್ನು ಅಧ್ಯಕ್ಷಕೀಯ ರಾಜ್ಯ ಮತ್ತು ಮಂತ್ರಿ ಪರಿಷತ್ತಿನ ರಾಜ್ಯಗಳೆಂದು ವಿಂಗಡಿಸಬಹುದು. ಇಂದಿನ ಜನತಾ ರಾಜ್ಯಗಳಲ್ಲಿ ಶಾಸನಸಭೆಯ ಕಾರ್ಯಕಲಾಪಗಳು ಹೆಚ್ಚಿದಂತೆ ಕಾರ್ಯಾಂಗದ ಮಹತ್ವವು ಬೆಳೆಯಹತ್ತಿದೆ. ಕಾರ್ಯಾಂಗವು ಇಂದು ವಿದೇಶ ವ್ಯವಹಾರ, ಆಡಳಿತೆ, ಸಂರಕ್ಷಣೆ, ನ್ಯಾಯ ಮತ್ತು ಶಾಸನರಚನೆಯ ಕಾರ್ಯಗಳಲ್ಲಿ ತೊಡಗಿರುತ್ತದೆ. ಅದು ಶಾಸನಾಂಗದಿಂದ ಪ್ರತ್ಯೇಕವಾಗಿರಬಹುದು. ಇಲ್ಲವೆ ಅದು ಶಾಸನಾಂಗದ ಒಂದು ಅಂಗವಾಗಿರಬಹುದು. ಶಾಸನಾಂಗದಿಂದ ಪ್ರತ್ಯೇಕವಾದ ಕಾರ್ಯಾಂಗಕ್ಕೆ ಅಧ್ಯಕ್ಷಕೀಯ ಕಾರ್ಯಾಂಗವೆಂದೂ, ಶಾಸನಾಂಗದ ಅಂಗವಾಗಿದ್ದ ಕಾರ್ಯಾಂಗಕ್ಕೆ ಮಂತ್ರಿ ಪರಿಷತ್ತಿನ ಕಾರ್ಯಾಂಗವೆಂದೂ ಕರೆಯುತ್ತಾರೆ.

ಅಧ್ಯಕ್ಷಕೀಯ ಕಾರ್ಯಾಂಗವು ಶಾಸನಾಂಗದ ವಿಶ್ವಾಸ ಅವಿಶ್ವಾಸಗಳ ಮೇಲೆ ಅವಲಂಬಿಸಿರುವುದಿಲ್ಲ. ಅದು ಕೆಲವೊಂದು ಅವಧಿಯವರೆಗೆ ಸ್ಥಿರವಾಗಿರುತ್ತದೆ. ಅಮೇರಿಕೆಯ ಅಧ್ಯಕ್ಷನು ನಾಲ್ಕು ವರ್ಷಗಳಿಗೊಮ್ಮೆ ಜನರಿಂದ ಆರಿಸಲ್ಪಡುತ್ತಾನೆ. ಆವನು ತನ್ನ ಕಾರ್ಯದರ್ಶಿ ಮಂಡಲವನ್ನು ತಾನೇ ಆಯ್ದುಕೊಳ್ಳುತ್ತಾನೆ. ಆ ಕಾರ್ಯದರ್ಶಿಗಳು ನೇರವಾಗಿ ಅಧ್ಯಕ್ಷನಿಗೆ ಹೊಣೆಗಾರರಾಗಿರುತ್ತಾರೆ. ಆ ದೇಶದ ಆಡಳಿತದ ಅಧಿಕಾರಿಗಳೂ, ಸೈನಿಕ ಅಧಿಕಾರಿಗಳೂ, ರಾಯಭಾರಿಗಳೂ ಸಹ ಅವನಿಗೇ ಹೊಣೆಗಾರರಾಗಿರುತ್ತಾರೆ. ಅಲ್ಲಿಯ ಶಾಸನಾಂಗವು ಪ್ರತ್ಯಕ್ಷವಾಗಿ ಅಧ್ಯಕ್ಷನನ್ನಾಗಲಿ ಇಲ್ಲವೆ ಆಡಳಿತದ ಅಧಿಕಾರಿಗಳನ್ನಾಗಲಿ ನಿಯಂತ್ರಿಸಲಾರದು. ಆದರೆ ಅದು ಕಾಯ್ದೆ ಮತ್ತು ಹಣಕಾಸಿನ ಹಿಡಿತಗಳ ಮುಖಾಂತರ ಅವರನ್ನೂ ನಿಯಂತ್ರಿಸಬಲ್ಲದು. ಇದಲ್ಲದೆ ಅಧ್ಯಕ್ಷನು ಬಹುತರವಾಗಿ ಶಾಸನಾಂಗದ ಬಹುಮತ ಪಕ್ಷದ ನಾಯಕನಾಗಿರುವುದರಿಂದ ಕಾರ್ಯಾಂಗ ಮತ್ತು ಶಾಸನಾಂಗಗಳು ಹೊಂದಿಕೊಂಡು ಹೋಗುವ ಸಂಭವವೇ ಹೆಚ್ಚಾಗಿರುತ್ತದೆ. ರಾಜ್ಯದ

ಕಾರ್ಯಕ್ಷೇತ್ರದ ವಿಭಜನೆಯ ತತ್ವದ ಮೇಲೆ ರಚಿತವಾದ ಈ ಅಧ್ಯಕ್ಷಕೀಯ ಕಾರ್ಯಾಂಗವು ಆಧುನಿಕ ಯುಗದ ಅವಸರದ ಸಮಸ್ಯೆಗಳನ್ನು ಎದುರಿಸಲು ದುರ್ಬಲವಾಗಿವೆಯೆಂದು ಕೆಲವು ರಾಜಕಾರಣ ತಜ್ಞರ ಮತ.

ಮಂತ್ರಿ ಪರಿಷತ್ತಿನ ಕಾರ್ಯ್ಯಾಂಗವು ಶಾಸನಾಂಗದ ಒಂದು ಮಹತ್ವದ ಸಮಿತಿಯಂತಿರುತ್ತದೆ ಶಾಸನಾಂಗದ ಸದಸ್ಯರು ಮಾತ್ರ ಮಂತ್ರಿಗಳಾಗಬಹುದು. ಶಾಸನಾಂಗದ ಬಹುಮತ ಪಕ್ಷಕ್ಕೆ ಸಂಬಂಧಿಸಿದ ಒಂದೇ ರಾಜಕೀಯ ಅಭಿಪ್ರಾಯವುಳ್ಳವರು ಮಂತ್ರಿಪರಿಷತ್ತಿನಲ್ಲಿರುತ್ತಾರೆ. ಅವರು ಒಮ್ಮತದ ಧೋರಣೆಯನ್ನೇ ಅನುಸರಿಸುತ್ತಿರುತ್ತಾರೆ. ಶಾಸನಾಂಗವು ಅವರ ಧೋರಣೆಯ ಬಗ್ಗೆ ಅವಿಶ್ವಾಸವನ್ನು ವ್ಯಕ್ತ ಮಾಡಿದ್ದಾದರೆ ಇಡೀ ಮಂತ್ರಿಪರಿಷತ್ತು ರಾಜೀನಾಮೆ ಕೊಡಬೇಕಾಗುತ್ತದೆ. ಮಂತ್ರಿಗಳೆಲ್ಲರೂ ಒಬ್ಬ ನಾಯಕನ ಧುರೀಣತ್ವದಲ್ಲಿ ಕಾರ್ಯ ಮಾಡುತ್ತಿರುತ್ತಾರೆ, ಮುಖ್ಯ ಮಂತ್ರಿಯು ಶಾಸನಾಂಗದ ಬಹುಮತ ಪಕ್ಷದ ನಾಯಕನಾಗಿರುತ್ತಾನೆ. ಆದುದರಿಂದ ಅವನ ಸ್ಥಾನವು ಮಂತ್ರಿಪರಿಷತ್ತಿಗೆ ಒಂದುಬಗೆಯ ಸ್ಥೈರ್ಯವನ್ನು ಕೊಡುತ್ತದೆ. ಶಾಸನಾಂಗದಲ್ಲಿ ನಿಚ್ಚಳ ಬಹುಮತವುಳ್ಳ ರಾಜಕೀಯ ಪಕ್ಷವಿದ್ದುದಾದರೆ ಮಂತ್ರಿಪರಿಷತ್ತಿನ ಕಾರ್ಯಾಂಗವು ಬಹಳ ಬಲಿಷ್ಠವಾಗಿರುವುದು. ಅದು ಮಂಡಿಸಿದ ಧೋರಣೆಗಳಿಗೆಲ್ಲ ಸಾಮಾನ್ಯವಾಗಿ ಶಾಸನಾಂಗದ ಬೆಂಬಲವು ದೊರತೇ ದೊರೆಯುವುದು. ಆದುದರಿಂದ ಅದು ಅವಸರದ ಸಮಸ್ಯೆಗಳನ್ನು ತೀವ್ರವಾಗಿ ಪರಿಹರಿಸಲು ಸಮರ್ಥವಾಗಿರುತ್ತದೆ. ಆದರೆ ಶಾಸನಾಂಗದಲ್ಲಿ ಬಹಳ ರಾಜಕೀಯ ಪಕ್ಷಗಳಿದ್ದು ಯಾವ ಪಕ್ಷಕ್ಕೂ ನಿಚ್ಚಳ ಬಹುಮತವಿಲ್ಲದಿದ್ದರೆ ಮಂತ್ರಿಮಂಡಳಗಳು ತಾತ್ಪೂರ್ತಿಕ ರಾಜಕೀಯ ಗುಂಪುಗಳ ಮೇಲೆ ಅವಲಂಬಿಸಬೇಕಾಗುತ್ತದೆ. ಅದರಿಂದ ಅದರ ಸ್ಥಾನವು ಅಸ್ಥಿರವಾಗಿರುತ್ತದೆ. ಇಂಥ ಪರಿಸ್ಥಿತಿಯಲ್ಲಿ ಕಾರ್ಯಾಂಗವು ಶಾಸನಾಂಗದ ಕೈಗೊಂಬೆಯಂತಿರುತ್ತದೆ. ಫ್ರಾನ್ಸ ದೇಶದ ಮಂತ್ರಿಪರಿಷತ್ತಿನ ಕಾರ್ಯಾಂಗವು ಇದಕ್ಕೆ ತಕ್ಕ ನಿದರ್ಶನವಾಗಿದೆ. ಹಿಂದುಸ್ತಾನದ ಇಂದಿನ ಮಂತ್ರಿಪರಿಷತ್ತಿಗೆ ನಿಚ್ಚಳ ಬಹುಮತದ ಬೆಂಬಲವಿರುವುದರಿಂದ ಅದು ಬಲಿಷ್ಠ ಕಾರ್ಯಾಂಗವಾಗಿದೆ.

ಯಾವುದೇ ಬಗೆಯ ಕಾರ್ಯಾಂಗವಿದ್ದರೂ ಅದರ ಒಳಿತು ಕೆಡಕುಗಳು ಆಯಾ ದೇಶದ ನಾಗರಿಕರ ಸದಸದ್ವಿವೇಕದ ಮೇಲೆಯೇ ಅವಲಂಬಿಸಿರುತ್ತದೆ. ರಾಜಘಟನೆಯನ್ನು ಗೌರವಿಸಲರಿಯದ ಜನಾಂಗವಿದ್ದ ದೇಶದಲ್ಲಿ

ಕಾರ್ಯಾಂಗವು ಕ್ರಮೇಣ ಸ್ಥಿರವಾಗುತ್ತ ಕೊನೆಗೆ ಸರ್ವಾಧಿಕಾರಿತ್ವವಾಗಿ ಪರಿಣಮಿಸುವುದು. ಈ ಮಾತಿಗೆ ಹಿಟ್ಲರನ ಜರ್ಮನಿಯೇ ನಿದರ್ಶನವಾಗಿದೆ. ಕಾರ್ಯಾಂಗವು ಘಟನಾತ್ಮಕವಾಗಿ ಕಾರ್ಯಮಾಡಬೇಕಾದರೆ ಜನರು ರಾಜಕೀಯ ವಿಷಯಗಳ ಬಗ್ಗೆ ಜಾಗ್ರತರಾಗಿರಬೇಕಾಗುತ್ತದೆ.

**೫. ಶಾಸನೀಯ ನ್ಯಾಯಪದ್ಧತಿಯ ರಾಜ್ಯ ಮತ್ತು ಆಡಳಿತ ನ್ಯಾಯಪದ್ಧತಿಯ ರಾಜ್ಯ.**

ನ್ಯಾಯಪದ್ಧತಿಯ ವೈಶಿಷ್ಟ್ಯದ ದೃಷ್ಟಿಯಿಂದ ರಾಜ್ಯಗಳನ್ನು ಶಾಸನೀಯ ನ್ಯಾಯಪದ್ಧತಿಯ ರಾಜ್ಯಗಳೆಂದೂ ಮತ್ತು ಆಡಳಿತ ನ್ಯಾಯಪದ್ಧತಿಯ ರಾಜ್ಯಗಳೆಂದೂ ವಿಂಗಡಿಸಬಹುದು. ಇಂದಿನ ಘಟನಾತ್ಮಕ ರಾಜ್ಯಗಳಲ್ಲಿ ನ್ಯಾಯಾಂಗವು ಕಾರ್ಯಾಂಗಕ್ಕೆ ಅಂಕಿತವಾಗಿರಕೂಡದು. ನ್ಯಾಯಾಧೀಶರು ಒಳ್ಳೆಯ ನಡತೆಯವರಿರುವ ವರೆಗೆ ಅವರ ಸ್ಥಾನವು ಭದ್ರವಾಗಿರಬೇಕು. ಅಂದರೆ ಮಾತ್ರ ಅವರು ಸರಕಾರೀ ಅಧಿಕಾರಿಗಳು ಮತ್ತು ನಾಗರಿಕರ ನಡುವೆ ನಿಷ್ಪಕ್ಷಪಾತ ನಿರ್ಣಯ ಕೊಡಬಲ್ಲರು.

ಕೆಲವು ರಾಜ್ಯಗಳಲ್ಲಿ ಸರಕಾರೀ ಅಧಿಕಾರಿಗಳು ಮತ್ತು ನಾಗರಿಕರೆಂಬ ಭೇದಭಾವವಿಲ್ಲದೆ ಎಲ್ಲರೂ ದೇಶದ ಸಾಮಾನ್ಯ ನ್ಯಾಯಾಲಯಗಳಿಗೆ ಅಂಕಿತರಾಗಿರುತ್ತಾರೆ. ಇದಕ್ಕೆ ಶಾಸನೀಯ ನ್ಯಾಯಪದ್ಧತಿಯೆಂದು ಕರೆಯುತ್ತಾರೆ. ಇನ್ನು ಕೆಲವು ರಾಜ್ಯಗಳಲ್ಲಿ ಸರಕಾರೀ ಅಧಿಕಾರಿಗಳು ಮತ್ತು ನಾಗರಿಕರ ನಡುವಿನ ತಂಟೆಗಳನ್ನು ಬಗೆಹರಿಸಲು ವಿಶಿಷ್ಟ ನ್ಯಾಯಾಲಯಗಳು ಇರುತ್ತವೆ. ಇದಕ್ಕೆ ಆಡಳಿತ ನ್ಯಾಯಪದ್ಧತಿಯೆಂದು ಕರೆಯುತ್ತಾರೆ. ನಾಗರಿಕ ಹಿತಸಂಬಂಧಗಳ ದೃಷ್ಟಿಯಿಂದ ಈ ಎರಡೂ ನ್ಯಾಯಪದ್ಧತಿಗಳೂ ಅಷ್ಟೇ ಹಿತಕಾರಿಯಾಗಿವೆ. ಶಾಸನ ಪ್ರಾಧಾನ್ಯ ಪದ್ಧತಿಯಿರುವ ಇಂಗ್ಲಂಡದಲ್ಲಿ ದೊರೆಯುವಂತಹ ರಕ್ಷಣೆಯು ಆಡಳಿತ ಪ್ರಾಧಾನ್ಯಪದ್ಧತಿಯಿರುವ ಫ್ರಾನ್ಸದಲ್ಲಿಯೂ ನಾಗರಿಕನಿಗೆ ದೊರೆಯುತ್ತದೆ.

**೬. ರಾಜ್ಯಘಟನೆಯಲ್ಲಿ ಪ್ರಾತಿನಿಧ್ಯದ ಸಮಸ್ಯೆಗಳು.**

ಜನತಾ ರಾಜ್ಯದ ಕಾಯದೆ ಮಂಡಲಗಳು ನಿಜವಾಗಿ ಜನರನ್ನು ಪ್ರತಿನಿಧಿಸುವಂತೆ ಮಾಡುವುದೊಂದು ಕಠಿಣ ಸಮಸ್ಯೆ.ಈ ಸಮಸ್ಯೆಯನ್ನು ಬಿಡಿಸಲು ಅನೇಕ ಬಗೆಯ ಕಾಯ್ದೆ ಮಂಡಲಗಳನ್ನು ರಚಿಸುವ ಏರ್ಪಾಟುಗಳಾ

ಗಿವೆ. ಕೆಲವು ರಾಜ್ಯ ಘಟನೆಗಳು ವಯಸ್ಕ ಪುರುಷರಿಗೆಲ್ಲ ಮತದಾನ ಹಕ್ಕು ಕೊಟ್ಟಿವೆ. ಇನ್ನು ಕೆಲವು ರಾಜ್ಯಘಟನೆಗಳು ವಯಸ್ಕ ಸ್ತ್ರೀಪುರುಷರಿಗೆಲ್ಲ ಮತದಾನ ಹಕ್ಕು ಕೊಟ್ಟಿವೆ.ಕೆಲವು ರಾಜ್ಯಗಳು ಒಬ್ಬ ಪ್ರತಿನಿಧಿಯನ್ನೇ ಆರಿಸುವ ಮತದಾರ ಕ್ಷೇತ್ರಗಳನ್ನು ಮಾಡಿವೆ. ಇನ್ನು ಕೆಲವು ರಾಜ್ಯಗಳು ಪ್ರಮಾಣ ಪ್ರಾತಿನಿಧ್ಯದ ತತ್ವದ ಪ್ರಕಾರ ಸದಸ್ಯರನ್ನು ಆರಿಸುವ ದೊಡ್ಡ ಮತದಾರ ಕ್ಷೇತ್ರಗಳನ್ನು ಮಾಡಿದ್ದಾರೆ. ಕೆಲವು ರಾಜ್ಯಗಳಲ್ಲಿ ಒಂದೇ ಮನೆಯ ಶಾಸನ ಸಭೆಯಿದ್ದರೆ, ಇನ್ನು ಕೆಲವು ರಾಜ್ಯಗಳಲ್ಲಿ ಎರಡು ಮನೆಗಳುಳ್ಳ ಶಾಸನ ಸಭೆಗಳಿವೆ. ಕೆಲವು ರಾಜ್ಯಗಳ ಮೇಲ್ಮನೆಗಳು ಚುನಾವಣೆಯಿಂದ ರಚಿತವಾಗುತ್ತಿದ್ದರೆ ಇನ್ನು ಕೆಲವು ರಾಜ್ಯಗಳಲ್ಲಿ ಮೇಲ್ಮನೆಗಳು ಆನುವಂಶಿಕವಾಗಿ ಪ್ರಾತಿನಿಧ್ಯ ಪಡೆಯುವ ಜನರಿಂದ ತುಂಬಿವೆ. ಶಾಸನ ಸಭೆಗಳನ್ನು ರಚಿಸುವ ಈ ಸಾಮಾನ್ಯ ವಿಧಾನಗಳಲ್ಲದೆ ಕೆಲವು ದೇಶಗಳಲ್ಲಿ ಆಯಾ ಸಮಸ್ಯೆಗಳ ಮೇಲೆ ನೇರವಾಗಿ ಜನರು ಮತ ವ್ಯಕ್ತಮಾಡಲು ಅವಕಾಶವಿದೆ. ಕಾಯ್ದೆಯ ವಿಷಯಗಳನ್ನು ಸೂಚಿಸಲು ಸಾರ್ವಜನಿಕರಿಗೆ ಅವಕಾಶವಿದೆ; ಮತ್ತು ಚುನಾಯಿತ ಪ್ರತಿನಿಧಿಗಳನ್ನು ಮರಳಿ ಕರೆಯಿಸಿಕೊಳ್ಳುವ ಪರಿಪಾಠವೂ ಇದೆ.

ಶಾಸನ ಸಭೆಯು ಯಾವುದೇ ಬಗೆಯಿಂದ ರಚಿತವಾದರೂ ಅದು ದೇಶದ ಸಾರ್ವತ್ರಿಕ ಅಭಿಪ್ರಾಯವನ್ನು ಪ್ರತಿನಿಧಿಸುತ್ತಿರಬೇಕಲ್ಲದೆ ಉತ್ತಮ ಸರಕಾರವನ್ನು ಅಸ್ತಿತ್ವದಲ್ಲಿಡಲು ಸಮರ್ಥವಾಗಿರಬೇಕು. ಶಾಸನ ಸಭೆಯ ಈ ಉದ್ದೇಶವು ಸಫಲವಾಗುವುದೂ ವಿಫಲವಾಗುವುದೂ ಆಯಾ ರಾಜ್ಯಗಳ ನಾಗರಿಕರ ಸ್ವಭಾವದ ಮೇಲೆ ಅವಲಂಬಿಸಿದೆ.

**೭. ಹಿಂದುಸ್ತಾನದ ರಾಜ್ಯಘಟನೆಯ ಸ್ವರೂಪ.**

ಈಗ ಹಿಂದುಸ್ತಾನದ ರಾಜ್ಯ ಘಟನೆಯನ್ನು ಮೇಲೆ ವಿವರಿಸಿದ ಮಾನದಂಡಗಳಿಂದ ಅಳೆದು ನೋಡೋಣ. ಹಿಂದುಸ್ತಾನವು ಶಾಂತತೆಯ ಕಾಲದಲ್ಲಿ ಸಂಯುಕ್ತ ರಾಜ್ಯದಂತೆ ಕಾರ್ಯ ಮಾಡುವುದಾದರೂ, ಗಂಡಾಂತರ ಸಮಯಕ್ಕೆ ಏಕತ್ರ ರಾಜ್ಯವಾಗಿ ಪರಿವರ್ತನೆ ಹೊಂದಬಲ್ಲದು. ಹಿಂದುಸ್ತಾನದ ಉಲ್ಲಿಖಿತ ಸಂವಿಧಾನವನ್ನು ಬದಲಿಸುವ ಅಷ್ಟು ಕಠಿಣವಲ್ಲದ ವಿಶಿಷ್ಟ ರೀತಿಯನ್ನೇ ಅನುಸರಿಸಬೇಕಾಗುತ್ತದೆ. ಹಿಂದುಸ್ತಾನದ ಶಾಸನಾಂಗವು ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯಿಂದ ಆರಿಸಲ್ಪಟ್ಟ ಬಲಿಷ್ಠ ಕೆಳ

ಮನೆಯಿಂದಲೂ, ಅಪ್ರತ್ಯಕ್ಷವಾಗಿ ಚುನಾಯಿತವಾದ ಸದಸ್ಯರಿಂದ ಕೂಡಿದ ಮೇಲ್ಮನೆಯಿಂದಲೂ ಕೂಡಿದೆ. ಹಿಂದುಸ್ತಾನದ ಕಾರ್ಯಾಂಗವು ಮಂತ್ರಿ ಪರಿಷತ್ತಿನ ಕಾರ್ಯಾಂಗವಾಗಿದೆ. ಹಿಂದುಸ್ತಾನದಲ್ಲಿ ಶಾಸನ ಪ್ರಾಧಾನ್ಯ ನ್ಯಾಯ ಪದ್ಧತಿಯಿದೆ. ಹೀಗೆ ಪ್ರತಿಯೊಂದು ರಾಜ್ಯಘಟನೆಯ ವೈಶಿಷ್ಟ್ಯಗಳನ್ನು ವಿವರಿಸಬಹುದು. ಈ ವಿವರಣೆಯು ಸುದೀರ್ಘವಾಗಿದ್ದರೂ ಅಪೂರ್ಣವಾಗಿದೆಯೆಂಬುದನ್ನು ಮಾತ್ರ ಮರೆಯಬಾರದು. ಯಾವುದೊಂದು ದೇಶದ ರಾಜ್ಯಘಟನೆಯ ನಿಜಸ್ವರೂಪವನ್ನರಿಯಬೇಕಾದರೆ ಆ ದೇಶದ ಜನರ ರೀತಿನೀತಿ, ಸಾಂಪ್ರದಾಯ, ಸಂಸ್ಕೃತಿ, ನೈಸರ್ಗಿಕ ಸಂಪತ್ತು, ಆರ್ಥಿಕ ವ್ಯವಸ್ಥೆ, ಸಂಘ ಸಂಸ್ಥೆಗಳನ್ನೆಲ್ಲ ಕೂಲಂಕಷವಾಗಿ ಅಭ್ಯಸಿಸಬೇಕಾಗುತ್ತದೆ.

ನಾಗರಿಕರ ಹಕ್ಕು ಬಾಧ್ಯತೆಗಳ ರಕ್ಷಣೆ, ಸಾಮಾಜಿಕ ಶಾಂತಿ ಮತ್ತು ಪ್ರಗತಿ ಸಾಧನೆ, ರಾಷ್ಟ್ರೀಯ ಉಚ್ಚಸಾಂಪ್ರದಾಯ ಮತ್ತು ಸಂಸ್ಕೃತಿಗಳ ಅಭಿವೃದ್ಧಿಗಳೇ ಘಟನಾತ್ಮಕ ರಾಜಕಾರಣದ ಮೂಲ ಗುರಿ. ಈ ಗುರಿ ಸಾಧಿಸಲು ಎಲ್ಲ ಘಟನಾತ್ಮಕ ಪ್ರಯೋಗಗಳು ನಡೆಯುತ್ತ ಬಂದಿವೆ.

ಸಹಾಯಕ ಗ್ರಂಥಗಳು—

1. Theory and Practice of Modern Govts.
By Herman Finer.
2. Governments of Europe By W B. Munro.
3. Indian Constitution — 1950.

## ಪ್ರಕರಣ ೫. ನಾಗರಿಕ ಸ್ವಾತಂತ್ರ್ಯಗಳು

೧. ನಾಗರಿತ್ವದ ತಿರುಳು.
೨. ನಾಗರಿಕತ್ವವನ್ನು ಪಡೆಯುವ ವಿಧಾನಗಳು.
೩. ಅನ್ಯದೇಶೀಯರ ಸ್ಥಾನಮಾನಗಳು.
೪. ನಾಗರಿಕ ನೀತಿಯ ಹುಟ್ಟು ಮತ್ತು ಬೆಳವಣಿಗೆ.
೫. ನಾಗರಿಕರ ಹಕ್ಕುಗಳು.
೬. ನಾಗರಿಕರ ಕರ್ತವ್ಯಗಳು.
೭. ನಾಗರಿಕನ ಶೀಲ.

# ಪ್ರಕರಣ ೫.

## ನಾಗರಿಕ ಸ್ವಾತಂತ್ರ್ಯಗಳು.

೧ ನಾಗರಿಕತ್ವದ ತಿರುಳು.

ನಾಗರಿಕರ ವಿವೇಕಯುಕ್ತ ಆಸಕ್ತಿಯೇ ಜನತಾರಾಜ್ಯದ ಬುನಾದಿ. ಜನರು ತಮ್ಮ ರಾಜ್ಯದ ಆಗುಹೋಗುಗಳ ಬಗ್ಗೆ ಅನಾಸಕ್ತಿಯನ್ನು ತಾಳಿದರೆ ಅವರು ತುಸು ದಿನಗಳಲ್ಲಿ ಸರ್ವಾಧಿಕಾರಿತ್ವಕ್ಕೆ ಆಸ್ಪದ ಕೊಡುವುದು ನಿಶ್ಚಿತ. ಜನರು ತಮ್ಮ ಹಕ್ಕು ಬಾಧ್ಯತೆಗಳನ್ನು ತಾವೇ ನಿರ್ಧರಿಸಿಕೊಳ್ಳಲು ಮನಸ್ಸು ಮಾಡದಿದ್ದರೆ, ಆಳರಸರು ವಿಧಿಸಿದ ಅಪ್ಪಣೆಗಳಿಗೆ ತಲೆಬಾಗಿ ನಡೆಯ ತೊಡಗಿದರೆ, ಅವರು ಪ್ರಜೆಗಳಾಗಿ ಬಾಳಬಲ್ಲರೆ ಹೊರತು ನಾಗರಿಕರಾಗಿ ಬಾಳಲಾರರು. ಪ್ರಜೆಗಳಾಗಿದ್ದವರಿಗೆ ಹಕ್ಕುಗಳಿಗಿಂತಲೂ ಬಾಧ್ಯತೆಗಳ ಭಾರವೇ ಹೆಚ್ಚಾಗಿರುತ್ತದೆ. ನಾಗರಿಕರಾದವರು ತಮ್ಮ ಹಕ್ಕು ಬಾಧ್ಯತೆಗಳನ್ನು ತಾವೇ ನಿರ್ಧರಿಸಿಕೊಳ್ಳುವರು ; ತಮ್ಮ ರಾಜ್ಯದ ರೂಪರೇಷೆಗಳನ್ನು ತಾವೇ ಗೊತ್ತುಪಡಿಸುವರು; ತಮ್ಮ ರಾಜ್ಯದ ಸಂವಿಧಾನದಲ್ಲಿ ಉಲ್ಲಿಖಿತವಾಗಿರುವ ಸ್ವಾತಂತ್ರ್ಯಗಳಿಗೆ ಜೀವಕಳೆ ತುಂಬುವರು.

ನಾಗರಿಕನು ತನ್ನ ರಾಜ್ಯದ ಎಲ್ಲ ಆಗುಹೋಗುಗಳಲ್ಲಿ ವಿವೇಕಯುಕ್ತ ರೀತಿಯಿಂದ ಭಾಗವಹಿಸುವ ಅರ್ಹತೆಯೇ ನಾಗರಿಕತ್ವ. ನಾಗರಿಕತ್ವದಿಂದ ವ್ಯಕ್ತಿಯ ರಾಜಕೀಯ ಸ್ಥಾನಮಾನ ಮತ್ತು ಹಕ್ಕುಬಾಧ್ಯತೆಗಳ ಪರಿಚಯವಾಗುತ್ತದೆ. ನಾಗರಿಕತ್ವದ ತಳಹದಿಯ ಮೇಲೆಯೇ ಜನರು ತಮ್ಮ ರಾಜ್ಯದ ಶಾಸನಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ಕಾರ್ಯಕಲಾಪಗಳನ್ನು ನಿಯಂತ್ರಿಸುತ್ತಾರೆ. ಇದಲ್ಲದೆ ನಾಗರಿಕತ್ವವು ಅವರ ಮೇಲೆ ತಮ್ಮ ರಾಜ್ಯದ ರಕ್ಷಣೆಯ ಭಾರವನ್ನೂ, ಸರಕಾರದ ಆಡಳಿತೆಯ ವೆಚ್ಚದ ಭಾರವನ್ನೂ ಹಾಕುತ್ತದೆ.

ಇಂತಹ ನಾಗರಿಕತ್ವದ ಕಲ್ಪನೆಯು ಒಮ್ಮಿಂದೊಮ್ಮೆ ಜಗತ್ತಿನಲ್ಲಿ ಕಾಣಿಸಿಕೊಳ್ಳಲಿಲ್ಲ. ಅದಕ್ಕೂ ಒಂದು ಇತಿಹಾಸವಿದೆ. ಪ್ರಾಚೀನ ಹಿಂದುಸ್ತಾನದಲ್ಲಿ ರಾಜಕೀಯ ಸೂತ್ರಗಳು ಬಹುತರವಾಗಿ ಬ್ರಾಹ್ಮಣ ಕ್ಷತ್ರಿಯ ವರ್ಗಗಳ ಕೈಯಲ್ಲಿದ್ದುವು. ಆದುದರಿಂದ ಆಗ ಪೂರ್ಣ ನಾಗರೀಕತ್ವವು ಆ ವರ್ಗಗಳ ಜನರಿಗೆ ಮಾತ್ರ ಲಭಿಸುತ್ತಿತ್ತು. ಉಳಿದ ಬಹು ಜನರು ಪ್ರಜೆಗಳಾಗಿ ಬಾಳು

ತ್ತಿದ್ದರು. ಆ ಕಾಲದ ಗಣ ರಾಜ್ಯಗಳಲ್ಲಿಯೂ ಸಹ ಇದೇ ಸ್ಥಿತಿಯಿದ್ದಿತೆಂದು ಕಂಡುಬರುತ್ತದೆ. ಯೋಧೇಯ, ಮಲ್ಲವ, ಕ್ಷೂದ್ರಕ, ವೃಷ್ಣಿ, ಸಾಕ್ಯ, ಲಿಚ್ಛವಿ ಮೊದಲಾದ ಗಣ ರಾಜ್ಯಗಳಲ್ಲಿ ಪೂರ್ಣ ನಾಗರಿಕತ್ವದ ಹಕ್ಕು ಕೇವಲ " ರಾಜನ್ಯ " ರಿಗೆ ಮೀಸಲಾಗಿದ್ದಿತೆಂದು ತಿಳಿದುಬಂದಿದೆ. ಇನ್ನು ಮಧ್ಯಯುಗದಲ್ಲಿಯೂ ಸಾರ್ವತ್ರಿಕ ನಾಗರಿಕತ್ವಕ್ಕೆ ಮನ್ನಣೆಯಿದ್ದಿಲ್ಲವೆಂಬುದು ಎಲ್ಲರಿಗೂ ಪರಿಚಿತವಿರುವ ಸಂಗತಿ. ಯುರೋಪದಲ್ಲಿ ಉಂಟಾದ ಪುನರುಜ್ಜೀವನ, ಧಾರ್ಮಿಕ ಸುಧಾರಣೆಯ ಅಂದೋಲನ, ವೈಜ್ಞಾನಿಕ ಪ್ರಗತಿ, ರಾಜಕೀಯ ಮತ್ತು ಔದ್ಯೋಗಿಕ ಕ್ರಾಂತಿಗಳ ಪರಿಣಾಮವಾಗಿ ೧೯ ನೆಯ ಶತಮಾನದ ಕೊನೆಗೆ ಸಾರ್ವತ್ರಿಕ ನಾಗರಿಕತ್ವದ ತತ್ವಕ್ಕೆ ಮನ್ನಣೆ ದೊರೆಯಿತು. ಇಂದಿನ ಜಗತ್ತಿನಲ್ಲಿ ಜನತಾ ರಾಜ್ಯಗಳೆಲ್ಲ ಸಾರ್ವತ್ರಿಕ ನಾಗರಿಕತ್ವದ ತಳಹದಿಯ ಮೇಲೆ ಕಟ್ಟಲ್ಪಟ್ಟಿವೆ.

ಸಾರ್ವತ್ರಿಕ ನಾಗರಿಕತ್ವದ ಹಿನ್ನೆಲೆಯಲ್ಲಿ " ಮಾನವನೇ ಸಮಾಜದ ಮೂಲ " ಎಂಬ ಕೇಂದ್ರ ವಿಚಾರವು ಅಡಗಿದೆ. ವಿವಿಧ ಬಗೆಯ ವ್ಯಕ್ತಿಗಳ ಸೌಹಾರ್ದಮಯ ಜೀವನದಿಂದ ಸಮಾಜವು ನಿರ್ಮಾಣವಾಗಿದೆ. ಸಮಾಜವು ಸತ್ಯ, ಸೌಂದರ್ಯ, ಮತ್ತು ಒಳ್ಳೆಯತನಗಳಿಂದ ಬೆಳಗಬೇಕಾದರೆ ಈ ಜಗತ್ತಿನಲ್ಲಿ ಜನ್ಮವೆತ್ತಿದ ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಆದ ರೀತಿಯಲ್ಲಿ ಜೀವಿಸಲು ಸ್ವಾತಂತ್ರ್ಯವಿರಬೇಕು. ರಾಜ್ಯವು ವ್ಯಕ್ತಿಯ ಈ ಜನ್ಮಸಿದ್ಧ ಹಕ್ಕನ್ನು ಸದಾ ಮನ್ನಿಸಬೇಕು. ಒಂದು ರಾಜ್ಯದಲ್ಲಿ ವಾಸಿಸುವ ಕೆಲವೇ ಜನರು ನಾಗರಿಕತ್ವಕ್ಕೆ ಅರ್ಹರಾಗಿದ್ದು, ಉಳಿದ ಬಹು ಜನರು ಅದಕ್ಕೆ ಹೊರತಾಗಿದ್ದರೆ, ಆ ರಾಜ್ಯವು ಬಹುಜನರ ಸರ್ವಾಂಗೀಣ ವಿಕಾಸಕ್ಕೆ ಬಾಧಕವಾಗಬಲ್ಲದೆ ಹೊರತು ಸಾಧಕವಾಗಲಾರದು. ಏಕೆಂದರೆ ಇಂದಿಲ್ಲ ನಾಳೆ ಪೂರ್ಣ ನಾಗರಿಕತ್ವಕ್ಕೆ ಅರ್ಹರಾದ ವಿಶಿಷ್ಟವರ್ಗದ ಜನರು ತಮ್ಮ ಅಧಿಕಾರವನ್ನು ಬಹು ಜನರ ಸುಲಿಗೆ ಮಾಡಲು ಉಪಯೋಗಿಸಬಹುದು. ಆದರಿಂದ ಇಡೀ ಜನತೆಯ ಕಲ್ಯಾಣವಾಗದು. ಅಂತೆಯೇ ಜನತಾ ರಾಜ್ಯಗಳೆಲ್ಲ ಸಾರ್ವತ್ರಿಕ ನಾಗರಿಕತ್ವವನ್ನೇ ಆಧಾರವಾಗಿಟ್ಟುಕೊಂಡಿವೆ.

**೨. ನಾಗರಿಕತ್ವವನ್ನು ಪಡೆಯುವ ವಿಧಾನಗಳು.**

ಒಂದು ರಾಜ್ಯದಲ್ಲಿ ಜನಿಸಿದ ಇಲ್ಲವೆ ಸರಕಾರದಿಂದ ಸ್ವೀಕೃತವಾದ ವ್ಯಕ್ತಿಯು ಎಲ್ಲ ದೃಷ್ಟಿಯಿಂದಲೂ ಆ ರಾಜ್ಯದ ರಾಜಕೀಯ ಕಕ್ಷೆಯೊಳಗೆ

ಬಂದರೆ ಅವನು ಆ ರಾಜ್ಯದ ನಾಗರಿಕನೆಂದು ಗಣಿಸಲ್ಪಡುತ್ತಾನೆ. ಜಗತ್ತಿನಲ್ಲಿ ಇಂದು ವ್ಯಕ್ತಿಯ ನಾಗರಿಕತ್ವವನ್ನು ಗೊತ್ತುಹಚ್ಚುವ ಎರಡು ಸಾಂಪ್ರದಾಯಗಳಿವೆ. ವ್ಯಕ್ತಿಯ ಜನ್ಮಸ್ಥಾನದ ಮೇಲಿಂದ ಅವನ ನಾಗರಿಕತ್ವವನ್ನು ಗೊತ್ತುಪಡಿಸುವ ಒಂದು ಸಾಂಪ್ರದಾಯವಿದೆ. ಇದಕ್ಕೆ ಬದಲಾಗಿ ವ್ಯಕ್ತಿಯ ತಂದೆ ತಾಯಿಗಳ ನಾಗರಿಕತ್ವದ ಮೇಲಿಂದ ಅವನ ನಾಗರಿಕತ್ವವನ್ನು ಗೊತ್ತುಹಚ್ಚುವ ಇನ್ನೊಂದು ಸಾಂಪ್ರದಾಯವಿದೆ. ಇಂದು ಬಳಿಕೆಯಲ್ಲಿರುವ ನಾಗರಿಕತ್ವದ ಕಾಯ್ದೆಗಳು ಮೊದಲಿನ ಸಾಂಪ್ರದಾಯವನ್ನೇ ಹೆಚ್ಚಾಗಿ ಅನುಸರಿಸುತ್ತಿದ್ದರೂ, ಅವಶ್ಯವಿದ್ದಲ್ಲಿ ಎರಡನೆಯ ಸಾಂಪ್ರದಾಯವನ್ನೂ ಗಮನಿಸುತ್ತದೆ.

ನಾಗರಿಕತ್ವದ ಬಗ್ಗೆ ಇರುವ ಕಾಯ್ದೆಗಳು ಬಹಳ ಕ್ಲಿಷ್ಟವಾಗಿವೆ. ಅವುಗಳೊಳಗಿಂದ ಇಲ್ಲಿ ಕೆಲವೇ ಸುಲಭ ನಿಯಮಗಳನ್ನು ಎತ್ತಿಕೊಳ್ಳಬಹುದು:—

(೧) ಒಂದು ರಾಜ್ಯದ ನಾಗರಿಕರಾಗಿರುವ ಸ್ತ್ರೀ—ಪುರುಷರು ಪರನಾಡಿನಲ್ಲಿ ವಾಸಿಸುವಾಗ ಒಂದು ಮಗುವನ್ನು ಪಡೆದರೆ, ಆ ಮಗುವನ್ನು ಅವರ ರಾಜ್ಯವು ತನ್ನ ನಾಗರಿಕನೆಂದು ಸ್ವೀಕರಿಸುವುದು.

(೨) ಅಲ್ಪ ವಯಸ್ಕ ಮಗುವಿನ ತಂದೆ—ತಾಯಿಗಳು ಬೇರೊಂದು ರಾಜ್ಯದ ನಾಗರಿಕತ್ವವನ್ನು ಸಂಪಾದಿಸಿಕೊಂಡಾಗ್ಯೂ ಆ ಮಗುವು ವಯಸ್ಸಿಗೆ ಬಂದ ಮೇಲೆ ತನ್ನ ಮೊದಲ ನಾಗರಿಕತ್ವವನ್ನು ಪಡೆಯಬಹುದು.

(೩) ಒಂದು ಪ್ರದೇಶವನ್ನು ಗೆದ್ದ ರಾಜ್ಯವು ಆ ಪ್ರದೇಶದ ಎಲ್ಲ ಜನರಿಗೆ ತನ್ನ ನಾಗರಿಕತ್ವವನ್ನು ಕೊಡಬಹುದು.

(೪) ಅನ್ಯ ದೇಶಿಯನನ್ನು ವಿವಾಹವಾದ ಸ್ತ್ರೀಯು ತನ್ನ ಮೊದಲ ನಾಗರಿಕತ್ವವನ್ನು ಕಳೆದುಕೊಂಡು ತನ್ನ ಪತಿಯ ರಾಜ್ಯದ ನಾಗರಿಕತ್ವವನ್ನು ಪಡೆಯಬಹುದು.

(೫) ಒಂದು ರಾಜ್ಯದ ನಾಗರಿಕನು ಬೇರೊಂದು ರಾಜ್ಯದಲ್ಲಿ ಬಹು ದಿನಗಳ ವರೆಗೆ ವಾಸವಾಗಿದ್ದು ಅಲ್ಲಿಯೇ ಉಳಿಯಬಯಸಿದರೆ ಅಲ್ಲಿಯ ಸರಕಾರವುಅವನನ್ನು ತನ್ನ ರಾಜ್ಯದ ನಾಗರಿಕನೆಂದು ಸ್ವೀಕರಿಸಬಹುದು. ಆಗ ಅವನ ಮೊದಲ ನಾಗರಿಕತ್ವವು ನಾಶವಾಗುತ್ತದೆ.

(೬) ರಾಜ್ಯಕ್ಕೆ ಅವಿಧೇಯನಾಗಿ ವರ್ತಿಸಿದ ವ್ಯಕ್ತಿಯು ತನ್ನ ನಾಗರಿಕತ್ವವನ್ನು ಕಳೆದುಕೊಳ್ಳುತ್ತಾನೆ. ರಾಜ್ಯವು ಅವನನ್ನು ದೇಶದಿಂದ ಹೊರ ತಳ್ಳಬಹುದು. ಆಗ ಅವನು ಹೋಗಿ ನೆಲೆಸಬಹುದಾದ ರಾಜ್ಯವು ಅವನಿಗೆ ತನ್ನ ನಾಗರಿಕತ್ವವನ್ನು ನಿರಾಕರಿಸಬಹುದು. ಹೀಗೆ ಯಾವ ದೇಶದ ನಾಗರಿಕತ್ವವನ್ನೂ ಪಡೆಯದೇ ಇರುವ ವ್ಯಕ್ತಿಗಳು ತೀರ ವಿರಳ.

೩. ಅನ್ಯದೇಶೀಯರ ಸ್ಥಾನಮಾನಗಳು.

ಇಲ್ಲಿ ಒಂದು ರಾಜ್ಯದ ನಾಗರಿಕರು ಇನ್ನೊಂದು ರಾಜ್ಯದಲ್ಲಿರುವಾಗ ಅವರ ಸ್ಥಾನಮಾನಗಳೇನು ಎಂಬುದನ್ನು ತಿಳಿದುಕೊಳ್ಳುವುದು ಅವಶ್ಯವಿದೆ. ಅನ್ಯ ದೇಶಿಯರು ತಾತ್ಕಾಲಿಕವಾಗಿ ವಾಸವಾಗಿರುವ ರಾಜ್ಯದ ರಾಜಕೀಯ ಹಕ್ಕುಗಳಿಗೆ ಅರ್ಹರಾಗಿರುವುದಿಲ್ಲ; ಇಲ್ಲವೆ ರಾಜಕೀಯ ಬಾಧ್ಯತೆಗಳಿಗೆ ಕಟ್ಟುಬಿದ್ದಿರುವುದಿಲ್ಲ. ಅವರು ಆ ರಾಜ್ಯದ ಕಾಯದೆ ಮಂಡಲಗಳಿಗೆ ಆಯ್ಕೆ ಹೊಂದಲಾರರು, ಇಲ್ಲವೆ ಚುನಾವಣೆಯಲ್ಲಿ ಭಾಗವಹಿಸಲಾರರು. ಅವರು ಆ ರಾಜ್ಯದ ಸೈನ್ಯದಲ್ಲಿ ಸೇರಲು, ಜೂರಿಯಾಗಿ ಕೆಲಸಮಾಡಲು ಇಲ್ಲವೆ ಚುನಾವಣೆಯ ಅಧಿಕಾರಿಯಾಗಲು ಬದ್ಧರಲ್ಲ.

ಅನ್ಯದೇಶೀಯರು ರಾಜಕೀಯ ಹಕ್ಕುಬಾಧ್ಯಗಳಿಗೆ ಅರ್ಹರಾಗಿರದಿದ್ದರೂ ರಾಜ್ಯದ ಸಾಮಾನ್ಯ ಕಾಯ್ದೆಗಳ ಸಂರಕ್ಷಣೆಗೆ ಪಾತ್ರರು ಮತ್ತು ನಿರ್ಬಂಧನೆಗಳಿಂದ ಬದ್ಧರು. ಅನ್ಯದೇಶೀಯರ ವಿತ್ತಜೀವಿತಗಳಿಗೆ ಧಕ್ಕೆ ಬರುವಂತೆ ಯಾರಾದರೂ ವರ್ತಿಸಿದ್ದಾದರೆ, ಅವರನ್ನು ರಾಜ್ಯವು ಶಿಕ್ಷೆಗೆ ಗುರಿಪಡಿಸುತ್ತದೆ. ಅನ್ಯದೇಶೀಯರು ಯಾವುದಾದರೊಂದು ಅಪರಾಧ ಮಾಡಿದರೆ ರಾಜ್ಯದ ನ್ಯಾಯಾಲಯಗಳು ಅವರನ್ನು ದಂಡಿಸಬಲ್ಲವು. ಆದರೆ ಪರರಾಜ್ಯಗಳಲ್ಲಿ ಅಪರಾಧ ಮಾಡಿ ಇಲ್ಲವೆ ಅಲ್ಲಿಯ ಆಸ್ತಿಪಾಸ್ತಿಯ ವ್ಯವಹಾರದಲ್ಲಿ ಹೊಣೆಗಾರರಾಗಿ ಬಂದು ವಾಸವಾಗಿದ್ದ ಅನ್ಯದೇಶೀಯರನ್ನು ರಾಜ್ಯದ ನ್ಯಾಯಾಲಯಗಳು ತಮ್ಮ ಕಾಯ್ದೆಗಳ ಪ್ರಕಾರ ದಂಡಿಸಲಾರವು. ಬಹಳವಾದರೆ ಅಂಥವರನ್ನು ಆಯಾ ಸರಕಾರಗಳಿಗೆ ಒಪ್ಪಿಸಬಹುದು. ಆದರೆ ರಾಜಕೀಯ ಅಪರಾಧ ಮಾಡಿ ಓಡಿಬಂದು ನೆಲೆಸಿದ ಅನ್ಯದೇಶೀಯರನ್ನು ಮಾತ್ರ ಬಹುತರವಾಗಿ ಯಾವ ರಾಜ್ಯವೂ ಅವರವರ ಸರಕಾರಗಳಿಗೆ ಮರಳಿ ಒಪ್ಪಿಸುವುದಿಲ್ಲ. ರಾಜಕೀಯ ಅಪರಾಧ ಮಾಡಿದ ಅನ್ಯದೇಶೀಯರಿಗೆ

ವಾಸವಾಗಿರಲು ಅವಕಾಶ ಕೊಡುವುದು ನಾಗರಿಕ ರಾಜ್ಯದ ಕರ್ತವ್ಯವೆಂದು ಗಣಿಸಲ್ಪಡುತ್ತದೆ.

ಇನ್ನು ವೈರಿ ರಾಜ್ಯಗಳ ನಾಗರಿಕರು ಒಂದು ರಾಜ್ಯದಲ್ಲಿ ವಾಸವಾಗಿದ್ದರೆ ಅವರನ್ನು ನಿರ್ಬಂಧಿಸಲಾಗುತ್ತದೆ. ಅವರ ಉದ್ಯೋಗ ವ್ಯವಹಾರಗಳನ್ನು ರಾಜ್ಯವು ತನ್ನ ಕೈಯಲ್ಲಿ ತೆಗೆದುಕೊಳ್ಳುತ್ತದೆ. ಈ ನಿರ್ಬಂಧನೆಗಳು ಮುಂದೆ ಆ ಎರಡೂ ರಾಜ್ಯಗಳ ನಡುವೆ ಶಾಂತಿಯ ಒಪ್ಪಂದವಾಗುವ ವರೆಗೆ ಮುಂದುವರೆಯುತ್ತವೆ.

ಪ್ರತಿಯೊಂದು ರಾಜ್ಯದಲ್ಲಿ ಪರದೇಶಗಳ ರಾಯಭಾರಿ ಕಚೇರಿಗಳಿರುತ್ತವೆ. ಈ ರಾಯಭಾರಿ ಕಚೇರಿಗಳಿಗೆ ಸಂಬಂಧಪಟ್ಟ ಅನ್ಯ ದೇಶೀಯರು ರಾಜ್ಯದ ಕಾಯ್ದೆಗಳ ಪರಿಮಿತಿಯಿಂದ ಕೆಲಮಟ್ಟಿಗೆ ಸ್ವತಂತ್ರರಿರುತ್ತಾರೆ. ಕೇವಲ ಫೌಜದಾರಿ ಸ್ವರೂಪದ ಅಪರಾಧಕ್ಕಾಗಿ ಅವರು ರಾಜ್ಯದ ಕಾಯ್ದೆಗಳಿಗೆ ಅಂಕಿತರಾಗಿರುತ್ತಾರೆ. ಒಂದು ವೇಳೆ ರಾಯಭಾರಿ ಕಚೇರಿಯ ಅನ್ಯದೇಶೀಯರು ರಾಜ್ಯದ ಸರಕಾರಕ್ಕೆ ಬೇಡವಾಗಿದ್ದರೆ ಅವರನ್ನು ಹಿಂದಕ್ಕೆ ಕರೆಯಿಸಿಕೊಳ್ಳುವಂತೆ ಆಯಾ ಸರಕಾರಗಳಿಗೆ ಒತ್ತಾಯಪಡಿಸಬಹುದು.

ಒಂದು ರಾಜ್ಯದ ನಾಗರಿಕರು ಇನ್ನೊಂದು ರಾಜ್ಯದೊಳಗೆ ಪ್ರವೇಶಿಸಬೇಕಾದರೆ ಇಲ್ಲವೆ ಉದ್ಯೋಗ ವ್ಯವಹಾರ ಮಾಡಬೇಕಾದರೆ ಆ ರಾಜ್ಯದ ಅಪ್ಪಣೆ ಪಡೆದುಕೊಳ್ಳಲೇಬೇಕು. ಹೀಗೆ ಇನ್ನೊಂದು ರಾಜ್ಯಕ್ಕೆ ಪ್ರವಾಸಕ್ಕಾಗಿ ಇಲ್ಲವೆ ಉದ್ಯೋಗ ವ್ಯವಹಾರಕ್ಕಾಗಿ ಹೋದ ಸ್ವದೇಶೀಯರು ಆ ದೇಶದಲ್ಲಿರುವಾಗ ಅವರ ಹಿತಸಂಬಂಧಗಳನ್ನು ಅಲ್ಲಿರುವ ಅವರ ದೇಶದ ರಾಯಭಾರಿ ಕಚೇರಿಯು ಸಂರಕ್ಷಿಸುತ್ತದೆ. ಈ ಬಗೆಯ ಅಂತರರಾಷ್ಟ್ರೀಯ ಸಂಪರ್ಕವು ನಾಗರಿಕತ್ವದ ತಳಹದಿಯ ಮೇಲೆಯೇ ಸಾಗಿರುತ್ತದೆ.

**೪. ನಾಗರಿಕ ನೀತಿಯ ಹುಟ್ಟು ಮತ್ತು ಬೆಳವಣಿಗೆ.**

ಮನುಷ್ಯನು ಮೂಲತಃ ವಿವೇಕಿಯಾದುದರಿಂದ ಅವನು ನೀತಿಪರನೂ ಆಗಬಲ್ಲನು. ಮನುಷ್ಯನ ನೀತಿಯು ಅವನ ನೈಸರ್ಗಿಕ ಮತ್ತು ಸಾಮಾಜಿಕ ವಾತಾವರಣಗಳ ಸಂಘರ್ಷಣೆಯಿಂದ ರೂಪುಗೊಳ್ಳುತ್ತದೆ. ಆದರೆ ನೀತಿಯ ಬೆಳವಣಿಗೆಯಲ್ಲಿ ನೈಸರ್ಗಿಕ ವಾತಾವರಣಕ್ಕಿಂತಲೂ ಸಾಮಾಜಿಕ ವಾತಾವರಣವೇ ಹೆಚ್ಚು ಮಹತ್ವದ್ದಾಗಿದೆ. ಮನುಷ್ಯನು ಇತರರ ಸಂಗಡ ವ್ಯವಹರಿಸಬಯಸುತ್ತಾನೆ. ಅವನು ವ್ಯವ

ಹರಿಸುವ ಉದ್ದೇಶಗಳು ಅನಂತವಾಗಿವೆ. ಮಗುವಿನ ಅಸಹಾಯಕತೆ ಯನ್ನು ಕಂಡು ಕರುಣೆಯಿಂದ ಮುದ್ದಿಡುತ್ತಾನೆ. ಸುಂದರ ವ್ಯಕ್ತಿಯನ್ನು ಕಂಡು ಮುಗ್ಧನಾಗುತ್ತಾನೆ. ಉಪಯುಕ್ತ ವಸ್ತುವನ್ನು ಕಂಡರೆ ಅದನ್ನು ತನ್ನ ಉಪಭೋಗಕ್ಕಾಗಿ ಎತ್ತಿಕೊಳ್ಳುತ್ತಾನೆ. ತಾನು ರೂಪವಂತನಾಗಿ ಕಾಣ ಬೇಕೆಂದು ಆಭರಣಗಳನ್ನು ಹಾಕಿಕೊಳ್ಳುತ್ತಾನೆ. ಕೆಲವು ಸಲ ನಾಯಕ ರನ್ನು ಹಿಂಬಾಲಿಸುತ್ತಾನೆ. ಇನ್ನು ಕೆಲವು ಸಲ ತಾನೇ ನಾಯಕನಾಗ ಬಯಸುತ್ತಾನೆ. ಹೀಗೆ ಅನಂತ ಉದ್ದೇಶಗಳಿಂದ ವ್ಯಕ್ತಿಯು ಸಮಾಜದಲ್ಲಿ ಜನರ ಸಂಗಡ ವ್ಯವಹರಿಸುವಾಗ ಕೆಲವು ನಡವಳಿಗಳು ತನಗೆ ಸಾಧಕವಾದು ವೆಂಬುದನ್ನೂ, ಇನ್ನು ಕೆಲವು ನಡವಳಿಗಳು ಬಾಧಕವಾದುವೆಂಬುದನ್ನೂ ಅವನು ಕಂಡುಕೊಳ್ಳುತ್ತಾನೆ. ಬರಬರುತ್ತ ಅವನು ತನಗೆ ಸಾಧಕವೆಂದು ಕಂಡುಬಂದ ನಡವಳಿಗಳನ್ನೇ ರೂಢಿ ಮಾಡಿಕೊಳ್ಳುತ್ತಾನೆ. ಹೀಗೆ ಪ್ರತಿ ಯೊಬ್ಬನೂ ಕಲಿತುಕೊಳ್ಳಬಹುದಾದ ನೈತಿಕ ನಡಾವಳಿಗಳು ಸಮಾಜದಲ್ಲಿ ಸಾರ್ವತ್ರಿಕವಾಗಿ ಒಪ್ಪಿತವಾಗುವ ನಡಾವಳಿಗಳೇ ಆಗಿರುತ್ತವೆ. ಹೀಗಾಗು ವುದು ಅನಿವಾರ್ಯ. ಸಮಾಜದಲ್ಲಿ ವ್ಯಕ್ತಿಗೆ ಸಿಗುವ ಆದರ ಅನಾದರ, ಹೊಗಳಿಕೆ ತೆಗಳಿಕೆ, ಸಹಕಾರ ಪ್ರತೀಕಾರ, ಪ್ರೀತಿ ವೈರತ್ವ ಮೊದಲಾದವುಗ ಳೆಲ್ಲ ಅವನನ್ನು ಜನತೆಯ ಸಾಮಾನ್ಯ ನೀತಿಪಥಕ್ಕೆ ಒಯ್ದು ಮುಟ್ಟಿಸುತ್ತವೆ. ಈ ಸಂಬಂಧದಲ್ಲಿ ಶಾಲೆ ಕಾಲೇಜುಗಳಲ್ಲಿ ವ್ಯಕ್ತಿಗೆ ದೊರೆಯುವ ಶಿಕ್ಷಣದ ಮಹತ್ವದ ಪಾತ್ರವನ್ನು ಗಮನಿಸಬೇಕು. ಒಂದು ಸಮಾಜದ ಶಾಲೆ ಕಾಲೇ ಜುಗಳಿಂದ ಹೊರಬೀಳುವ ಬಾಲಕರು ಸಾಮಾನ್ಯವಾಗಿ ಆ ಸಮಾಜದ ಪರಂಪರೆಗಳ ಪುರಸ್ಕರ್ತರೇ ಆಗಿರುತ್ತಾರೆ.

ಮನುಷ್ಯನ ನೀತಿಯು ಬಹುತರವಾಗಿ ಸಾಮಾಜಿಕ ವಾತಾವರಣದ ಮೇಲೆ ಅವಲಂಬಿಸಿದೆಯೆಂದ ಮೇಲೆ ಜನತಾ ರಾಜ್ಯದ ನಾಗರಿಕತ್ವಕ್ಕೆ ಯಾವ ಬಗೆಯ ಸಾಮಾಜಿಕ ವಾತಾವರಣವು ಅವಶ್ಯವೆಂಬುದನ್ನು ಇನ್ನು ಮೇಲೆ ಪರಾಮರ್ಶಿಸುವುದು ಉತ್ತಮ.

ಸಮಾಜದಲ್ಲಿ ಸಮತಾಭಾವನೆಯು ನೆಲೆಸಿದ್ದರೆ ಅದು ನಾಗರಿಕ ನೀತಿಗೆ ಹೆಚ್ಚು ಅನುಕೂಲ. ಮೇಲು ಕೀಳು ಭಾವನೆಗಳು ತೀಕ್ಷ್ಣವಾಗಿ ದ್ದರೆ, ಜಾತಿಪಂಥಗಳ ತಿಕ್ಕಾಟವಿದ್ದರೆ, ವರ್ಣದ್ವೇಷವಿದ್ದರೆ, ಜನರು ಕಠಿಣ ಪ್ರಸಂಗಗಳಲ್ಲಿ ಐಕ್ಯತೆ ಮತ್ತು ಶಿಸ್ತಿನಿಂದ ವರ್ತಿಸಲಾರರು. ಇದಕ್ಕೆ ಪ್ರತಿ

ಯಾಗಿ ಸಮಾಜದಲ್ಲಿ ಪ್ರತಿಯೊಬ್ಬನ ವ್ಯಕ್ತಿತ್ವಕ್ಕೆ ಗೌರವವಿದ್ದರೆ, ಪ್ರತಿಯೊಬ್ಬನಿಗೂ ತನ್ನ ಬೇಕು ಬೇಡಗಳನ್ನು ವ್ಯಕ್ತಪಡಿಸಲು ಅವಕಾಶವಿದ್ದರೆ, ಜನರು ವಿವೇಕಿಗಳಾಗಿಯೂ ಸ್ವಾಭಿಮಾನಿಗಳಾಗಿಯೂ ವರ್ತಿಸಬಲ್ಲರು. ಜನರ ವಿವೇಕಯುಕ್ತ ಮತ್ತು ಸ್ವಾಭಿಮಾನ ಪೂರ್ಣ ಆಚರಣೆಯಿಂದಲೇ ಉತ್ತಮ ನಾಗರಿಕ ನೀತಿಯು ವೃದ್ಧಿಹೊಂದುತ್ತದೆ.

ಸಮಾಜದಲ್ಲಿ ವಿರೋಧಾಭಿಪ್ರಾಯ ಸಹಿಷ್ಣುತಾ ಭಾವನೆಯು ಬಲವತ್ತರವಾಗಿದ್ದರೆ ಶಾಂತಪ್ರಿಯ ನಾಗರಿಕ ನೀತಿಯ ಬೆಳವಣಿಗೆಗೆ ಅನುಕೂಲ. ವಿರೋಧಾಭಿಪ್ರಾಯ ಸಹಿಷ್ಣುತಾ ಭಾವನೆಗೆ ಆರ್ಥಿಕ ಸಮತೆಯ ತಳಹದಿ ಅವಶ್ಯ. ಒಂದು ವೇಳೆ ಸಿರಿವಂತರು ಬಡವರು, ಹಳ್ಳಿಗರು ಪಟ್ಟಣಿಗರು, ಜಮೀನುದಾರರು ಒಕ್ಕಲಿಗರು, ಒಡೆಯರು ಕೂಲಿಕಾರರು ಮೊದಲಾದ ವರ್ಗಗಳ ನಡುವೆ ತೀಕ್ಷ್ಣ ವಿರೋಧಾಭಿಪ್ರಾಯಗಳಿದ್ದರೆ ರಾಜ್ಯದ ಶಾಂತತೆಗೆ ಭಂಗ ಬರುವ ಸಂಭವವಿದೆ. ಇದಕ್ಕೆ ಪ್ರತಿಯಾಗಿ ಪ್ರತಿಯೊಬ್ಬನಿಗೂ ಜೀವನದಲ್ಲಿ ಮುಂದುವರೆಯಲು ಸಮ ಅವಕಾಶವಿದ್ದರೆ, ಅವನು ತನ್ನ ನಿಲುವೆಯನ್ನು ಶಾಂತಚಿತ್ತದಿಂದ ವ್ಯಕ್ತಪಡಿಸುವನಲ್ಲದೆ ಇತರರನ್ನು ಸಹ ಗೌರವಿಸುವನು. ಈ ಬಗೆಯ ಸಹನಶೀಲತೆಯು ಜನತಾರಾಜ್ಯದ ನಾಗರಿಕ ನೀತಿಗೆ ಅವಶ್ಯ.

ಸುಶಿಕ್ಷಿತ ಸಮಾಜವು ನಾಗರಿಕತ್ವಕ್ಕೆ ಪೋಷಕವಾಗಿದೆ. ಮನುಷ್ಯನ ವ್ಯಕ್ತಿತ್ವವನ್ನು ಗೌರವಿಸುವ ಶಿಕ್ಷಣ, ಕಲೆ ಮತ್ತು ವ್ಯವಸಾಯಗಳೆರಡರಲ್ಲಿಯೂ ಅಭಿರುಚಿ ಹುಟ್ಟಿಸುವ ಶಿಕ್ಷಣ, ಸಮಾಜ ಸೇವೆಯ ಮೂಲಕ ವೈಯುಕ್ತಿಕ ಪ್ರಗತಿ ಸಾಧಿಸುವಂತೆ ಬೋಧಿಸುವ ಶಿಕ್ಷಣ ಮಾತ್ರ ಉತ್ತಮ ನಾಗರಿಕರನ್ನು ಸಿದ್ಧಗೊಳಿಸಬಹುದು. ಆದರೆ ವ್ಯಕ್ತಿಯ ಅಭಿಮಾನ ತಗ್ಗಿಸಿ ಕೇವಲ ಅಧಿಕಾರ ಪೂಜಕರನ್ನಾಗಿ ಮಾಡುವ ಶಿಕ್ಷಣ, ಸುಸಂಸ್ಕೃತರು ಅಸಂಸ್ಕೃತರು ಎಂಬ ಭೇದಭಾವವನ್ನು ಹುಟ್ಟಿಸುವಂತಹ ಶಿಕ್ಷಣ, ವರ್ಗ ವರ್ಗಗಳೊಳಗಿನ ತಾರತಮ್ಯವನ್ನು ಹೆಚ್ಚಿಸುವ ಶಿಕ್ಷಣ ಸಂಸ್ಕೃತಿ ರಹಿತ ವೃತ್ತಿಶಿಕ್ಷಣ, ವೃತ್ತಿರಹಿತ ಸಾಂಸ್ಕೃತಿಕ ಶಿಕ್ಷಣ ಮೊದಲಾದವುಗಳೆಲ್ಲ ಉತ್ತಮ ನಾಗರಿಕರನ್ನು ಸಿದ್ಧಪಡಿಸಲಾರವು. ಆದುದರಿಂದ ಸಮಾಜದಲ್ಲಿ ಏರ್ಪಟ್ಟ ಶಿಕ್ಷಣ ಕ್ರಮದ ಸಾಧುತ್ವದ ಮೇಲೆ ನಾಗರಿಕತ್ವದ ಬೆಳವಣಿಗೆಯು ಬಹುಮಟ್ಟಿಗೆ ಅವಲಂಬಿಸಿದೆ.

ಸಮಾಜವು ಮನುಷ್ಯನ ನಿರ್ಮಾಪಕ ಚೇತನದಿಂದ ಹೊರಹೊಮ್ಮುವ ಹೊಸ ಸಂಶೋಧನೆಗಳನ್ನು ಔದಾರ್ಯದಿಂದ ಕಾಣುತ್ತಿರಬೇಕು. ಇಲ್ಲವಾದರೆ ಸಮಾಜದಲ್ಲಿ ನೆಲೆಸಿರುವ ಲೋಪದೋಷಗಳು ಬಹುಕಾಲವುಳಿದು ಸಮಾಜದ ಅಧಃಪತನಕ್ಕೆ ಕಾರಣವಾಗಬಹುದು. ಆದುದರಿಂದ ಸಾಂಪ್ರದಾಯಗಳಿಗೆ ವಿರೋಧ ಪ್ರಾಯವಾಗಿ ಕಾಣಬಹುದಾದ ಸಂಶೋಧನೆಗಳನ್ನೂ ಸಹ ಜನರು ಔದಾರ್ಯದಿಂದ ಕಾಣಬೇಕು.

ಹೀಗೆ ಜನಾಂಗದ ಸಾಂಪ್ರದಾಯಗಳು ಸಾಮಾಜಿಕ ಸಮತಾ ಭಾವನೆ ಆರ್ಥಿಕ ಸಮ ಅವಕಾಶ, ವಿರೋಧಾಭಿಪ್ರಾಯ ಸಹಿಷ್ಣುತೆ, ವ್ಯಕ್ತಿತ್ವವನ್ನು ಗೌರವಿಸುವ ಶಿಕ್ಷಣ, ಸಂಶೋಧನಗಳ ಬಗ್ಗೆ ಔದಾರ್ಯ ಮೊದಲಾದ ಸಂಗತಿಗಳಿಂದ ಪೂರಿತವಾಗಿದ್ದರೆ ನಾಗರಿಕ ನೀತಿಗೆ ಉತ್ತೇಜನಕರ. ಇಂಗ್ಲಂಡ, ಫ್ರಾನ್ಸ, ಅಮೇರಿಕೆಗಳಲ್ಲಿ ಈ ಬಗೆಯ ಸಾಂಪ್ರದಾಯಗಳು ಬಹುದಿನಗಳಿಂದ ಪ್ರಚಲಿತವಿದ್ದುದರಿಂದಲೇ ಅಲ್ಲಿ ಜನತಾ ರಾಜ್ಯಗಳು ಅಭಿವೃದ್ಧಿಹೊಂದಿವೆ. ಈ ಬಗೆಯ ಸಾಂಪ್ರದಾಯಗಳಿಲ್ಲದ ಜರ್ಮನಿ,ಇಟಲಿ,ಜಪಾನಗಳಲ್ಲಿ ಜನತಾ ರಾಜ್ಯಗಳು ಒಂದರ ಹಿಂದೊಂದು ಅಳಿದುಹೋಗಿ ಸರ್ವಾಧಿಕಾರಿತ್ವಗಳು ತಲೆಯೆತ್ತಿದವು. ನಾಗರಿಕತ್ವದ ಪೋಷಣೆಗೆ ಅನುಕೂಲ ಸಾಮಾಜಿಕ ಸ್ಥಿತಿಗತಿಗಳಿರುವ ರಾಷ್ಟ್ರಗಳಲ್ಲಿ ಮಾತ್ರ ನಾಗರಿಕರ ರಾಜಕೀಯ ಹಕ್ಕು ಬಾಧ್ಯತೆಗಳಿಗೆ ಮನ್ನಣೆ ದೊರೆಯುತ್ತದೆ.

ಸಮಾಜದಲ್ಲಿ ಪ್ರಚಲಿತವಿರುವ ಜನಪ್ರಿಯ ರೂಢಿಗಳು, ರಾಜ್ಯಘಟನೆಯಲ್ಲಿ ಬಂದ ಉಲ್ಲೇಖಗಳು ಮತ್ತು ನ್ಯಾಯಾಲಯಗಳು ಕೊಟ್ಟ ತೀರ್ಪುಗಳಲ್ಲಿ ನಾಗರಿಕ ಹಕ್ಕು ಬಾಧ್ಯತೆಗಳ ಶಾಸನಗಳು ಅಡಕವಾಗಿರುತ್ತವೆ. ಅಂತಿಮದಲ್ಲಿ ಈ ಶಾಸನಗಳು ಜನತೆಯ ವಿವೇಕ, ನ್ಯಾಯಾನ್ಯಾಯ ವಿಚಾರ, ಸಮತಾಭಾವನೆ ,ಸಹನಶೀಲತೆ, ಸತ್ಯಾನ್ವೇಷಣೆ ಮತ್ತು ಸ್ವಾತಂತ್ರ್ಯಪ್ರಿಯತೆಗಳಿಂದಲೇ ಪುಷ್ಟಿಯನ್ನು ಪಡೆಯುತ್ತವೆ.

೫. ನಾಗರಿಕರ ಹಕ್ಕುಗಳು.

ಎಲ್ಲ ನಾಗರಿಕರ ವ್ಯಕ್ತಿತ್ವ ಪೋಷಣೆಗೆ ಅವಶ್ಯವೆಂದು ಸಾರ್ವಜನಿಕ ಅಭಿಪ್ರಾಯವು ಒಪ್ಪಿದ ಅವಕಾಶಗಳೇ ನಾಗರಿಕರ ಹಕ್ಕುಗಳೆಂದು ಹೇಳಬಹುದು. ಒಂದು ಯುಗದ ಜನಾಭಿಪ್ರಾಯವು ಒಪ್ಪಿದ ಅವಕಾಶಗಳು

ಇನ್ನೊಂದು ಯುಗದ ಜನಾಭಿಪ್ರಾಯಕ್ಕೆ ಸಂಕುಚಿತವಾಗಿ ಕಂಡು ಬರಬಹುದು. ಗ್ರೀಸ ದೇಶದಲ್ಲಿ ಎರಡೂವರೆ ಸಾವಿರ ವರ್ಷಗಳ ಹಿಂದೆ ಪ್ರಚಲಿತವಿದ್ದ ನಾಗರಿಕ ಹಕ್ಕುಗಳಿಗೆ ಆ ದೇಶದ ಬಹುಸಂಖ್ಯಾಕ ಗುಲಾಮರು ಹೊರತಾಗಿದ್ದರು. ಆ ಬಗೆಯ ನಾಗರಿಕ ಹಕ್ಕುಗಳನ್ನು ಇಂದಿನ ಯುಗವು ತಿರಸ್ಕಾರದಿಂದ ಕಾಣುವುದು. ಇಂದಿನ ಜನಜೀವನಕ್ಕೆ ಅನುಗುಣವಾದ ವ್ಯಕ್ತಿತ್ವ ಪೋಷಣೆಯ ಅವಕಾಶಗಳನ್ನು ಇಂದಿನ ಜನರೇ ನಿರ್ಧರಿಸಬಲ್ಲರು. ಇಂದಿನ ಹಲವು ಸ್ವಾತಂತ್ರ್ಯಪ್ರಿಯ ಜನಾಂಗಗಳು ಒಪ್ಪಿದ ಕೆಲವು ನಾಗರಿಕ ಹಕ್ಕುಗಳನ್ನು ಮಾತ್ರ ಇಲ್ಲಿ ಪರಿಶೀಲಿಸಲಾಗುವುದು:—

(೧) ಪ್ರತಿಯೊಬ್ಬ ನಾಗರಿಕನಿಗೂ ಚಲನವಲನ ಸ್ವಾತಂತ್ರ್ಯ ಅವಶ್ಯ. ಯಾವುದಾದರೊಂದು ಅಪರಾಧ ಮಾಡಿದುದು ನ್ಯಾಯಾಲಯದಲ್ಲಿ ಸಿದ್ಧವಾಗುವ ವರೆಗೆ ಯಾವ ಮನುಷ್ಯನನ್ನೂ ಸರಕಾರವು ಬಂಧಿಸಕೂಡದು. ಒಂದು ವೇಳೆ ಯಾವನೊಬ್ಬನು ಅಪರಾಧ ಮಾಡಿರಬಹುದು ಇಲ್ಲವೆ ಮುಂದೆ ಅಪರಾಧ ಮಾಡಬಹುದು ಎಂಬ ಸಂಶಯ ಮಾತ್ರದಿಂದ ಸರಕಾರವು ನಾಗರಿಕರನ್ನು ಸ್ಥಾನಬದ್ಧರನ್ನಾಗಿ ಮಾಡತೊಡಗಿದರೆ, ಅಧಿಕಾರರೂಢವಾದ ರಾಜಕೀಯ ಪಕ್ಷದ ವಿರೋಧಿಗಳ ಜೀವಿತಕ್ಕೆ ಧಕ್ಕೆಯಾಗುವ ಸಂಭವವಿದೆ. ಜನತಾ ರಾಜ್ಯದಲ್ಲಿ ಸರಕಾರವನ್ನು ಶಾಂತಯುತವಾಗಿ ವಿರೋಧಿಸುವ ಜನರಿಗೂ ಬಾಳಿಬದುಕುವ ಹಕ್ಕು ಇದೆ. ಅವರ ಕೃತಿಗಳು ಶಾಂತಯುತವಾಗಿವೆಯೋ ಇಲ್ಲವೆ ಶಾಂತತಾಭಂಗ ಮಾಡುವಂತಹವಾಗಿವೆಯೋ ಎಂಬುದನ್ನು ನ್ಯಾಯಾಲಯಗಳೇ ನಿರ್ಣಯಿಸಬೇಕಲ್ಲದೆ ಸರಕಾರವು ನಿರ್ಣಯಿಸತಕ್ಕದ್ದಲ್ಲ. ಅಂದರೆ ಮಾತ್ರ ರಾಜ್ಯದಲ್ಲಿ ನಿಷ್ಪಕ್ಷಪಾತ ವಾತಾವರಣವು ತಲೆದೋರಿ ಎಲ್ಲರಿಗೂ ನಿರ್ಭಯದಿಂದಲೂ ಶಾಂತಯುತವಾಗಿಯೂ ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಅವಕಾಶ ದೊರೆಯುವುದು. ಇಲ್ಲವಾದರೆ ಸರಕಾರದ ವಿರೋಧಿಗಳು ಗುಪ್ತ ವಿಘಾತಕ ಚಟುವಟಿಕೆಗಳಲ್ಲಿ ತೊಡಗಿ ರಾಜಕೀಯ ಬಂಡಾಯ ಪ್ರಚೋದಕರಾಗಬಹುದು. ಹೀಗೆ ರಾಜಕೀಯ ಬಂಡಾಯಕ್ಕೆ ಆಸ್ಪದಕೊಡುವುದು ಜನತಾರಾಜ್ಯದ ರೀತಿಯಲ್ಲ.

ಇಂತಹ ಅನಿರ್ಬಂಧ ಚಲನವಲನ ಸ್ವಾತಂತ್ರ್ಯವನ್ನು ಯುದ್ಧಕಲದಲ್ಲಿ ಇಲ್ಲವೆ ರಾಜ್ಯಕ್ಕೆ ಮರಣಾಂತಿಕ ಗಂಡಾಂತರದ ಸಮಯದಲ್ಲಿ

ಪರಿಮಿತಗೊಳಿಸುವ ಆಗತ್ಯವಿದೆ. ಜನರ ಹಕ್ಕುಗಳು ಉಳಿಯಬೇಕಾದರೆ ಜನತಾರಾಜ್ಯವು ಬಾಳಿ ಬೆಳಗಬೇಕು. ಕೆಲವು ಒಳಸಂಚುಗಾರ ನಾಗರಿಕರ ಚಲನವಲನ ಸ್ವಾತಂತ್ರ್ಯವು ಇಡೀ ರಾಜ್ಯದ ಅಸ್ತಿತ್ವಕ್ಕೆ ಗಂಡಾಂತರ ದಾಯಕವಾಗುವ ಸ್ಥಿತಿಯಿರುವಾಗ ಸರಕಾರಕ್ಕೆ ಸಂಶಯಯುಕ್ತ ವ್ಯಕ್ತಿಗಳನ್ನು ಸ್ಥಾನಬದ್ಧತೆಯಲ್ಲಿಡುವ ಅಧಿಕಾರವಿರಲೇ ಬೇಕು. ಈ ಅಧಿಕಾರವನ್ನು ರಾಜ್ಯದ ಶಾಸನಸಭೆಯು ಸರಕಾರಕ್ಕೆ ಕೊಡಬೇಕು. ಗಂಡಾಂತರಸ್ಥಿತಿಯು ದೂರವಾಗುತ್ತಲೆ ಪುನಃ ಆ ವಿಶೇಷ ಅಧಿಕಾರವನ್ನು ಶಾಸನಸಭೆಯು ಮುಕ್ತಾಯಗೊಳಿಸಬೇಕು. ಇದರಿಂದ ಜನತೆಯ ನ್ಯಾಯವಾದ ಚಲನವಲನ ಸ್ವಾತಂತ್ರಕ್ಕೆ ಚ್ಯುತಿಯುಂಟಾಗುವದಿಲ್ಲ.

(೩) ಚಲನವಲನ ಸ್ವಾತಂತ್ರದಷ್ಟೇ ಭಾಷಣ ಸ್ವಾತಂತ್ರವೂ ಅವಶ್ಯವಿದೆ. ಪ್ರತಿಯೊಬ್ಬನಿಗೂ ತನ್ನ ಅಭಿಪ್ರಾಯವನ್ನು ನಿರ್ಭಯದಿಂದ ವ್ಯಕ್ತಮಾಡಲು ಅವಕಾಶವಿರಬೇಕು. ಈ ಅವಕಾಶವಿರದಿದ್ದರೆ ನಾಗರಿಕರ ವ್ಯಕ್ತಿತ್ವದ ಬೆಳವಣಿಗೆಗೆ ತಡೆಯುಂಟಾಗುವುದು. ಜನತಾರಾಜ್ಯವು ನಾಗರಿಕರ ಎಲ್ಲ ಅಭಿಪ್ರಾಯಗಳಿಗೂ ಕಿವಿಗೊಡಬೇಕು. ಅದರಲ್ಲಿಯೂ ಸರಕಾರದ ಧೋರಣೆಯನ್ನು ವಿರೋಧಿಸುವವರ ಅಭಿಪ್ರಾಯಕ್ಕೆ ಪೂರ್ಣ ಅವಕಾಶವಿರಬೇಕು. ರಾಜ್ಯದ ವಿರುದ್ಧ ಬಂಡಾಯ ಪ್ರಚೋದಿಸುವಂತಹ ಅಭಿಪ್ರಾಯವನ್ನು ಸಹ ಸರಕಾರವು ಸಹನೆಯಿಂದ ಎದುರಿಸಬೇಕು. ಇದರಿಂದ ಹೇಳಿಕೊಳ್ಳುವಂತಹ ಗಂಡಾತರವೇನೂ ಇಲ್ಲ. ರಾಜ್ಯದಲ್ಲಿ ತೀವ್ರ ಅಸಂತೋಷಗಳು ಬೆಳೆಯಲು ಆಸ್ಪದವಿಲ್ಲದ ಸ್ಥಿತಿಗತಿಗಳಿದ್ದರೆ ಬಂಡಾಯ ಪ್ರಚೋದಕ ಅಭಿಪ್ರಾಯಗಳಿಗೆ ಜನತೆಯ ಬೆಂಬಲ ದೊರೆಯಲಾರದು. ಒಂದುವೇಳೆ ರಾಜ್ಯದ ಸ್ಥಿತಿಗತಿಗಳೇ ಕಲುಷಿತವಾಗಿದ್ದರೆ ವಿರೋಧಾಭಿಪ್ರಾಯಗಳನ್ನು ತಡೆಯುವುದು ದುಸ್ಸಾಧ್ಯ. ಅಂದಮೇಲೆ ಯಾವಾಗಲೂ ಎಲ್ಲಬಗೆಯ ಅಭಿಪ್ರಾಯ ವ್ಯಕ್ತಮಾಡಲು ಎಲ್ಲರಿಗೂ ಅವಕಾಶವಿರುವುದು ಒಳಿತು. ಅಭಿಪ್ರಾಯಗಳ ತಾಕಲಾಟದಲ್ಲಿ ಸದಭಿಪ್ರಾಯಗಳು ಜನರಿಗೆ ಒಪ್ಪಿತವಾಗಿ, ದುರಭಿಪ್ರಾಯಗಳು ತಿರಸ್ಕರಿಸಲ್ಪಡುವವೆಂಬ ಭರವಸೆಯ ಮೇಲೆಯೇ ಜನತಾರಾಜ್ಯವು ನಿಂತಿದೆ.

ಭಾಷಣ ಸ್ವಾತಂತ್ರ್ಯಕ್ಕೂ ಕೆಲವು ಇತಿಮಿತಿಗಳಿವೆ. ಈ ಇತಿಮಿತಿಗಳು ಮನುಷ್ಯನ ಗೌರವವನ್ನು ಸಂರಕ್ಷಿಸುತ್ತವೆ. ನಿಷ್ಕಾರಣವಾಗಿ ಇತರರ

ಮಾನಹಾನಿ ಮಾಡುವಂತಹ ಇಲ್ಲವೆ ಇತರರ ನಾಚಿಕೆಯನ್ನು ಕೆರಳಿಸು ವಂತಹ ಅಭಿಪ್ರಾಯಗಳನ್ನು ನಾಗರಿಕ ಜನಾಂಗಗಳು ಯಾವಾಗಲೂ ದಂಡಿಸುತ್ತ ಬಂದಿವೆ. ಭಾಷಣ ಸ್ವಾತಂತ್ರ್ಯದ ಹೆಸರಿನಲ್ಲಿ ಇಂತಹ ದುರಭಿಪ್ರಾಯಗಳನ್ನು ದಂಡಿಸದೆ ಹೋದರೆ ಜನಜೀವನವು ಕೆಲವೇ ದಿನಗಳಲ್ಲಿ ಅಸಹ್ಯಮಯವಾಗುವುದರಲ್ಲಿ ಸಂದೇಹವಿಲ್ಲ.

ಭಾಷಣ ಸ್ವಾತಂತ್ರ್ಯದ ಜೊತೆಗೆ ಸಭೆಗೂಡುವ ಸ್ವಾತಂತ್ರ್ಯ, ರಂಗಭೂಮಿಯ ಸ್ವಾತಂತ್ರ್ಯ, ವೃತ್ತಪತ್ರಿಕೆಯ ಸ್ವಾತಂತ್ರ್ಯ, ಸುದ್ದಿ ವಿತರಣ ಸ್ವಾತಂತ್ರ್ಯ ಮತ್ತು ಚಲಚಿತ್ರ ಸ್ವಾತಂತ್ರ್ಯಗಳೂ ಸೇರಿವೆ. ಈ ಸ್ವಾತಂತ್ರ್ಯಗಳ ಪೂರ್ಣ ಲಾಭ ಪಡೆಯಲು ಹಣಕಾಸಿನ ಬೆಂಬಲ ಬೇಕು. ಇಂದಿನ ಕಾಲದ ಸಂಪತ್ಸಾಮ್ರಾಟರು ಈ ಸಂಸ್ಥೆಗಳ ಮೇಲೆ ತಮ್ಮ ನಿರಂಕುಶ ಪ್ರಭುತ್ವ ಸ್ಥಾಪಿಸಲು ಪ್ರಯತ್ನಿಸುತ್ತಿದ್ದಾರೆ. ಸರ್ವಾಧಿಕಾರಿ ರಾಜ್ಯಗಳಲ್ಲಿಯಂತೂ ಇವೆಲ್ಲವುಗಳ ಮೇಲೂ ಸರಕಾರದ ಪ್ರಭುತ್ವವಿರುತ್ತದೆ. ಹೀಗೆ ಒಂದು ವಿಶಿಷ್ಟ ವರ್ಗದ ಪ್ರಭುತ್ವದ ಕೆಳಗೆ ಇಲ್ಲವೆ ಸರಕಾರದ ಪ್ರಭುತ್ವದ ಕೆಳಗೆ ಸಿಕ್ಕ ಸಭಾಭವನಗಳೂ, ಚಲಚಿತ್ರ ಮಂದಿರಗಳೂ, ವೃತ್ತಪತ್ರಗಳೂ, ಸುದ್ದಿ ಸಂಸ್ಥೆಗಳೂ ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಪ್ರಬಲವಾದ ಆತಂಕಗಳಾಗಿವೆ. ಆದುದರಿಂದ ಭಾಷಣ ಸ್ವಾತಂತ್ರ್ಯವು ನಿಜವೆನಿಸಬೇಕಾದರೆ ಈ ಎಲ್ಲ ಸೌಕರ್ಯಗಳು ಎಲ್ಲ ನಾಗರಿಕರಿಗೂ ಲಭ್ಯವಿರುವಂತೆ ಮಾಡುವುದ ಗತ್ಯ. ಸಹಕಾರೀ ತತ್ವದ ಮೇಲೆ ರಚಿತವಾದ ವಿಕೇಂದ್ರೀಕೃತ ಆರ್ಥಿಕ ವ್ಯವಸ್ಥೆಯು ಮಾತ್ರ ಈ ಆಗತ್ಯವನ್ನು ಪೂರೈಸಬಹುದೆಂದು ಕೆಲವರ ಅಭಿಮತವಿದೆ.

( ೩ ) ಮನುಷ್ಯನು ಸಂಘಜೀವಿ. ಅವನು ತನ್ನ ವೈವಿಧ್ಯಮಯ ಜೀವನದ ತೃಪ್ತಿಗಾಗಿ ವಿವಿಧ ಸಂಘ ಸಂಸ್ಥೆಗಳನ್ನು ನಿರ್ಮಿಸುತ್ತಾನೆ. ಅವನಿಗೆ ಕಲೋಪಾಸಕ, ವ್ಯಾವಸಾಯಿಕ, ವೈಜ್ಞಾನಿಕ, ಆರ್ಥಿಕ, ರಾಜಕೀಯ ಮೊದಲಾದ ಸಂಸ್ಥೆಗಳು ಬೇಕು. ಆದುದರಿಂದ ಜನತಾ ರಾಜ್ಯವು ನಾಗರಿಕನಿಗೆ ತನ್ನ ಮನಸ್ಸಿಗೆ ಬಂದ ಸಂಘ ಸಂಸ್ಥೆಗಳಲ್ಲಿ ಸೇರಲು ಆಸ್ಪದ ಕೊಡಬೇಕು. ಒಂದು ಸಂಘದ ಉದ್ದೇಶಗಳು ವಿಘಾತಕವಾಗಿರಬಹುದು. ಆದರೆ ಆ ವಿಘಾತಕ ಉದ್ದೇಶಗಳು ವಿಘಾತಕ ಕೃತಿಗಳ ಮೂಲಕ ಹೊರಬೀಳುವವರೆಗೆ ಸರಕಾರವು ಸಹನ ತಾಳುವುದು ಒಳಿತು. ಒಂದು ವೇಳೆ ಒಂದು

ಸಂಘದ ಚಟುವಟಿಕೆಗಳು ವಿಘಾತಕವಾದುವೆಂದು ನ್ಯಾಯಾಲಯಗಳು ತೀರ್ಮಾನವಿತ್ತರೆ ಆಗ ಆ ಸಂಘವನ್ನು ಸರಕಾರವು ನಿರ್ಬಂಧಿಸ ಬಹುದು. ಹೀಗೆ ಮಾಡುವುದು ನಾಗರಿಕನ ವಿತ್ತ ಜೀವಿತಗಳ ಸಂರಕ್ಷಣೆಗೆ ಅವಶ್ಯವೂ ಇದೆ. ಯುದ್ಧ ಕಾಲದಲ್ಲಿ ಮತ್ತು ರಾಜ್ಯಕ್ಕೆ ಗಂಡಾಂತರವೊದ ಗಿದ ಸಮಯದಲ್ಲಿ ವ್ಯಕ್ತಿಯ ಚಲನವಲನ ಸ್ವಾತಂತ್ರ್ಯಕ್ಕಿರುವ ಪರಿಮಿತಿಯು ಸಂಘ ಸ್ವಾತಂತ್ರ್ಯಕ್ಕೂ ಅನ್ವಯಿಸುತ್ತದೆ.

( ೪ ) ಇಂದಿನ ರಾಷ್ಟ್ರೀಯ ರಾಜ್ಯಗಳ ನಾಗರಿಕರು ವಿವಿಧ ಧರ್ಮ ಗಳ ಅನುಯಾಯಿಗಳಾಗಿರುತ್ತಾರೆ. ವಿವಿಧ ಧಾರ್ಮಿಕ ನಂಬಿಕೆಗಳನ್ನು ಸಮನ್ವಯಗೊಳಿಸಿ ಸರ್ವಸಮ್ಮತ ಒಂದೇ ನಂಬಿಕೆಯನ್ನು ಪ್ರಸ್ಥಾಪಿಸುವ ಪ್ರಯತ್ನಗಳೆಲ್ಲವೂ ನಿಷ್ಫಲ. ಅಕಬರ ಬಾದಶಹನು ದೀನ್ ಇಲಾಹಿ ಧರ್ಮ ಸ್ಥಾಪಿಸಲು ಪ್ರಯತ್ನಿಸಿ ಅಯಶಸ್ವಿಯಾದುದು ಇತಿಹಾಸ ಪ್ರಸಿದ್ಧವಿದೆ. ಆದುದರಿಂದ ಇಂದಿನ ಜನತಾರಾಜ್ಯಗಳಲ್ಲಿ ಪ್ರತಿಯೊಬ್ಬ ನಾಗರಿಕನಿಗೂ ತನ್ನ ಧಾರ್ಮಿಕ ನಂಬಿಕೆಯಂತೆ ಪೂಜೆ ಪುನಸ್ಕಾರ ಮಾಡಲು ಅವಕಾಶ ಕೊಡಲಾಗಿದೆ. ಆದರೆ ಧರ್ಮದ ಹೆಸರಿನಲ್ಲಿ ಸತಿಹೋಗುವಂತಹ ಕ್ರೂರ ಆಚರಣೆ, ದೇವದಾಸಿಯರನ್ನು ಬಿಡುವ ಅವಮಾನಕರ ಸಾಂಪ್ರದಾಯ ಮೊದಲಾದವುಗಳನ್ನು ಅನುಸರಿಸಲು ಆಸ್ಪದ ಕೊಡಲಾಗುವುದಿಲ್ಲ. ಇಂದಿನ ನಾಗರಿಕ ನೀತಿಯು ನಿರುಪದ್ರವ ಧಾರ್ಮಿಕ ಆಚರಣೆಗಳಿಗೆ ಮಾತ್ರ ಯಾವ ಆತಂಕವುಂಟುಮಾಡುವುದಿಲ್ಲ.

(೫) ಆಸ್ತಿಯನ್ನು ಉಪಭೋಗಿಸುವ ಹಕ್ಕು, ವ್ಯವಹಾರದಲ್ಲಿ ಮೇಲಾಟವಾಡುವ ಹಕ್ಕು, ಪರಸ್ಪರ ಒಡಂಬಡಿಕೆ ಮಾಡಿಕೊಳ್ಳುವ ಹಕ್ಕು, ಮತ್ತು ಉದ್ಯೋಗ ಆಯ್ದುಕೊಳ್ಳುವ ಹಕ್ಕುಗಳು ಇಂದಿನ ರಾಜ್ಯಗಳಲ್ಲಿ ಎಲ್ಲ ನಾಗರಿಕರಿಗೆ ದೊರೆತಿವೆ. ಆದರೂ ಸರಕಾರವು ಸಾರ್ವಜನಿಕ ಸುರಕ್ಷಿತತೆ, ಆರೋಗ್ಯ, ನೀತಿ ಮತ್ತು ಹಿತಗಳ ದೃಷ್ಟಿಯಿಂದ ಈ ಹಕ್ಕುಗಳ ಮೇಲೆ ನಿಯಂತ್ರಣ ಹಾಕಬಹುದು. ಯಾವ ನಿಯಂತ್ರಣವು ಸಾರ್ವಜನಿಕ ಸುರ ಕ್ಷಿತತೆ, ಆರೋಗ್ಯ, ನೀತಿ ಮತ್ತು ಹಿತಗಳ ದೃಷ್ಟಿಯಿಂದ ಅವಶ್ಯಕ ಇಲ್ಲವೆ ಅನವಶ್ಯಕವೆಂಬುದನ್ನು ನ್ಯಾಯಾಲಯಗಳು ನಿರ್ಧರಿಸಿದರೆ ಒಳಿತು.

( ೬ ) ನಾಗರಿಕನ ಮನೆ ಮತ್ತು ಪತ್ರವ್ಯವಹಾರಗಳು ಪವಿತ್ರವಾದ ವುಗಳು. ಸರಕಾರದ ಅಧಿಕಾರಿಗಳು ನಾಗರಿಕನ ಮನೆಯಲ್ಲಿ ನಿಷ್ಕಾರಣ

ವಾಗಿ ಇಲ್ಲದ ನೆವ ಮುಂದೆ ಮಾಡಿ ಪ್ರವೇಶಿಸುವುದಾದರೆ ಕುಟುಂಬದ ನೆಮ್ಮದಿಯೇ ಹಾಳಾಗಬಹುದು. ಇದಲ್ಲದೆ ಪತ್ರವ್ಯವಹಾರದ ಗೌಪ್ಯವನ್ನು ಸರಕಾರೀ ಅಧಿಕಾರಿಗಳು ಉಲ್ಲಂಘಿಸಿದರೆ ನಾಗರಿಕನ ಮಾನಸಿಕ ಶಾಂತಿಯು ಹಾಳಾಗಬಹುದು. ಆದುದರಿಂದ ನಾಗರಿಕನಿಗೆ ಮನೆಯ ಪಾವಿತ್ರ್ಯ ಕಾಯ್ದುಕೊಳ್ಳುವ ಹಕ್ಕು ಮತ್ತು ಪತ್ರ ವ್ಯವಹಾರದ ಗೌಪ್ಯ ಕಾಯ್ದುಕೊಳ್ಳುವ ಹಕ್ಕುಗಳು ಕೊಡಲ್ಪಟ್ಟಿವೆ.

( ೭ ) ಇನ್ನು ಫೌಜದಾರೀ ಸ್ವರೂಪದ ಅಪಾದನೆಗೆ ಗುರಿಯಾದ ನಾಗರಿಕನಿಗೆ ಕೆಲವು ಹಕ್ಕುಗಳಿವೆ. ಆರೋಪಿಯ ಅಪರಾಧವು ಸಿದ್ಧವಾಗುವವರೆಗೆ ಆವನನ್ನು ನಿರಪರಾಧಿಯೆಂದು ಗಣಿಸಬೇಕು. ವಿಚಾರಣೆಗೆ ಗುರಿಪಡಿಸುವ ಮೊದಲು ಆರೋಪಿಗೆ ಆಪಾದನೆಯ ಪತ್ರವನ್ನು ಸಲ್ಲಿಸಬೇಕು. ಆರೋಪಿಯನ್ನು ಸಮರ್ಥಿಸಲು ವಕೀಲನು ಇರಬೇಕು. ವಿಚಾರಣೆಯನ್ನು ಬಹಿರಂಗವಾಗಿ ನಡೆಸಬೇಕು. ವಿಚಾರಣೆಯ ಕಾಲಕ್ಕೆ ಆರೋಪಿಯನ್ನು ತನ್ನ ಅಪರಾಧವೊಪ್ಪುವಂತೆ ಒತ್ತಾಯಪಡಿಸಕೂಡದು. ಒಂದು ವೇಳೆ ಅಪರಾಧ ಮಾಡಿದುದು ಸಂಶಯಾಸ್ಪದವಿದ್ದರೆ, ಆರೋಪಿಗೆ ಅದರ ಲಾಭ ದೊರೆಯಬೇಕು. ಈ ನಿಯಮಗಳು ನಾಗರಿಕನ ವೈಯಕ್ತಿಕ ಸ್ವಾತಂತ್ರ್ಯಕ್ಕೆ ಬಹಳ ಸಹಾಯಕಾರಿಯಾಗಿವೆ.

( ೮ ) ಸಾರ್ವಜನಿಕ ಸ್ಥಳಗಳನ್ನು ಶಾಂತಯುತವಾಗಿ ಪ್ರವೇಶಿಸುವ ಹಕ್ಕು, ಸಾರ್ವಜನಿಕ ನೌಕರಿಗಳಿಗಾಗಿ ಸ್ಪರ್ಧಿಸುವ ಹಕ್ಕು ಮೊದಲಾದವು ಮನ್ನಿಸಲ್ಪಟ್ಟಿವೆ. ಈ ವಿಷಯದಲ್ಲಿ ವ್ಯಕ್ತಿಯ ಜಾತಿ, ಧರ್ಮ, ಜನಾಂಗ, ಲಿಂಗ, ಪಂಥ ಮೊದಲಾದ ಯಾವುದೇ ಬಗೆಯ ಪಕ್ಷಪಾತ ಎಣಿಸಲಾಗುವುದಿಲ್ಲ.

( ೯ ) ಈ ನಾಗರಿಕ ಹಕ್ಕುಗಳ ಜೊತೆಗೆ ಸಾಮಾನ್ಯವಾಗಿ ಎಲ್ಲ ಜನತಾ ರಾಜ್ಯಗಳಲ್ಲಿ ನಾಗರಿಕರಿಗೆ ಮತದಾನ ಮಾಡುವ, ಚುನಾವಣೆಯಲ್ಲಿ ಸ್ಪರ್ಧಿಸುವ, ಶಾಸನ ಸಭೆಯ ಸದಸ್ಯನಾಗುವ, ಇಲ್ಲವೆ ಕಾರ್ಯಾಂಗದ ಅಧಿಕಾರಿಯಾಗುವ ರಾಜಕೀಯ ಹಕ್ಕುಗಳು ಕೊಡಲ್ಪಟ್ಟಿವೆ. ಆದರೆ ಈ ಹಕ್ಕುಗಳಿಗೆ ಅಲ್ಪವಯಸ್ಕರು, ಹುಚ್ಚರು, ಚುನಾವಣೆಯ ಅಪರಾಧಿಗಳು, ದಿವಾಳಿ ಖೋರರು, ದೇಶದ್ರೋಹಿಗಳು ಮೊದಲಾದವರು ಅರ್ಹರಾಗಿರುವುದಿಲ್ಲ.

ಸಾರ್ವಜನಿಕ ಹಿತದ ದೃಷ್ಟಿಯಿಂದ ಇಂಥವರಿಗೆ ರಾಜಕೀಯ ಹಕ್ಕುಗಳು ಕೊಡಲ್ಪಡುವದಿಲ್ಲ. ಆದರೆ ಇವುಗಳಿಗೆ ಅರ್ಹತೆ ಪಡೆಯಬೇಕಾದರೆ ನಾಗರಿಕನು ವಿದ್ಯಾವಂತನಾಗಿರಬೇಕೆಂದಾಗಲಿ ಇಲ್ಲವೆ ಒಂದು ವಿಶಿಷ್ಟಜಾತಿ, ಪಂಥ, ಧರ್ಮ, ಲಿಂಗ ಜನಾಂಗಕ್ಕೆ ಸೇರಿದವನಾಗಿರಬೇಕೆಂದಾಗಲಿ ನಿಯಮವಿರುವದಿಲ್ಲ.

(೧೦) ನಾಗರಿಕರ ಹಕ್ಕುಗಳಿಗೆ ಧಕ್ಕೆತರುವವರನ್ನು ನಿಯಂತ್ರಿಸಲು ರಾಜ್ಯದ ನೆರವು ಬೇಕು. ಆದುದರಿಂದ ನಾಗರಿಕರಿಗೆ ತಮ್ಮ ಹಕ್ಕುಗಳನ್ನು ಕಾಯ್ದುಕೊಳ್ಳಲು ರಾಜ್ಯದ ನ್ಯಾಯಾಲಯಗಳ ನೆರವು ಪಡೆಯುವ ಅವಕಾಶವಿರಬೇಕು. ನ್ಯಾಯಾಲಯಗಳು ಈ ಸಂಬಂಧದಲ್ಲಿ ಎಲ್ಲರೂ ಸಮಾನಸ್ಕಂಧರೆಂದು ತಿಳಿಯಬೇಕು. ಹಾಗೆ ಮಾಡಲು ಅವುಗಳು ಸ್ವತಂತ್ರವಿರಬೇಕು.

ಈ ಬಗೆಯ ಶಾಸನೀಯ ಹಕ್ಕುಗಳ ಜೊತೆಗೆ ಇತರ ಆರ್ಥಿಕ ಸ್ವರೂಪದ ಹಕ್ಕುಗಳನ್ನು ಜನರು ಅಪೇಕ್ಷಿಸುತ್ತಿದ್ದಾರೆ. ಅವು ಇನ್ನೂ ತಾತ್ವಿಕ ಮಟ್ಟದಲ್ಲಿವೆ. ಅವುಗಳಲ್ಲಿ ಉತ್ತಮ ಶಿಕ್ಷಣ ಪಡೆಯುವ ಹಕ್ಕು, ದುಡಿತದ ಹಕ್ಕು, ದುಡಿತಕ್ಕೆ ತಕ್ಕ ಪ್ರತಿಫಲದ ಹಕ್ಕು, ಇಳಿವಯಸ್ಸಿನ ವಿಮೆಯ ಹಕ್ಕು, ಬೇನೆ ಬೇಸರಿಕೆಗಳಾದಾಗ ಔಷಧೋಪಚಾರದ ಹಕ್ಕು ಮೊದಲಾದವು ಮುಖ್ಯವಾಗಿವೆ. ಆದರೆ ಯಾವ ರಾಜ್ಯವೂ ಇದು ವರೆಗೆ ಈ ಹಕ್ಕುಗಳನ್ನು ಸಂಪೂರ್ಣವಾಗಿ ಶಾಸನ ರೂಪಕ್ಕೆ ತಂದಿಲ್ಲ. ಇವು ಇನ್ನೂ ಸಮಾಜ ಸುಧಾರಕರ ಕನಸುಗಳಾಗಿವೆ.

**೬. ನಾಗರಿಕರ ಕರ್ತವ್ಯಗಳು.**

ಪ್ರತಿಯೊಂದು ಹಕ್ಕಿನ ಜೊತೆಗೆ ನಾಗರಿಕನು ನಿರ್ವಹಿಸಬೇಕಾದ ಕರ್ತವ್ಯವೂ ಇರುತ್ತದೆ. ಹಕ್ಕುಗಳನ್ನು ಉಪಭೋಗಿಸಬಯಸುವ ನಾಗರಿಕನು ಇತರ ನಾಗರಿಕರ ಸರಿಸಮಾನ ಹಕ್ಕುಗಳನ್ನು ಮನ್ನಿಸುವ ಅಗತ್ಯವೂ ಇದೆ. ಇಲ್ಲಿ ವ್ಹೊಲ್ಟೆಯರ್ ಎಂಬ ಫ್ರೆಂಚ ತತ್ವಜ್ಞಾನಿಯು ಹೇಳಿದ ಮಾತನ್ನು ನೆನಪಿಗೆ ತಂದುಕೊಳ್ಳುವುದು ಉಚಿತ- "ನಾನು ನನ್ನ ಉಸಿರಿರುವ ವರೆಗೂ ನಿನ್ನ ಅಭಿಪ್ರಾಯವನ್ನು ವಿರೋಧಿಸುತ್ತೇನೆ; ಆದರೆ ನೀನು ನಿನ್ನ ಅಭಿಪ್ರಾಯ ವ್ಯಕ್ತಪಡಿಸುವ ಹಕ್ಕನ್ನು ಕಾಪಾಡಲು ನಾನು ನನ್ನ ಜೀವ

ಸಹ ಕೊಡಲು ಸಿದ್ಧನಿದ್ದೇನೆ." ಇಂತಹ ಉದಾತ್ತ ಕರ್ತವ್ಯಶೀಲ ನಾಗರಿಕರಿದ್ದರೆ ಮಾತ್ರ ಜನರು ಬಹುಕಾಲ ನಾಗರಿಕ ಹಕ್ಕುಗಳನ್ನು ಉಪಭೋಗಿಸಬಲ್ಲರು.

ರಾಜ್ಯದ ಹಿತದ ಸಲುವಾಗಿ ನಾಗರಿಕರು ನಿರ್ವಹಿಸಬೇಕಾದ ಕೆಲವು ಕರ್ತವ್ಯಗಳಿವೆ. ಗಂಡಾಂತರ ಸಮಯದಲ್ಲಿ ರಾಜ್ಯದ ಸಂರಕ್ಷಣೆಗಾಗಿ ಹೋರಾಡುವ, ರಾಜ್ಯದ ಶಾಂತತೆಗಾಗಿ ಕಾಯ್ದೆಗಳನ್ನು ಪಾಲಿಸುವ, ರಾಜ್ಯದ ಆಡಳಿತದ ವೆಚ್ಚಕ್ಕಾಗಿ ಕಂದಾಯವನ್ನು ಕೊಡುವ, ನ್ಯಾಯದಾಡಳಿತೆಯ ಸೌಲಭ್ಯಕ್ಕಾಗಿ ಜ್ಯೂರಿಯಾಗಿ ಕಾರ್ಯಮಾಡುವ, ಚುನಾವಣೆಗಳನ್ನು ಸಾಂಗಗೊಳಿಸುವ ಸಲುವಾಗಿ ಚುನಾವಣೆ ಅಧಿಕಾರಿಯಾಗುವ, ರಾಜ್ಯದ ಜನಗಣತಿಮಾಡಲು ಸರಕಾರಕ್ಕೆ ನೆರವಾಗುವ ಮೊದಲಾದ ಕರ್ತವ್ಯಗಳು ಮುಖ್ಯವಾಗಿವೆ. ಈ ಕರ್ತವ್ಯಗಳನ್ನು ನಾಗರಿಕರು ಸ್ವಸಂತೋಷದಿಂದ ಕೈಕೊಳ್ಳಬೇಕು. ಒಂದು ವೇಳೆ ಹಾಗೆ ಮಾಡಲು ಕಾಯ್ದೆಯ ನಿರ್ಬಂಧನೆಯಿದ್ದರೂ ಆ ಕಾಯ್ದೆಯು ಬಹುಮತದ ಒಪ್ಪಿಗೆಯಿಂದಲೇ ಮಾಡಲ್ಪಟ್ಟಿವೆಯೆಂಬುದನ್ನು ಮರೆಯಲಾಗದು. ಒಂದು ವೇಳೆ ತಮ್ಮ ಸರಕಾರವು ಆಕ್ರಮಣಶೀಲ ಯುದ್ಧದಲ್ಲಿ ತೊಡಗಿದ್ದರೆ, ಅನುಚಿತ ಕಾಯ್ದೆಯನ್ನು ಮಾಡಿದ್ದರೆ, ಭಾರವಾದ ತೆರಿಗೆಯನ್ನು ಹೇರಿದ್ದರೆ, ನಾಗರಿಕರು ಅವುಗಳ ವಿರುದ್ಧ ಶಾಂತಯುತವಾಗಿ ಬಹುಮತ ದೊರಕಿಸಲು ಪ್ರಯತ್ನಿಸಬಹುದು. ಹಾಗೆ ಮಾಡುವುದು ಕರ್ತವ್ಯ ಚ್ಯುತಿಯೆನಿಸುವುದಿಲ್ಲ.

ಸಾಮಾಜಿಕ ಹಿತದ ದೃಷ್ಟಿಯಿಂದ ನಾಗರಿಕನು ಪಾಲಿಸತಕ್ಕ ಹಲವು ಕರ್ತವ್ಯಗಳಿವೆ. ಅವನು ಪರರ ಮಾನಹಾನಿಯಾಗದಂತೆ ವರ್ತಿಸಬೇಕು; ಪರಧರ್ಮವನ್ನು ಸಹಾನುಭೂತಿಯಿಂದ ಕಾಣಬೇಕು; ಸಂಘ ಸಂಸ್ಥೆಗಳ ಶಿಸ್ತಿಗೆ ಒಳಪಟ್ಟು ನಿಸ್ವಾರ್ಥದಿಂದ ದುಡಿಯಬೇಕು; ಪರರ ಪತ್ರವ್ಯವಹಾರದ ಗೌಪ್ಯವನ್ನು ಮನ್ನಿಸಬೇಕು; ಸಾರ್ವಜನಿಕ ಸ್ಥಳಗಳಲ್ಲಿ ಸಭ್ಯತೆಯಿಂದ ವರ್ತಿಸಬೇಕು; ದುಡಿತವನ್ನು ಪ್ರೀತಿಸಬೇಕು; ಪರರ ಸುಲಿಗೆಯನ್ನು ಮಾಡದಿರಬೇಕು; ವ್ಯವಹಾರ ಉದ್ಯೋಗಗಳಲ್ಲಿ ಪ್ರಾಮಾಣಿಕನಾಗಿರಬೇಕು; ಸಾರ್ವಜನಿಕರ ಸುರಕ್ಷಿತತೆಗೆ ಭಂಗಬರದಂತೆ ವರ್ತಿಸಬೇಕು; ಜನರ ಆರೋಗ್ಯ ಕೆಡದಂತೆ ಜಾಗರೂಕನಾಗಿರಬೇಕು; ತನ್ನ ತನವನ್ನು ಕಳೆದುಕೊಳ್ಳದೆ ಸಮಾಜಸೇವೆ ಮಾಡುತ್ತಿರಬೇಕು; ಸಮಾಜದ ಒಳ್ಳೆಯ ಸಾಂಪ್ರದಾಯಗಳನ್ನು

ಗೌರವಿಸುತ್ತಿರಬೇಕು; ಸಮಾಜದ ಲೋಪದೋಷಗಳನ್ನು ವಿಧಾಯಕ ರೀತಿ ಯಿಂದ ತಿದ್ದಲು ಪ್ರಯತ್ನಿಸುತ್ತಿರಬೇಕು; ಎಲ್ಲರನ್ನೂ ಸಮದೃಷ್ಟಿಯಿಂದ ಕಾಣಬೇಕು. ಈ ಬಗೆಯಾದ ನೀತಿಪರ ಕರ್ತವ್ಯಗಳನ್ನು ನಾಗರಿಕರು ನಿರ್ವಹಿಸುತ್ತಿದ್ದರೆ ಸಮಾಜವು ಬೇಗನೆ ಪ್ರಗತಿಹೊಂದಬಲ್ಲದು.

ಕೌಟುಂಬಿಕ ಜೀವನದ ನೆಮ್ಮದಿಗಾಗಿ ನಾಗರಿಕರು ನಿರ್ವಹಿಸಬೇಕಾದ ಕರ್ತವ್ಯಗಳೂ ಉಂಟು. ಕುಟುಂಬ ಜೀವನವು ಹಲವು ಬಗೆಯ ಪ್ರೀತ್ಯಾ ದರಗಳಿಂದ ಕೂಡಿರುತ್ತದೆ. ಕುಟುಂಬ ಜೀವಿಯಾದ ನಾಗರಿಕನು ಹಿರಿಯು ರನ್ನು ಗೌರವಿಸಬೇಕು; ಕಿರಿಯರನ್ನು ಅಂತಃಕರುಣದಿಂದ ಕಾಣಬೇಕು;ಬಂಧು ಭಗಿನಿಯರನ್ನು ಸಮಾನಸ್ಕಂಧರೆಂದು ತಿಳಿಯುಬೇಕು; ತನ್ನ ಪಾಲಿನ ದುಡಿತ ವನ್ನು ಉತ್ಸಾಹದಿಂದ ಮಾಡಿ ಮುಗಿಸಬೇಕು; ಕುಟುಂಬದ ಇತರ ಜನರ ಸಂಗಡ ಪ್ರತಿಯೊಂದು ಕಾರ್ಯದಲ್ಲಿ ಸಹಕರಿಸಬೇಕು. ಮಕ್ಕಳ ಪಾಲ ನೆಯು ಪೋಷಣೆಯು ಕುಟುಂಬದ ಹಿರಿಯರ ಕರ್ತವ್ಯ. ಕುಟುಂಬಕ್ಕೆ ಸಂಬಂಧಪಟ್ಟ ಹೊಲಮನೆಗಳನ್ನು ಉದ್ಯೋಗ ವ್ಯವಹಾರಗಳನ್ನು ಸರಿಯಾಗಿ ಮಾಡಿಕೊಂಡು ಹೋಗುವುದು ಕುಟುಂಬದೊಳಗಿನ ಎಲ್ಲ ವಯಸ್ಕರ ಕರ್ತವ್ಯ. ಕುಟುಂಬದ ಆಸ್ತಿಪಾಸ್ತಿಗಳನ್ನು ಸಾಮೂಹಿಕವಾಗಿ ಉಪಭೋ ಗಿಸುವುದು ಎಲ್ಲರ ಕರ್ತವ್ಯ. ಮತ್ಸರ ಭಾವನೆಗಳನ್ನು ತಂದುಕೊಳ್ಳದೆ ಕುಟುಂಬದ ಹಿತಕ್ಕಾಗಿ ದುಡಿಯುವುದು ಎಲ್ಲರ ಕರ್ತವ್ಯ. ಹೀಗೆ ಕುಟುಂಬ ಜೀವಿಗಳು ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುತ್ತ ಹೋದರೆ ಕೌಟುಂಬಿಕ ಸೌಖ್ಯವು ವೃದ್ಧಿಹೊಂದಿ ಸಮಾಜದ ಸಾರ್ವತ್ರಿಕ ಕಲ್ಯಾಣಕ್ಕೂ ಕಾರಣವಾಗ ಬಲ್ಲದು.

ಕೆಲವು ರಾಜಕಾರಣಿಗಳು ನಾಗರಿಕರ ಹಕ್ಕುಗಳಿಗಿಂತಲೂ ಅವರ ಕರ್ತವ್ಯಗಳಿಗೆ ಹೆಚ್ಚು ಪ್ರಶಸ್ತಿ ಕೊಡುತ್ತಾರೆ. ಆದರೆ ಇದು ಅಷ್ಟೊಂದು ಜಾಣತನವಲ್ಲ. ನಾಗರಿಕ ಸ್ವಾತಂತ್ರ್ಯಗಳಿಗಾಗಿ ಕರ್ತವ್ಯಗಳಿವೆಯಲ್ಲದೆ, ಕರ್ತವ್ಯಪಾಲನೆಗಾಗಿ ಸ್ವಾತಂತ್ರ್ಯಗಳಿಲ್ಲ. ಸ್ವಾತಂತ್ರ್ಯವು ಮೂಲ ಬೆಲೆ; ಕರ್ತವ್ಯವು ಅದಕ್ಕೆ ಪೋಷಕವಾಗಬಲ್ಲ ಸಂಗತಿ. ರಾಜ್ಯವು ನಾಗರಿಕ ಸ್ವಾತಂತ್ರ್ಯಗಳ ಪರಿಪಾಲನೆಗಾಗಿ ಇರಬೇಕಾದ ಸಂಸ್ಥೆಯಲ್ಲದೆ ನಾಗರಿಕ ರಿಂದ ಕೇವಲ ಕರ್ತವ್ಯಗಳನ್ನು ಅಪೇಕ್ಷಿಸತಕ್ಕ ಸಂಸ್ಥೆಯಲ್ಲ. ಈ ಮಾತು ಎಲ್ಲ ಜನತಾ ರಾಜ್ಯಗಳಿಗೂ ಅನ್ವಯಿಸುತ್ತದೆ.

೭. ನಾಗರಿಕನ ಶೀಲ

ಉತ್ತಮ ನಾಗರಿಕತೆಯ ಶೀಲವನ್ನು ಒಂದು ಜನಾಂಗವು ಕಲಿಯಲು ಬಹುಕಾಲ ಬೇಕು. ಅದನ್ನು ಶಾಲೆ ಕಾಲೇಜುಗಳಲ್ಲಿಯಷ್ಟೇ ಕಲಿಯಬೇಕೆಂದಿಲ್ಲ. ಸಮಾಜದೊಳಗಿನ ಬಲ್ಲಿದರು ಮತ್ತು ಬಲ್ಲವರು ಇಟ್ಟುಕೊಂಡಿರುವ ಶೀಲವನ್ನೇ ಜನಾಂಗವು ಕ್ರಮೇಣ ಅನುಕರಣ ಮಾಡುತ್ತ ಹೋಗುತ್ತದೆ. ಹಿಂದುಸ್ತಾನದಂತಹ ದೇಶಗಳಲ್ಲಿ ನಾಗರಿಕತೆಯ ಶೀಲವು ಸಾಕಷ್ಟು ವೃದ್ಧಿ ಹೊಂದಿಲ್ಲ. ಇಂತಹ ದೇಶಗಳಲ್ಲಿ ಬಲ್ಲಿದರು ಮತ್ತು ಬಲ್ಲವರು ಎನಿಸಿದ ಕೆಲವೇ ಜನರಮೇಲೆ ಜನಾಂಗದ ನಾಗರಿಕ ನೀತಿಯನ್ನು ಸುಧಾರಿಸುವ ಗುರುತರ ವಾದ ಹೊಣೆಯಿದೆ.

ಸುಶೀಲ ನಾಗರಿಕರು ಮಾತ್ರ ಮಾನವನ ಸ್ವತಂತ್ರ ಚಟುವಟಿಕೆಗಳಿಗೆ ಆಸ್ಪದವೀಯುವ ಪ್ರಗತಿಪರ ರಾಜ್ಯ ಮತ್ತು ಸಮಾಜಗಳಲ್ಲಿ ನಿರ್ಮಾಣ ಮಾಡಬಲ್ಲರು. ಹಿಂದೆ ಆಗಿಹೋದ ಸಾಧುಸಂತರೂ, ಧರ್ಮೋಪದೇಶಕರೂ, ಹಿರಿಯರೂ, ಧುರಿಣರೂ, ಉತ್ತಮ ಶೀಲದ ಲಕ್ಷಣಗಳನ್ನು ಹೇಳಿದ್ದಾರೆ. ಆ ಮಾತುಗಳನ್ನೇ ಇಂದಿನ ಪರಿಸ್ಥಿತಿಗೆ ಹೊಂದಿಕೆಯಾಗುವಂತೆ ಇಂದಿನ ಬುದ್ಧಿವಂತರು ಹೇಳುತ್ತಿದ್ದಾರೆ. ಅವುಗಳ ಸ್ಥೂಲ ಇತ್ಯರ್ಥವನ್ನು ಇಲ್ಲಿ ಗ್ರಹಿಸಬೇಕಾಗಿದೆ.

ಪ್ರಾಮಾಣಿಕತನವೇ ಸ್ವತಂತ್ರ ನಾಗರಿಕನ ಗುರುತು. ತನ್ನ ಬುದ್ಧಿ ಭಾವನೆಗಳನ್ನು ಪ್ರಾಮಾಣಿಕತೆಯಿಂದ ವ್ಯಕ್ತಪಡಿಸುವವನೇ ಸ್ವತಂತ್ರನು. ಭಯದಿಂದ, ವಂಚಿಸುವ ಉದ್ದೇಶದಿಂದ, ದುರಭಿಮಾನದಿಂದ ಇಲ್ಲವೆ ದ್ವೇಷಾ ಸೂಯೆಯಿಂದ ವರ್ತಿಸುವವನಲ್ಲಿ ಪ್ರಾಮಾಣಿಕತೆಯಿರುವುದಿಲ್ಲ. ಅವನ ಕೃತಿಗಳಿಗೆ ಶಾಶ್ವತ ಬೆಲೆಯಿಲ್ಲ. ಶಾಶ್ವತ ಬೆಲೆಯಿರುವ ಕೃತಿಗಳೆಲ್ಲ ಪ್ರಾಮಾಣಿಕ ವ್ಯಕ್ತಿಗಳಿಂದಲೇ ಹೊರಬಿದ್ದಿವೆ. ತನ್ನ ಅನುಭವ ಮತ್ತು ಕಲ್ಪನಾ ಸಾಮರ್ಥ್ಯಗಳಿಗೆ ಪ್ರಾಮಾಣಿಕನಾಗಿರುವ ಕವಿಯು ಮಾತ್ರ ಹೃದಯಂಗಮ ಕವನಗಳನ್ನು ಕಟ್ಟಿದ್ದಾನೆ.ತನ್ನ ಕ್ರಿಯಾತ್ಮಕ ಚೇತನಕ್ಕೆ ಪ್ರಾಮಾಣಿಕನಾದ ಶಿಲ್ಪಿಯು ಮಾತ್ರ ಅಮರ ಶಿಲ್ಪಗಳನ್ನು ಕಟೆದಿದ್ದಾನೆ. ತನ್ನ ಬೌದ್ಧಿಕ ಸಾಮರ್ಥ್ಯಕ್ಕೆ ಪ್ರಾಮಾಣಿಕನಾದ ವಿಜ್ಞಾನಿಯು ಮಾತ್ರ ಅಗಾಧವಾದಸಂಶೋಧನೆಗಳನ್ನು ಮಾಡಿದ್ದಾನೆ. ಮನುಷ್ಯನು ತನ್ನ ಅಭಿರುಚಿಗೆ ಒಗ್ಗುವ ಚಟುವಟಿಕೆಯಲ್ಲಿ ಪ್ರಾಮಾಣಿಕತೆಯಿಂದ ಸಾಧಿಸುವ ಹಿರಿಮೆಯಲ್ಲಿಯೇ ಅವನ ಜೀವನ

ಸಾರ್ಥಕ್ಯವಿದೆ. ಇದೊಂದೇ ಬಗೆಯಿಂದ ಅವನು ರಾಜ್ಯ ಮತ್ತು ಸಮಾಜ ಗಳಿಗೆ ತನ್ನ ಹಿರಿದಾದ ಸೇವೆ ಸಲ್ಲಿಸಬಲ್ಲನು.

ಸ್ವತಂತ್ರ ಚಟುವಟಿಕೆಗಳಲ್ಲಿ ತನ್ಮಯನಾಗಿರುವ ನಾಗರಿಕನು ತನ್ನ ಚಟುವಟಿಕೆಗಳ ಮೇಲೆ ರಾಜ್ಯ ಇಲ್ಲವೆ ಸಮಾಜವು ತರುವ ಒತ್ತಾಯವನ್ನು ಧಿಃಕರಿಸುವುದು ಯೋಗ್ಯ. ಆದರೆ ಆ ಮೊದಲು ಅವನು ತನ್ನ ಕೃತಿಗಳ ನೈತಿಕ ತಳಹದಿ ಭದ್ರವಾಗಿದೆಯೋ ಹೇಗೆಂಬುದನ್ನು ಸ್ವವಿಮರ್ಶೆ ಮಾಡಿ ನೋಡಬೇಕು. ತನ್ನ ಚಟುವಟಿಕೆಯು ಪರರ ಜೀವ, ಆರೋಗ್ಯ, ಆಸ್ತಿ, ಮರ್ಯಾದೆಗಳಿಗೆ ಧಕ್ಕೆ ತರದಂತೆ ಎಚ್ಚರವಾಗಿರಬೇಕು. ತನ್ನ ಪ್ರಾಮಾಣಿಕ ಚಟುವಟಿಕೆಗಳಿಗೆ ಎರಡನೆಯವರಿಂದ ತಡೆಯುಂಟಾಗಬಾರದೆಂದು ಆಗ್ರಹ ಪಡುವ ನಾಗರಿಕನು ಇತರ ನಾಗರಿಕರ ಪ್ರಾಮಾಣಿಕ ಅಭಿಪ್ರಾಯಗಳನ್ನು ತಾಳ್ಮೆಯಿಂದ ಎದುರಿಸುವ ಶಿಸ್ತನ್ನೂ ಪಾಲಿಸಬೇಕಾಗುತ್ತದೆ. ತನ್ನನಂತೆಯೇ ಇತರರು ಎಂಬ ನುಡಿಯಂತೆ ಅವನು ನಿತ್ಯ ಜೀವಿಸಬೇಕಾಗುತ್ತದೆ.

ನಾಗರಿಕನು ರಾಜಕೀಯ ಚಟುವಟಿಕೆಗಳಲ್ಲಿಯೂ ಸಾಮಾಜಿಕ ಚಟು ವಟಿಕೆಗಳಲ್ಲಿಯೂ ಆಸ್ಥೆ ವಹಿಸಬೇಕು. ಉತ್ತಮರ ಅನಾಸ್ಥೆಯಿಂದ ಹಲವು ರಾಷ್ಟ್ರಗಳಲ್ಲಿ ದುಷ್ಟರು ಪ್ರಬಲರಾದ ನಿದರ್ಶನಗಳಿವೆ. ಮತದಾನ ಮಾಡು ವಲ್ಲಿ, ಚುನಾವಣೆಯ ಪ್ರಚಾರದಲ್ಲಿ, ಸಾರ್ವಜನಿಕ ಸಭೆಗಳಲ್ಲಿ, ವ್ಯವಸಾ ಯದ ಸಂಘ ಸಂಸ್ಥೆಗಳಲ್ಲಿ ನಾಗರಿಕನು ತಕ್ಕ ಆಸ್ಥೆ ವಹಿಸುವುವರಿಂದ ಅವ ನಿಗೆ ತೃಪ್ತಿದೊರೆಯುವುದಲ್ಲದೆ ಸಾಮೂಹಿಕ ಹಿತವೂ ಸಾಧಿಸುವುದು.

ನಾಗರಿಕನು ಸೈನಿಕನಾಗಲು, ಚುನಾವಣೆ ಅಧಿಕಾರಿಯಾಗಲು, ನ್ಯಾಯಾಲಯದಲ್ಲಿ ಜ್ಯೂರಿಯಾಗಿ ಕೆಲಸ ಮಾಡಲು, ಜನಗಣತಿನಡೆಸಲು, ಪಂಚನಾಗಲು ಯಾವಾಗಲೂ ಸಿದ್ಧನಿರಬೇಕು ಒಂದು ವೇಳೆ ಸಾರ್ವಜ ನಿಕ ಸೇವಕನಾಗಿ ಕಾರ್ಯಮಾಡುವ ಪ್ರಸಂಗವೊದಗಿದರೆ ಅವನು ನಿಷ್ಪ ಕ್ಷಪಾತತನ, ದಕ್ಷತೆ, ತಾಳ್ಮೆ ಮತ್ತು ಜಾಣ್ಮೆಯಿಂದ ಕಾರ್ಯಮಾಡಬೇಕು.

ನಾಗರಿಕನು ಸಾರ್ವಜನಿಕ ಸ್ಥಳಗಳಲ್ಲಿ ವ್ಯವಹರಿಸುವಾಗ ಅಲ್ಲಿಯ ಸ್ವಚ್ಛತೆ ಮತ್ತು ಶಾಂತತೆಗಳನ್ನು ಕಾಯ್ದುಕೊಂಡು ಹೋಗಬೇಕು. ಬಹಳ ಜನರು ಒಂದೇ ವಸ್ತುವನ್ನು ಒಂದೇ ಸ್ಥಳದಿಂದ ಪಡೆಯಬೇಕಾದ ಕಾಲಕ್ಕೆ ನಾಗರಿಕನು ಸಾಲಿನಲ್ಲಿ ನಿಂತು ತನ್ನ ಸರತಿ ಬಂದಾಗ ಅದನ್ನು ಪಡೆಯ

ಬೇಕು. ಈ ವಿಷಯದಲ್ಲಿ ಹಿಂದೀಯರು ಬಹಳ ಕಲಿಯುವುದಿದೆ. ಚಿತ್ರ ಮಂದಿರಗಳಲ್ಲಿ, ಸಭಾಮಂದಿರಗಳಲ್ಲಿ, ಇಲ್ಲವೆ ರೇಲ್ವೆಗಳಲ್ಲಿ ಕುಳಿತಾಗ ಜನರು ಉಗುಳುವುದು, ಎತ್ತರಧ್ವನಿಯಲ್ಲಿ ಮಾತಾಡುವುದು ಇಲ್ಲವೆ ಒಬ್ಬರನ್ನೊಬ್ಬರು ನೂಕುವುದನ್ನು ದಿನಾಲು ಕಾಣುತ್ತೇವೆ. ಈ ಬಗೆಯ ವರ್ತನೆಗೂ ಯುದ್ಧಕಾಲದಲ್ಲಿ ಹಿಂದುಸ್ಥಾನಕ್ಕೆ ಬಂದ ಪಾಶ್ಚಿಮಾತ್ಯ ಸೈನಿಕರ ವರ್ತನೆಗೂ ಮಹದಂತರವಿದೆ. ಅವರು ಸಾಲಿನಲ್ಲಿ ನಿಂತು ಶಾಂತವಾಗಿ ಚಿತ್ರ ಮಂದಿರಗಳೊಳಗೆ ಪ್ರವೇಶಿಸುತ್ತಿದ್ದರು. ಚಿತ್ರ ಪ್ರಾರಂಭವಾಗುವ ಮುನ್ನ ಅವರು ಒಬ್ಬರಿಗೊಬ್ಬರು ಮಾತಾಡುತ್ತಿದ್ದರೂ ಅವರ ಮಾತು ಮಂದಿರದ ಶಾಂತತೆಗೆ ಭಂಗ ತರುವಷ್ಟು ಎತ್ತರ ಧ್ವನಿಯಲ್ಲಿರುತ್ತಿದ್ದಿಲ್ಲ. ಅಲ್ಲಿ ಕುಳಿತಾಗ ಒಂದು ವೇಳೆ ತಿನಸುಗಳನ್ನು ತಿಂದರೆ ಅವರು ಸಿಪ್ಪೆಯನ್ನು ಅಲ್ಲಿಯೇ ಬಿಸುಟದೇ ತಮ್ಮ ಕಿಸೆಯಲ್ಲಿ ತೆಗೆದುಕೊಂಡುಹೋಗಿ ನಿರ್ದಿಷ್ಟ ಸ್ಥಳದಲ್ಲಿ ಚಲ್ಲುತಿದ್ದುದು ಕಾಣಿಸುತ್ತಿತ್ತು. ಈ ಬಗೆಯ ಸಾರ್ವಜನಿಕ ವರ್ತನೆಯು ಅನುಕರಣೀಯವಾದುದಾಗಿದೆ.

ಪ್ರಜಾಪ್ರಭುತ್ವದ ರಾಜಕಾರಣವು ಹೆಚ್ಚಾಗಿ ಸಾರ್ವಜನಿಕ ಸಭೆಗಳಲ್ಲಿ ಪ್ರಕಟವಾಗುತ್ತದೆ. ಇಂತಹ ಸಭೆಗಳಲ್ಲಿ ತಾನು ಹೇಗೆ ವರ್ತಿಸಬೇಕೆಂಬುದನ್ನು ನಾಗರಿಕನು ತಿಳಿದಿರಬೇಕು. ತನ್ನ ಪಕ್ಷದ ಸಭೆಗಳಲ್ಲಿ ಅವನು ಯೋಗ್ಯ ಶಿಸ್ತು ಮತ್ತುಶಾಂತತೆಯನ್ನು ಕಾಯ್ದುಕೊಂಡುಹೋಗಲು ಪ್ರಯತ್ನಿಸಬೇಕು. ಎಲ್ಲರೂ ಭಾಷಣ ಕೇಳಲು ಅವಕಾಶವೊದಗಿಸಬೇಕು. ಸಭಿಕರು ಭಾಷಣಕಾರರಿಗೆ ಪ್ರಶ್ನೆಗಳನ್ನು ಕೇಳಲು ಅವಕಾಶ ಕೊಡಬೇಕು. ವಿರೋಧಿ ಪಕ್ಷದವರು ಕರೆದ ಸಭೆಗೆ ನಾಗರಿಕನು ಹೋಗಿದ್ದರೆ ಅಲ್ಲಿ ಅವನು ಶಾಂತ ರೀತಿಯಿಂದ ಭಾಷಣ ಕೇಳಬೇಕು. ಗದ್ದಲವೆನಿಸದ ರೀತಿಯಲ್ಲಿ ಭಾಷಣಕಾರರಿಗೆ ಪ್ರಶ್ನೆಗಳನ್ನು ಅವನು ಕೇಳಬಹುದು. ಭಾಷಣಕಾರರು ಉತ್ತರಿಸಬಹುದು ಇಲ್ಲವೆ ಉತ್ತರಿಸದೆ ಇರಬಹುದು. ಅದರ ತಪ್ಪು ಒಪ್ಪುಗಳನ್ನು ಸಭಿಕರೇ ಗ್ರಹಿಸಬಲ್ಲರು. ವಿರೋಧಿ ಪಕ್ಷದ ಸಭೆಯಲ್ಲಿ ತನಗೂ ಮಾತನಾಡಲು ಆಸ್ಪದ ಕೊಡಬೇಕೆಂದು ಹಟಹಿಡಿಯುವುದು ಅಸಭ್ಯತನ. ತನಗೆ ಏನಾದರೂ ಹೇಳುವುದಿದ್ದರೆ ಆದನ್ನು ನಾಗರಿಕನು ತಾನು ಕರೆದ ಸಭೆಯಲ್ಲಿ ಹೇಳಿಕೊಳ್ಳಬೇಕು. ಹಾಗೆ ಮಾಡದೆ ಎಲ್ಲ ಸಾರ್ವಜನಿಕ ಸಭೆಗಳಲ್ಲಿಯೂ ಎಲ್ಲರಿಗೂ ಮಾತಾಡಲು ಅವಕಾಶವಿರಬೇಕೆಂದು ಬಯಸಿದರೆ ಅನಾವಶ್ಯಕ

ಗೊಂದಲಕ್ಕೆ ಕಾರಣವಾಗುವುದಲ್ಲದೆ ಸಭೆಯಲ್ಲಿ ಅಭಿಪ್ರಾಯ ವ್ಯಕ್ತಮಾಡಲು ಸಹಾಯಕವಾಗುವುದಿಲ್ಲ.

ಸಮಾಜದ ಧುರೀಣರು ಮತ್ತು ರಾಜಕಾರಣಿಗಳು ವ್ಯಕ್ತಮಾಡುವ ತತ್ವಗಳನ್ನೂ ಅಭಿಪ್ರಾಯಗಳನ್ನೂ ನಾಗರಿಕನು ಅವರ ಸಾರ್ವಜನಿಕ ಮತ್ತು ವೈಯಕ್ತಿಕ ಆಚರಣೆಗೆ ಹೋಲಿಸಿ ನೋಡಬೇಕು. ಹೀಗೆ ಮಾಡದೆ ಇರುವುದು ಜಾಣತನವಲ್ಲ. ಸಾರ್ವಜನಿಕ ಜೀವನದಲ್ಲಿ ಕೆಲಸಮಾಡುವವರ ವೈಯಕ್ತಿಕ ವ್ಯವಹಾರಗಳನ್ನು ಎಣಿಸಕೂಡದೆಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. "ಇಲ್ಲಿ ಸಲ್ಲದವನು ಅಲ್ಲಿ ಸಲ್ಲನಯ್ಯಾ, ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನಯ್ಯಾ" ಎಂಬ ನುಡಿಯಂತೆ ವೈಯುಕ್ತಿಕ ಜೀವನವನ್ನೂ ಉತ್ತಮವಾಗಿಟ್ಟುಕೊಂಡ ಧುರೀಣನು ಸಾರ್ವಜನಿಕ ಜೀವನದಲ್ಲಿಯೂ ಉತ್ತಮನಾಗಿಯೇ ಉಳಿಯುವನು. ಗಾಂಧೀಜಿಯವರ ವೈಯಕ್ತಿಕ ಮತ್ತು ಸಾರ್ವಜನಿಕ ಜೀವನಗಳೆರಡೂ ಪರಿಶುದ್ಧವಾಗಿದ್ದುವು. ನಾಗರಿಕನು ಅಂತಹ ಆದರ್ಶ ಧುರೀಣರನ್ನೇ ಅನುಸರಿಸಬೇಕು. ಅನೀತಿವಂತ ಧುರೀಣರನ್ನು ಹಿಂಬಾಲಿಸುವ ಜನಾಂಗವು ಅಧೋಗತಿಯನ್ನು ಮುಟ್ಟುವುದರಲ್ಲಿ ಸಂದೇಹವಿಲ್ಲ.

ಮನುಷ್ಯನ ಸಾಂಘಿಕ ಜೀವನವನ್ನು ಪೋಷಿಸಲು ಅನೇಕ ಸಂಘಸಂಸ್ಥೆಗಳೂ ರಾಜಕೀಯ ಪಕ್ಷ ಪಂಗಡಗಳೂ ಇಂದು ಕಾರ್ಯಮಾಡುತ್ತಿವೆ. ಬ್ಯಾಂಕುಗಳು, ಸಹಕಾರಿ ಸಂಘಗಳು, ಮನರಂಜನೆಯ ಕ್ಲಬ್ಬುಗಳು, ವ್ಯಾಸಂಗ ಕೂಟಗಳು, ಕ್ರೀಡಾಭವನಗಳು, ಸಾಂಸ್ಕೃತಿಕ ಗುಂಪುಗಳು ಮೊದಲಾದವುಗಳೆಲ್ಲ ನಾಗರಿಕನ ಸಾಂಘಿಕ ಜೀವನಕ್ಕೆ ಪೋಷಕವಾಗಿವೆ. ಅವನು ತನಗೆ ಒಪ್ಪಿತವಾದ ಸಂಸ್ಥೆಯಲ್ಲಿ ಸೇರಲು ಸ್ವತಂತ್ರನು. ತಾನು ಸೇರಬಯಸುವ ಸಂಸ್ಥೆಯ ಗೊತ್ತುಗುರಿಗಳನ್ನೂ ಚಟುವಟಿಕೆಗಳನ್ನೂ ಶಿಸ್ತಿನ ನಿಯಮಗಳನ್ನೂ ಅವನು ಅರಿತುಕೊಳ್ಳಬೇಕು. ಅವು ತನಗೆ ಸಮ್ಮತವಿದ್ದರೆ ಮತ್ತು ಅವುಗಳಂತೆ ತಾನು ನಡೆಯಲು ಸಿದ್ಧನಿದ್ದರೆ ಮಾತ್ರ ಅವನು ಆ ಸಂಸ್ಥೆಯಲ್ಲಿ ಸೇರಬೇಕು. ಇಲ್ಲವಾದರೆ ಅದರಲ್ಲಿ ಸೇರದೆ ದೂರ ಉಳಿಯಬೇಕು. ಒಂದು ವೇಳೆ ತಾನು ಸೇರ್ಪಡೆಯಾದ ಸಂಸ್ಥೆ ತನ್ನ ವೈಯಕ್ತಿಕ ಅಭಿರುಚಿಗೆ ಒಗ್ಗದ ರೀತಿಯಲ್ಲಿ ಕಾರ್ಯಮಾಡುವಂತೆ ಕಂಡುಬಂದರೆ ಅವನು ಆ ಸಂಸ್ಥೆಯ ಘಟನೆಗೆ ಅನುಗುಣವಾಗಿ ಅದನ್ನು ಮಾರ್ಪಡಿಸಲು ಪ್ರಯತ್ನಿಸಬಹುದು.

ಇಲ್ಲವಾದರೆ ಆ ಸಂಸ್ಥೆಯನ್ನು ಬಿಟ್ಟು ನೇರವಾಗಿ ಹೊರಗೆಬರಬಹುದು. ತನ್ನ ಪ್ರಾಮಾಣಿಕ ನಿಲುಮೆಗೆ ಆಸ್ಪದ ಕೊಡದೆ ಇರುವ ಸಂಸ್ಥೆಯಲ್ಲಿ ಉಳಿಯುವುದಕ್ಕಿಂತಲೂ ನಾಗರಿಕನು ಆ ಸಂಸ್ಥೆಯಿಂದ ದೂರವಿರುವುದು ಹೆಚ್ಚು ಗೌರವಯುಕ್ತ ಮಾರ್ಗ. ಒಂದು ಸಂಸ್ಥೆಯಲ್ಲಿ ಇರಬಯಸುವವನು ತನ್ನ ಸ್ವಾಭಿಮಾನಕ್ಕೆ ಉಚಿತವಾದ ರೀತಿಯಿಂದ ಅದರ ಉತ್ಕರ್ಷೆಗಾಗಿ ಪರಿಶ್ರಮಿಸಬೇಕು. ಆ ಸಂಸ್ಥೆಯನ್ನು ಅವನು ತನ್ನ ತಾತ್ಕಾಲಿಕ ಲಾಭದ ದೃಷ್ಟಿಯಿಂದ ನೋಡದೆ ಮಾನವನ ಆಕಾಂಕ್ಷೆಯ ಶಾಶ್ವತ ತೃಪ್ತಿಯ ದೃಷ್ಟಿಯಿಂದ ನೋಡಬೇಕು. ಅದರಲ್ಲಿಯೇ ಅವನ ಹಿರಿಮೆಯಿದೆ.

ಇಂದಿನ ನಾಗರಿಕ ಜೀವನದ ಬೇಡಿಕೆಗಳು ಹೆಚ್ಚಿವೆ. ಜನರ ಉಡಿಗೆ ತೊಡಿಗೆಗಳು, ಊಟಉಪಚಾರದ ವಸ್ತುಗಳು, ಪರಸ್ಪರ ಸಂಪರ್ಕದ ಅವಶ್ಯಕತೆಗಳು, ಮನರಂಜನೆಯ ಶೈಲಿಗಳು, ಶಿಕ್ಷಣದ ಅವಕಾಶಗಳು, ಆರೋಗ್ಯದ ಮಾರ್ಗ್ಗಗಳು ದಿನೇ ದಿನೇ ಹೆಚ್ಚುತ್ತ ನಡೆದಿವೆ, ಈ ಬೇಡಿಕೆಗಳನ್ನು ತೃಪ್ತಿಪಡಿಸಲು ಸಮೃದ್ಧ ಸಮಾಜಕ್ಕೆ ಮಾತ್ರ ಸಾಧ್ಯ. ಸಮಾಜದ ಸಾಂಪತ್ತಿಕ ಸಮೃದ್ಧಿ ಸಾಧಿಸಬೇಕಾದರೆ ನಾಗರಿಕರು ಪರಸ್ಪರ ಸಹಕಾರದಿಂದ, ದಕ್ಷತೆಯಿಂದ ಮತ್ತು ಸಂಘಟನಾಚಾತುರ್ಯದಿಂದ ಉದ್ಯೋಗ ತತ್ಪರರಾಗಬೇಕಾಗುತ್ತದೆ. ಪರಿಶ್ರಮವಿಲ್ಲದೆ ಸಂಪತ್ತು ಲಭಿಸದು. ಸಂಪತ್ತಿಲ್ಲದೆ ಬೇಡಿಕೆಗಳು ತೃಪ್ತಿಯಾಗಲಾರವು. ಅಂದಮೇಲೆ ಉತ್ತಮ ನಾಗರಿಕನು ಸಮಾಜದ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಲು ಒಂದಿಲ್ಲೊಂದು ಬಗೆಯಿಂದ ನಿರತನಾಗಿರಲೇಬೇಕು.

ಬಹು ಕಾಲದಿಂದ ನಾಗರಿಕನು ಕುಟುಂಬ ಜೀವಿಯಾಗಿದ್ದಾನೆ. ಹಿರಿಯರು ಕಿರಿಯರನ್ನು ಅಕ್ಕರೆಯಿಂದ ಪೋಷಿಸುತ್ತ ಬಂದಿದ್ದಾರೆ. ಕಿರಿಯರು ಹಿರಿಯರಿಂದ ಮಾರ್ಗದರ್ಶನ ಪಡೆಯುತ್ತ ಬಂದಿದ್ದಾರೆ. ಜನರು ಅನ್ಯೋನ್ಯ ಪ್ರೇಮಾದರಗಳಿಂದ ಕುಟುಂಬದಲ್ಲಿ ಜೀವಿಸುತ್ತ ಬಂದಿದ್ದಾರೆ. ಅಂದಮೇಲೆ ಕುಟುಂಬವೇ ಬೇಡವೆಂದು ಓಡಿಹೋಗುವವನು ಮನುಷ್ಯತ್ವದ ಪರಂಪರೆಯ ವಿರೋಧಿಯೆನಿಸುತ್ತಾನೆ. ಉತ್ತಮ ನಾಗರಿಕನು ಕುಟುಂಬದಿಂದ ದೊರೆಯುವ ಮಾನಸಿಕ ಮತ್ತು ದೈಹಿಕ ಪೋಷಣೆಯಿಂದ ತನ್ನ ಜೀವನದಲ್ಲಿ ನೆಮ್ಮದಿಯನ್ನು ಪಡೆಯುವನಲ್ಲದೆ, ಕುಟುಂಬದ ಸುಖದುಃಖಗಳಲ್ಲಿ ಸಮಭಾಗಿಯಾಗಿ ಮನುಷ್ಯತ್ವದ ಶ್ರೇಷ್ಠಗುಣಗಳನ್ನು ಪ್ರಕಟಗೊಳಿಸುವನು.

ಒಂದು ಕಾಲಕ್ಕೆ ಬಣ, ಜನಾಂಗ, ಜಾತಿ, ಪಂಥ, ವರ್ಗ ಮೊದಲಾದ ಭಾವನೆಗಳಿಂದ ಮಾನವನು ಪ್ರೇರಿತನಾಗಿದ್ದನು. ಇಂದಿಗೂ ಆ ಭಾವನೆಗಳು ಅಲ್ಲಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಕಾಣಿಸುತ್ತವೆ. ಹಿಂದೆ ಈ ಭಾವನೆಗಳು ಉಚಿತವೆನಿಸಿರಬಹುದಾದರೂ ಇಂದು ಅವು ಸಂಕುಚಿತವೆನಿಸಹತ್ತಿವೆ. ಇಂದಿನ ನಾಗರಿಕನು ಬಣ, ಜನಾಂಗ, ಜಾತಿ, ಪಂಥ, ವರ್ಗ ಮೊದಲಾದ ಭಾವನೆಗಳ ಪ್ರತ್ತ್ಯೇಕತೆಯ ಎಳೆತದಲ್ಲಿ ಸಿಕ್ಕಿದಾದರೆ ಅವನು ಮಾನವ ಕುಲವನ್ನೇ ವಿನಾಶಗೊಳಿಸುವ ಸಂಭವವಿದೆ. ಪ್ರತ್ತ್ಯೇಕತೆಯ ಭಾವನೆಯ ಬದಲಾಗಿ ಮಾನವ ಕುಲದ ಐಕ್ಯತೆಯ ಭಾವನೆಯು ಇಂದಿನ ನಾಗರಿಕನಲ್ಲಿ ಬಲಿಯಬೇಕಾಗಿದೆ. "ಮನುಷ್ಯರೆಲ್ಲರೂ ಒಂದೇ. ಈ ಲೋಕದಲ್ಲಿ ಹುಟ್ಟಿಬಂದವರೆಲ್ಲ ಇಲ್ಲಿ ಬಾಳಿಬದುಕಲು ಹಕ್ಕುದಾರರಾಗಿದ್ದಾರೆ. ಒಂದು ಜನಾಂಗ ಇನ್ನೊಂದು ಜನಾಂಗದ ಶೋಷಣೆ ಮಾಡುವುದಾಗಲಿ ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದ ಮೇಲೆ ಅಟ್ಟಹಾಸ ಮಾಡುವುದಾಗಲಿ ಒಳ್ಳೆಯದಲ್ಲ. ಎಲ್ಲರೂ ಸ್ವಾಭಿಮಾನಪೂರ್ಣ ಮತ್ತು ಸಹಕಾರಯುಕ್ತ ಜೀವನವನ್ನು ಸಾಗಿಸಲು ಸ್ವತಂತ್ರರು"………… ಎಂಬ ವಿಶಾಲ ದೃಷ್ಟಿಕೋನದಿಂದ ನಾಗರಿಕನು ತನ್ನ ರಾಷ್ಟ್ರ ಮತ್ತು ಜಗತ್ತಿನ ಆಗುಹೋಗುಗಳಲ್ಲಿ ತನ್ನ ಪಾತ್ರವಹಿಸಬೇಕು. ಇದೇ ನಾಗರಿಕನ ಉತ್ತಮ ಶೀಲ.

ಜಯ್–ಹಿಂದ್


KARNATAK GRANTHALAYA
DHARWAR

**ಸಹಾಯಕ ಗ್ರಂಥಗಳು.**

1. Grammar of Politics By H J. Laski.
2. Indian Constitution — 1950.
3. Fundamental Rights By Ramaswamy.

# ಶಬ್ದ ಕೋಶ.

Act, ಕಾಯ್ದೆ.
Administration, ಆಡಳಿತೆ.
Adult Suffrage, ವಯಸ್ಕ ಮತಾಧಿಕಾರ
Alien, ಅನ್ಯದೇಶಿಯು.
Anarchy, ಅರಾಜಕತೆ.
Aristocracy, ಮನ್ನೆಯರ ರಾಜ್ಯ
Art, ಕಲೆ.
Association, ಸಂಘ.
Audit, ಲೆಕ್ಕ ತಪಾಸಣೆ.
Authority, ಅಧಿಕಾರ.
Bicameral, ದ್ವಿಧರಾ.
Bill, ವಿಧೇಯಕ, ಮಸೂದೆ.
Budget, ಅಂದಾಜುಪತ್ರಿಕೆ, ಮುಂಗಡ ಪತ್ರಿಕೆ.
Cabinet, ಮಂತ್ರಿ ಪರಿಷತ್ತು.
Caste, ಜಾತಿ.
Citizen, ನಾಗರಿಕ, ಪೌರ.
Citizenship, ನಾಗರಿಕತೆ, ನಾಗರಿಕತ್ವ
Centralization, ಕೇಂದ್ರೀಕರಣ.
Civil Service, ಆಡಳಿತ ವರ್ಗ.
Class, ವರ್ಗ.
Collective, ಸಾಮೂಹಿಕ.
Committee, ಸಮಿತಿ.
Cooperation, ಸಹಕಾರ.
Contract, ಒಡಂಬಡಿಕೆ.
Control, ನಿಯಂತ್ರಣ.
Constitution, ರಾಜ್ಯಘಟನೆ, ಸಂವಿಧಾನ.
Constituency, ನಿರ್ವಾಚನ ಕ್ಷೇತ್ರ.
Compensation, ಲುಕ್ಸಾನ ಭರತಿ.
Decision, ನಿರ್ಣಯು.
Decentralization, ವಿಕೇಂದ್ರೀಕರಣ
Democracy, ಜನತಾರಾಜ್ಯ, ಲೋಕಸತ್ತಾತ್ಮಕ ರಾಜ್ಯ.
Department, ಶಾಖೆ.
Division of Power, ಅಧಿಕಾರ ವಿಭಜನೆ.
Duty, ಕರ್ತವ್ಯ.
Emergency, ಗಂಡಾಂತರ ಪ್ರಸಂಗ.
Election, ಚುನಾವಣೆ, ನಿರ್ವಾಚನ.
Equality, ಸಮತೆ.
Evolution, ಜೀವನ ಪರಿವರ್ತನ ಕ್ರಮ.
Executive, ಕಾರ್ಯಾಂಗ.
Expert, ತಜ್ಞ.
Family, ಕುಟುಂಬ.
Federal, ಸಂಯುಕ್ತ.
Finance, ವಿತ್ತ.
Flexible, ಶಿಥಿಲ.
Fraternity, ವಿಶ್ವಬಂಧುತ್ವ.
Freedom, ಸ್ವಾತಂತ್ರ್ಯ.
Government, ಸರಕಾರ.
High Court, ಉಚ್ಚತಮ ನ್ಯಾಯಾಲಯ.
International, ಅಂತರರಾಷ್ಟ್ರೀಯ
Joint family, ಸಂಯುಕ್ತ ಕುಟುಂಬ.
Judiciary, ನ್ಯಾಯಾಂಗ.
Law, ಶಾಸನ, ಕಾಯ್ದೆ, ವಿಧಾನ.

Legislature, ಶಾಸನಾಂಗ.
Legislative Assembly, ಶಾಸನ ಸಭೆ.
Liberty, ಸ್ವಾತಂತ್ರ್ಯ
License, ಸ್ವೇಚ್ಛೆ
Local Government, ಸ್ಥಾನಿಕ ಸರಕಾರ.
Majority, ಬಹುಸಂಖ್ಯಾಕ.
Member, ಸದಸ್ಯ.
Minority, ಅಲ್ಪಸಂಖ್ಯಾಕ.
Money Bill, ಧನ ವಿಧೇಯಕ.
Morality, ನೀತಿ.
No confidence, ಅವಿಶ್ವಾಸ.
Nation, ರಾಷ್ಟ್ರ.
Nationalism, ರಾಷ್ಟ್ರೀಯತ್ವ.
Nominate, ನಾಮಕರಣಮಾಡು
News Service, ಸುದ್ದಿ ವಿತರಣ ಸಂಸ್ಥೆ.
Oppeortunity, ಅವಕಾಶ.
Organization, ಸಂಘಟನೆ.
Party, ಪಕ್ಷ.
Plan, ಯೋಜನೆ.
Power, ಬಲ, ಅಧಿಕಾರ.
President, ರಾಷ್ಟ್ರಪತಿ, ಅಧ್ಯಕ್ಷ.
Programme, ಕಾರ್ಯಕ್ರಮ.
Policy, ಧೋರಣೆ.
Principle, ತತ್ವ.
Procedure, ರೀತಿ.
Property, ಆಸ್ತಿ.
Race, ಜನಾಂಗ.
Religion, ಧರ್ಮ.
Represent, ಪ್ರತಿನಿಧಿಸು.
Representation, ಪ್ರಾತಿನಿಧ್ಯ.
Representative, ಪ್ರತಿನಿಧಿ.
Revolution, ಕ್ರಾಂತಿ, ವಿಪ್ಲವ.
Region, ಪ್ರದೇಶ
Responsibility, ಹೊಣೆ.
Report, ವರದಿ.
Right, ಹಕ್ಕು, ಸ್ವಾತಂತ್ರ್ಯ.
Rigid, ಅಶಿಥಿಲ.
Rule, ನಿಯಮ.
Sanction, ಮಂಜೂರಿ.
Science, ವಿಜ್ಞಾನ.
Security, ಭದ್ರತೆ.
Society, ಸಮಾಜ.
Socialism, ಸಮಾಜವಾದ.
Sovereignty, ಪ್ರಭುತ್ವ.
Speaker, ಶಾಸನ ಸಭಾಧ್ಯಕ್ಷ
Stability, ಸ್ಥಿರತೆ.
State, ರಾಜ್ಯ.
Technical, ತಾಂತ್ರಿಕ.
Trade Union, ಕಾರ್ಮಿಕ ಸಂಘ.
Toleration, ವಿರೋಧಾಭಿಪ್ರಾಯ ಸಹಿಷ್ಣುತೆ.
Tribe, ಬಣ, ಜನಜಾತಿ, ಬಳಗ
Unitary, ಏಕತ್ರ.
Unity, ಐಕ್ಯ
Vote, ಮತ.
Voter, ಮತದಾತಾ.
Writ, ಲೇಖ.

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೮ | ೧೬ | ದೇಹ ರಚನೆಯ | ದೇಹ ರಚನೆಯು |
| ೨೧ | ೧೦ | ಬಂದ ಪರಂಪರಾಗತ | ಪರಂಪರಾಗತ |
| ೩೪ | ೧೦ | ಸಂಪತ್ತೆನಿಸವದು | ಸಂಪತ್ತೆನಿಸುವುದು. |
| ೩೪ | ೧೩ | ಅವನ್ನು | ಅದನ್ನು |
| ೩೬ | ೧೦ | ಕೊನೆಯ ಯುರೋಪದ | ಕೊನೆಯ ಭಾಗದಲ್ಲಿ ಯುರೋಪದ |
| ೪೨ | ೫ | ಜನರು | ಜನರಿಗೆ. |
| ೪೨ | ೨೫ | ಯುವು | ಯುದು |
| ೪೯ | ೩ | ಸ್ಪಸ್ಟವಿದೆ | ಸ್ಪಷ್ಟವಿದೆ. |
| ೪೯ | ೧೫ | ಅವನು | ಅವನ. |
| ೪೯ | ೧೫—೧೬ | ಅವನ ಅವನ | ಅವನ ತಿಳಿಯಬೇಕು. |
| ೫೦ | ೧೮ | ಈ ಸಂಸ್ಥಾನವು | ಈ ಸಂಸ್ಕಾರವು. |
| ೮೦ | ೬ | ರಕಾರದ | ಸರಕಾರದ |
| ೯೦ | ೧೧ | ಮಂದಿನ | ಮುಂದಿನ |
| ೯೮ | ೧೫ | ತೀವ್ರ ತಮ್ಮ | ತೀವ್ರತಮ |
| ೧೦೦ | ೨೭ | ಕಾಯ್ದೆ ಮಾಡಿ | ಕಾಯ್ದೆ |

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೮ | ೧೬ | ದೇಹ ರಚನೆಯ | ದೇಹ ರಚನೆಯು |
| ೨೧ | ೧೦ | ಬಂದ ಪರಂಪರಾಗತ | ಪರಂಪರಾಗತ |
| ೩೪ | ೧೦ | ಸಂಪತ್ತೆನಿಸವದು | ಸಂಪತ್ತೆನಿಸುವುದು. |
| ೩೪ | ೧೩ | ಆವನ್ನು | ಅದನ್ನು |
| ೩೬ | ೧೦ | ಕೊನೆಯ ಯುರೋಪದ | ಕೊನೆಯ ಭಾಗದಲ್ಲಿ ಯುರೋಪದ |
| ೪೨ | ೫ | ಜನರು | ಜನರಿಗೆ. |
| ೪೨ | ೨೫ | ಯುವು | ಯುದು |
| ೪೯ | ೩ | ಸ್ಪಸ್ಟವಿದೆ | ಸ್ಪಷ್ಟವಿದೆ. |
| ೪೯ | ೧೫ | ಅವನು | ಅವನ. |
| ೪೯ | ೧೫—೧೬ | ಅವನ ಅವನ | ಅವನ ತಿಳಿಯಬೇಕು. |
| ೫೦ | ೧೮ | ಈ ಸಂಸ್ಥಾನವು | ಈ ಸಂಸ್ಕಾರವು. |
| ೮೦ | ೬ | ರಕಾರದ | ಸರಕಾರದ |
| ೯೦ | ೧೧ | ಮಂದಿನ | ಮುಂದಿನ |
| ೯೮ | ೧೫ | ತೀವ್ರ ತಮ್ಮ | ತೀವ್ರತಮ |
| ೧೦೦ | ೨೭ | ಕಾಯ್ದೆ ಮಾಡಿ | ಕಾಯ್ದೆ |